# ...ದಾ ಪ್ರಕಟನಾಲಯದ ಪ್ರಕಟನೆಗಳು

| | | ಬೆಲೆ | | |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) .... .... | ೧ | ೪ | ೦ |
| ೨. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) ... .... | ೨ | ೪ | ೦ |
| ೩. | ಜೀವನ – ಕಲೆ * .... .... | ೧ | ೦ | ೦ |
| ೪. | ಮುಗುಳುನಗೆ * .... .... | ೧ | ೪ | ೦ |
| ೫. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) .... ... | ೧ | ೪ | ೦ |
| ೬. | ಆಲದ ಹೂ .... .... | ೧ | ೧೨ | ೦ |
| ೭. | ಹುಡುಗಾಟ .... .... | ೧ | ೪ | ೦ |
| ೮. | ಶವದ ಮನೆ .... .... | ೧ | ೪ | ೦ |
| ೯. | ಎದಿರೇಟು .... .... | ೧ | ೬ | |
| ೧೦. | ಸರ್ವಮಂಗಳಾ (ದ್ವಿತೀಯ ಮುದ್ರಣ) .... .... | ೩ | ೮ | |
| ೧೧. | ಕೇಡಿಗನ ಕಿಡಿಗಳು .... .... | ೧ | ೦ | |
| ೧೨. | ದೇವತೆಗಳು ನಕ್ಕಾಗ .... .... | ೧ | ೪ | |
| ೧೩. | ಜ್ವಾಲಾಮುಖಿಯ ಮೇಲೆ .... .... | ೪ | | |
| ೧೪. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ .... .... | | | |
| ೧೫. | ಹಾಳು – ಮೂಳು .... .... | | | |
| ೧೬. | ನಾಡಿಗೇರರ ನಗೆಬರಹಗಳು ೧ .... .... | | | |
| ೧೭. | ಮೋಹದ ಬಲೆಯಲ್ಲಿ .... .... | ೫ | | |
| ೧೮. | ಸಾವಿನೊಂದಿಗೆ ಸರಸ .... .... | ೧ | | |
| ೧೯. | ಅನುರಾಗ .... .... | ೧ | | |
| ೨೦. | ಬಿಡುಗಡೆಯ ಬೇಡಿ .... .... | ೩ | | |
| ೨೧. | ಜೋಳದ ಬೆಳೆಯ ನಡುವೆ .... .... | ೧ | ೪ | |
| ೨೨. | ಜರತಾರಿ ಜಗದ್ಗುರು .... .... | ೩ | ೧೨ | |
| ೨೩. | ಕಾನ್ವೆಂಟ್ ಗರ್ಲ್ .... .... | ೧ | ೦ | ೦ |
| ೨೪. | ಖಾನಾವಳಿಯ ನೀಲಾ .... .... | ೧ | ೦ | ೦ |
| ೨೫. | ರಂಗನಾಯಕಿ .... ... | ೨ | ೦ | ೦ |

ಪ್ರತಿಗಳು ಮುಗಿದಿವೆ.

೩೬. ಮದು: .... ೧ ೦

೩೭. ಕಲ್ಯಾಣಿ .... .... ೨ ೫ ೦

೩೮. ನೀ ನನ್ನ ಮುಟ್ಟಬೇಡ .... .... ೧ ೭ ೦

೩೯. ನನ್ನ ದೇವರು ('ಕುವೆಂಪು' ರವರ ಕಥಾಸಂಕಲನ) .... ೧ ೪

೪೦. ಕಾಮಿನಿ – ಕಾಂಚನ .... .... ೧ ೮ ೦

೪೧. ಜನಿವಾರ ಮತ್ತು ಶಿವದಾರ .... .... ೧ ೮

೪೨. ಮಲ್ಲಿ .... .... ೧ ೮

೪೩. ಆನಂದ ಲಹರಿ .... .... ೦ ೧೨

೪೪. ಸೀತಾ – ರತ್ನ .... .... ೦ ೧೨

೪೫. ನಾಡಿಗೇರರ ನಗೆಬರಹಗಳು ೨ .... .... ೧

೪೬. ನಾನು ಪೋಲೀಸನಾಗಿದ್ದೆ .... .... ೧

೪೭. ರಾಗಿಣಿ .... .... ೧

೪೮. ಪೂರ್ಣಚಂದ್ರ .... ....

# ಬಾಗಿಣೆ

ಕಾದಂಬರಿ

ಲೇಖಕರು:
ಭಾರತೀಪ್ರಿಯ

ಮುದ್ರಣ ಮತ್ತು ಪ್ರಕಾಶನ:
ಶಾರದಾ ಪ್ರಕಟನಾಲಯ
ಅರಳೇಪೇಟೆ, :: ಬೆಂಗಳೂರು – ೨.

# ಮುನ್ನುಡಿ

ಬಡಸಂಸಾರವೊಂದರಲ್ಲಿ ಹುಟ್ಟಿ, ಯಾವುದೋ ಭವ್ಯವಾದ ಬಯಕೆಯ ಕನಸನ್ನು ಕಂಡು, ಅದರ ಸೆಲೆಯನ್ನರಸಿಕೊಂಡು ಹೋಗಿ ಸಾಧಿಸಿದ ಕಲಾವಿದನೊಬ್ಬನ ರಾಗಜೀವನವನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದೇನೆ.

ಕಲೆ ಸತ್ಯಸಂಕಲ್ಪರಿಗಲ್ಲದೆ ಸಾಮಾನ್ಯರಿಗಲ್ಲವೆಂಬ ಮಾತು ಎಲ್ಲ ಕಾಲಕ್ಕೂ ನಿಜ. ಅದರ ಕೀರ್ತಿ ಎಷ್ಟು ಭವ್ಯವೋ ಸಾಧನೆ ಅಷ್ಟು ಭಯಂಕರ. ಅದಕ್ಕಾಗಿ ವ್ಯಕ್ತಿ ಮಾಡಬೇಕಾದ ತ್ಯಾಗವೂ ಅಪಾರವೇ. ಈ ಕೆಲಸದಲ್ಲಿ ಎಷ್ಟೋ ವೇಳೆ ಅವನು ತನ್ನ ಜೀವನವನ್ನೇ ಪಣವಾಗಿಟ್ಟು ಪ್ರತಿಕೂಲ ಸನ್ನಿವೇಶಗಳನ್ನೆದುರಿಸಿ ನಿಲ್ಲಬೇಕಾಗುತ್ತದೆ. ಕಲೆಯ ಸಿದ್ಧಿಗೆ ಆಂತರಿಕ ಪ್ರವೃತ್ತಿ ಸಹಕಾರಿಯಾಗುವಂತೆಯೇ ಬಾಹ್ಯ ಸನ್ನಿವೇಶಗಳೂ ನೆರವಾಗಬೇಕು. ಒಂದು ಅನುಕೂಲವಾಗಿದ್ದು, ಮತ್ತೊಂದು ಪ್ರತಿಕೂಲವಾಗಿ ಪರಿಣಮಿಸಿದರೆ ಘರ್ಷಣೆ ಅನಿವಾರ್ಯವಾಗುತ್ತದೆ; ವ್ಯಕ್ತಿ ತನ್ನೊಡನೆಯೂ ಹೊರಗಿನ ಶಕ್ತಿಗಳೊಡನೆಯೂ ಸಂತತವಾಗಿ ಹೋರಾಟ ನಡಸಬೇಕಾಗುತ್ತದೆ. ಈ ಹೋರಾಟದಲ್ಲಿ ಗೆದ್ದರೆ ಅವನನ್ನು ಕೀರ್ತಿ ವರಿಸುತ್ತದೆ; ಸಿದ್ಧಿಯ ಸ್ವಾದುಫಲ ಕೈಸೇರುತ್ತದೆ. ಸೋತರೆ ಅವನ ಗತಿ ಮುಗಿದಂತೆಯೇ. ಹೇಳಹೆಸರಿಲ್ಲವಾಗುವ ಅನಂತ ಅಜ್ಞಾತಕೋಟಿಗೆ ಅವನು ಸೇರಿಹೋಗುತ್ತಾನೆ.

ಕಲೆಯ ಹಾದಿ ಹೂವಿನ ಹಾಸಲ್ಲ, ಕಗ್ಗಲ್ಲಿನಿಂದಿಡಿದ ಪೆಡಸು ದಾರಿ ಎಂದು ತಿಳಿದೂ ಅಲ್ಲಿ ನಡೆಯಬೇಕಾದರೆ ಸಾಹಸ ಬೇಕು. ಆ ಸಾಹಸದೊಡನೆ ಅಷ್ಟೇ ಬಲವತ್ತರವಾದ ನಿರ್ಧಾರವೂ ಬೇಕು. ವಜ್ರಸಂಕಲ್ಪದಿಂದ ಸಾಧಿಸಲಾಗದಿರುವುದು ಯಾವುದೂ ಇಲ್ಲವೆನ್ನುವುದಕ್ಕೆ ಸಿದ್ಧಿಯನ್ನು ಕಂಡ ಕಲಾವಿದರ ಪ್ರತಿಭಾವಂತ ಜೀವನವೇ ಸಾಕ್ಷಿ.

ಇಂಥ ಒಂದು ಹೋರಾಟ ನಡಸಿ ಗೆದ್ದ ಒಬ್ಬ ವ್ಯಕ್ತಿಯ ಕಥೆಯೇ ಈ ಕಾದಂಬರಿಯ ವಸ್ತು.

ನಾನು ಈ ಕಾದಂಬರಿಯಲ್ಲಿ ಒಬ್ಬ ಮಹಾವ್ಯಕ್ತಿಯ ಜೀವನವನ್ನು

ಚಿತ್ರಿಸುವುದಕ್ಕೆ ಹೊರಟಿಲ್ಲ. ಕೇವಲ ಸಾಮಾನ್ಯನೆನಿಸಿ, ಹತ್ತರಲ್ಲಿ ಹನ್ನೊಂದಾಗಿ ಬಡತನದಲ್ಲಿ ತೊಳಲುತ್ತಿದ್ದ ಒಬ್ಬ ಹುಡುಗ ಆತ್ಮಪ್ರೇರಣೆಗೆ ತಲೆಬಾಗಿ ನಡೆದ ಬಗೆಯನ್ನೂ ಅವನ ಜೀವನ ವಿಕಾಸಗೊಂಡ ರೀತಿಯನ್ನೂ ಗುರುತಿಸಿದ್ದೇನೆ. ಪ್ರತಿಕೂಲ ಸನ್ನಿವೇಶಗಳನ್ನು ಗೆದ್ದು ವ್ಯಕ್ತಿ ಸಾಮಾನ್ಯತೆಯಿಂದ ಅಸಾಮಾನ್ಯ ತೆಗೆ ಮುಟ್ಟುವುದು ಸಾಧ್ಯವೆಂಬುದನ್ನು ಚಿತ್ರಿಸಲು ಯತ್ನಿಸಿದ್ದೇನೆ. ಮಧು ಸೂದನನನ್ನು ಮಹಾವ್ಯಕ್ತಿಯೆಂದಾಗಲಿ ಆದರ್ಶ ಪುರುಷನೆಂದಾಗಲಿ ಭಾವಿಸದೆ ಧ್ಯೇಯಲಗ್ನನಾದ ಒಬ್ಬ ಸಾಧಕ ಎನ್ನುವುದನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ಈ ತಥ್ಯ ಮನಸ್ಸಿಗೆ ಬಂದೀತು.

ಈ ಕಾದಂಬರಿಯಲ್ಲಿ ಕೆಲವು ಜೀವಂತ ಹಾಗೂ ಮೃತ ಸಂಗೀತ ವಿದ್ವಾಂಸರುಗಳ ಪ್ರಸ್ತಾವ ಬರುತ್ತದೆ. ಅವರಿಗೆ ಸಂಬಂಧಪಟ್ಟ ಹಾಗೆ ನಾನು ವರ್ಣಿಸಿರುವ ಘಟನೆಗಳಲ್ಲಿ ಸಂಗೀತ ಜೀವನದ ವಿವಿಧ ಮುಖಗಳನ್ನು ತೋರಿಸ ಲೆತ್ನಿಸಿದ್ದೇನೆ. ಪ್ರಾಸಂಗಿಕವಾಗಿ ಅಲ್ಲಲ್ಲೇ ಬಂದಿರುವ ವ್ಯಕ್ತಿ–ಸ್ವಭಾವಗಳ ಚಿತ್ರಣ ಕಥೆಯ ಒಟ್ಟು ವೈಕಟ್ಟಿಗೆ ಪೋಷಕವಾದೀತೆನ್ನುವುದೇ ನನ್ನ ಆಶಯ. ನಾದೋಪಾಸನೆಯನ್ನೇ ತಮ್ಮ ಜೀವಿತಧ್ಯೇಯವನ್ನಾಗಿ ಕೈಗೊಂಡು ಕೀರ್ತಿ ಭಾಜನರಾಗಿರುವ ಕಲಾವಿದರ ಬಗೆಗೆ ನನಗೆ ಗೌರವಭಾವವಲ್ಲದೆ ಅನ್ಯಭಾವನೆಗೆ ಅವಕಾಶವೇ ಇಲ್ಲ.

ಅಂತೆಯೇ, ಈ ಕೃತಿಯಲ್ಲಿ ಅಲ್ಲಲ್ಲೇ ಸಂಗೀತದ ಮತ್ತು ನಾಟ್ಯದ ಪ್ರಸ್ತಾವವೂ ಬರುತ್ತದೆ. ಕಥೆಯ ಬೆಳವಣಿಗೆಗೆ ಸಹಾಯಕವಾಗಿ ಈ ವಿಷಯ ಗಳನ್ನು ಎಷ್ಟು ಚರ್ಚಿಸಬಹುದೋ ಅಷ್ಟು ಚರ್ಚಿಸಿದ್ದೇನೆ. ಸಂಗೀತ ನಾಟ್ಯಗಳ ಶಾಸ್ತ್ರ ಪ್ರಕ್ರಿಯೆಗಳನ್ನಾಗಲಿ ತಂತ್ರವೈವಿಧ್ಯವನ್ನಾಗಲಿ ವಿಸ್ತಾರವಾಗಿ ಚರ್ಚಿಸು ವುದು ಇಲ್ಲಿನ ಉದ್ದೇಶವಲ್ಲ.

ನನ್ನ ಕಥೆಗಳನ್ನು ಮೆಚ್ಚಿಕೊಂಡಿರುವ ಕನ್ನಡಜನ ಈ ಕೃತಿಯನ್ನೂ ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬೆಂಗಳೂರು,
ತಾ|| ೧೫–೧೦–೧೯೫೪.

—ಭಾರತೀಪ್ರಿಯ.

೧

ವೆಂಕಮ್ಮನವರ ಜೀವಕ್ಕೆ ಸುಖವಿರಲಿಲ್ಲ.

ಗಂಡ ಇದ್ದಾಗ ಆಕೆ ಯಾವುದನ್ನೂ ಅಷ್ಟಾಗಿ ಹಚ್ಚಿಕೊಂಡಿರಲಿಲ್ಲ. ಮಹರಾಯರು ಹೇಗೋ ಎರಡು ಕೈಯಲ್ಲೂ ತಂದುಹಾಕುತ್ತಾರೆ ಎಂಬ ಭರವಸೆ ಊರೆಗೋಲಾಗಿತ್ತು. ಹೆಸರಿಗೆ ಪ್ರೈಮರಿ ಸ್ಕೂಲಿನ ಇಪ್ಪತ್ತೈದು ರೂಪಾಯಿ ಸಂಬಳದ ಮೇಷ್ಟರೇ ಆದರೂ ಹಿರಿಯರ ಕಾಲ್ದಿಂದ ಅನೂಚಾನ ವಾಗಿ ನಡೆದುಕೊಂಡು ಬಂದಿದ್ದ ವೈದಿಕವೃತ್ತಿಯನ್ನು ಅವರು ಬಿಟ್ಟಿರಲಿಲ್ಲ. ಒಪ್ಪೊತ್ತಿನ ಕೂಳಿಗೂ ಸಾಕಾಗದ ಸರ್ಕಾರೀ ಸಂಬಳದಲ್ಲಿ ಜೀವನ ನಡೆಯು ವುದು ಕಷ್ಟವೆಂಬುದು ಅವರಿಗೆ ಗೊತ್ತಿತ್ತು. ಅವರ ಭಾಗಕ್ಕೆ ಸರ್ಕಾರೀ ನೌಕರಿಯೇ ಜೀವನದ ಮೂಲಾಧಾರವಾಗಿರಲಿಲ್ಲ; ಅದೊಂದು ಉಪವೃತ್ತಿ ಯಾಗಿತ್ತು. ಏನೋ ಹೊತ್ತಿಗೆ ಸರಿಯಾಗಿ ಸಿಂಬಿ ಸುತ್ತಿಕೊಂಡು ಹೋಗಿ ಒಂದಿಷ್ಟು ಊದಿ ಬಂದರಾಯಿತು ಎನ್ನುವ ಮನೋಭಾವ ಅವರಲ್ಲಿ ನೆಲಸಿತ್ತು. ಅವರ ಆಸಕ್ತಿ ಲಕ್ಷ್ಯಗಳಿದ್ದುದೇ ಬೇರೆ ಕಡೆ. ವೈದಿಕವೃತ್ತಿ ಅವರಲ್ಲಿ ರಕ್ತಗತ ವಾಗಿತ್ತು. ಎಲ್ಲಿ ಒಂದು ಮದುವೆ, ಮುಂಜಿ, ಪ್ರಸ್ತ, ಪ್ರಯೋಜನವಾಗಲಿ ಅಲ್ಲಿ ರಮಣಾಚಾರ್ಯರು ಸಿದ್ಧ; ಎಲ್ಲಾದರೂ ಒಂದು ಘಟ ಉರುಳಿತೆಂದರೆ ಅಲ್ಲಿ ರಮಣಾಚಾರ್ಯರು ಹಾಜರು.

ಅವರಿಲ್ಲದೆ ಅಗ್ರಹಾರದಲ್ಲಿ ಯಾವ ಶುಭಾಶುಭ ಕರ್ಮಗಳೂ ನಡೆಯು

ವಂತಿರಲಿಲ್ಲ. ಒಳ್ಳೆಯದು ಕೆಟ್ಟದ್ದು ಎರಡಕ್ಕೂ ಜನ ಆಚಾರ್ಯರನ್ನು ನೆಚ್ಚಿಕೊಂಡಿದ್ದರು. ಅವರಿಗೆ ಪೂರ್ವಾಪರ ಪ್ರಯೋಗಗಳೆರಡೂ ಗೊತ್ತಿತ್ತು. ಅವರ ಕಾಲ ಪೂರ್ತಿ ಇದಕ್ಕೇ ವಿನಿಯೋಗವಾಗಿ ಸ್ಕೂಲಿಗೆ ಹೋಗುವುದು ಕೂಡ ಒಂದೊಂದು ಸಲ ತಾಪತ್ರಯಕ್ಕಿಟ್ಟುಕೊಳ್ಳುತ್ತಿತ್ತು.

ಈ ಪರಿಸ್ಥಿತಿ ಸಹಜವಾಗಿ ಅವರನ್ನು ರೇಗಿಸುತ್ತಿತ್ತು.

"ಈ ಹಾಳು ಸರ್ಕಾರೀ ಕೆಲಸಕ್ಕೆ ಎಳ್ಳು ನೀರು ಬಿಟ್ಟುಬಿಡಲೆ?"

ಎಂದು ಒಂದೊಂದು ವೇಳೆ ಹಾರಾಡುತ್ತಿದ್ದರು. ಪರಸ್ಪರ ತಾಳ ಮೇಳವಿಲ್ಲದ ಈ ಎರಡು ವೃತ್ತಿಗಳಿಗೆ ಘರ್ಷಣೆಯಾದಾಗ ಅವರ ಮನಸ್ಸು ರೋಸುತ್ತಿತ್ತು.

"ಅಯ್ಯೋ ಬೇಡಾಂದ್ರೆ, ನಾಲ್ಕು ಕಾಸು ಸಿಂಬಳನ್ನಾದರೂ ಬರತ್ತೆ. ಅದಕ್ಕೂ ಯಾಕೆ ಕಲ್ಲು ಹಾಕಿಕೊಳ್ಳುತ್ತೀರಿ? ಹೇಗೋ ಸವರಿಸಿಕೊಂಡು ಹೋಗಿ ಬನ್ನಿ."

ಎಂದು ವೆಂಕಮ್ಮ ಸಮಾಧಾನ ಹೇಳುತ್ತಿದ್ದರು.

"ಏನು ಸವರಿಸಿಕೊಳ್ಳೋದೇ, ವೆಂಕೂ? ಇವೊತ್ತು ರಾಯರ ಮನೇಲಿ ವೈಕುಂಠಸಮಾರಾಧನೆ. ಹೋಗದಿದ್ದರೆ ಕಾರ್ಯವಿಘಾತ. ಅಲ್ಲಿಗೆ ಹೋಗು ಅಂತೀಯಾ, ಇಲ್ಲಾ ಹಾಳು ಸಿಂಬಿ ಸುತ್ತಿಕೊಂಡು ಸ್ಕೂಲಿಗೇ ಹೋಗು ಅಂತೀಯಾ? ಮೊನ್ನೆಯೆಲ್ಲಾ ರಜವಾಯಿತು. ದಿನ ಬೆಳಗೆದ್ದರೆ ರಜಾ ಎಂದರೆ ಆ ಹೆಡ್ಮಾಸ್ಟರು ಸುಮ್ಮನೆ ಬಡಕೊಳ್ಳುತ್ತಾನೆ"

ಎಂದು ಬೇಸರದ ಧ್ವನಿಯಲ್ಲಿ ನುಡಿಯುತ್ತಿದ್ದರು.

ಅದಕ್ಕೆ ವೆಂಕಮ್ಮನವರ ಹತ್ತಿರ ಉತ್ತರವಿರುತ್ತಿರಲಿಲ್ಲ.

ಈ ವೃತ್ತಿ ಘರ್ಷಣೆ ತಪ್ಪುತ್ತಲ್ಲೂ ಇರಲಿಲ್ಲ.

ವೈದಿಕ ವೃತ್ತಿಗೆ ಇಷ್ಟು ಹಾತೊರೆಯುತ್ತಿದ್ದರೆಂದ ಮಾತ್ರಕ್ಕೆ ರಮಣಾಚಾರ್ಯರಲ್ಲಿ ದುರಾಶೆಯಿತ್ತೆಂದಲ್ಲ. ಬ್ರಾಹ್ಮಣ ಅಲ್ಪತೃಪ್ತ, ಕೊಟ್ಟಷ್ಟರಲ್ಲಿ ಸಂತುಷ್ಟನಾಗುತ್ತಾನೆ ಎನ್ನುವ ಹೆಸರಿತ್ತು. ಒಂದು ಶ್ರಾದ್ಧವನ್ನೇ ಮಾಡಿಸಲಿ, ಮದುವೆಯನ್ನೇ ಮಾಡಿಸಲಿ ತುಂಬ ಶ್ರದ್ಧೆಯಿಂದ, ಅಚ್ಚುಕಟ್ಟಾಗಿ ಮಾಡಿಸುತ್ತಿದ್ದರು. ಅದರಲ್ಲಿ ಯಾರ ಮನಸ್ಸಿಗೂ ಕಿರಿಕಿರಿಗೆ ಅವಕಾಶವಿರುತ್ತಿರಲಿಲ್ಲ. ಜೊತೆಗೆ ಯಾರು ಎಷ್ಟು ಕೊಟ್ಟರೆ ಅಷ್ಟೇ ಸಾಕು ಎಂದು ತೃಪ್ತಿಪಟ್ಟುಕೊಂಡು

ಬರುತ್ತಿದ್ದರು. ಇದು ಸಾಲದು, ಇಷ್ಟು ಬೇಕು ಎಂದು ಯಾವೊತ್ತೂ ಕೇಳಿದವರಲ್ಲ. ಕಾಡಿ ಬೇಡುವುದೆಂದರೆ ಅವರ ಮೈ ಜುಮ್ಮೆನ್ನುತ್ತಿತ್ತು, ಮನಸ್ಸಿಗೆ ಮುಜಗರವಾಗುತ್ತಿತ್ತು. ಈ ಗುಣದಿಂದಲೇ ಅವರು ಬಹುಜನಕ್ಕೆ ಬೇಕಾಗಿದ್ದರು.

ಈ ಸ್ವಭಾವವನ್ನೇ ಅವರ ಹೆಂಡತಿ ಒಮ್ಮೊಮ್ಮೆ ತಮ್ಮ ಟೀಕೆಯ ಒರೆಗಲ್ಲಿಗೂ ಇಡುತ್ತಿದ್ದುದು.

"ವೈದೀಕ ಬ್ರಾಹ್ಮಣ ಅಂತ ಹೋದ ಕಡೆ ಸಿಕ್ಕಿದ್ದನ್ನೆಲ್ಲಾ ಹಿಡಿದುಕೊಂಡು ಬಂದರೆ ಗೌರವ ಬರುತ್ತೆಯೇನೆ, ವೆಂಕೂ? ದೇವರು ಕೊಟ್ಟಷ್ಟರಲ್ಲಿ ತೃಪ್ತರಾಗಬೇಕು"

ಎನ್ನುತ್ತಿದ್ದರು ಆಚಾರ್ಯರು.

ಈ ವೇದಾಂತ ಹಂಡತಿಗೆ ಹಿಡಿಸುತ್ತಿರಲಿಲ್ಲ. ಆಕೆ ಗಂಡನನ್ನು ರೇಗಿಸುತ್ತ,

"ಈ ಸಾಮ್ರಾಜ್ಯಕ್ಕೆ ವೃತ್ತಿತಾನೇ ಯಾಕೆ? ಎಲ್ಲಾ ನೀವು ಭಗವಂತನಿಗೇ ಒಪ್ಪಿಸಿಬಿಡಿ ಸಾರ್ಥಕವಾಗತ್ತೆ. ನೋಡಿ ನೀವೂ ಇದೀರಿ, ಆ ಬಂಗಲಿ ಆಚಾರ್ರೂ ಇದಾರೆ. ಬ್ರಾಹ್ಮಣ ಒಂದು ಕಡೆ ಹೋದರೆ ಬರೀ ಕೈಯಲ್ಲಿ ಬಂದ ದಿನವೇ ಇಲ್ಲವೋ? ಸೌದೆಯೋ ಸೊಪ್ಪೋ ಕೊನೆಗೆ ಒಂದು ಅಡಿಕೆ ಗೋಟೋ. ಏನೂ ಇಲ್ಲದೆ ಇದ್ದರೆ ಒಂದು ದರ್ಭೆ ಕಂತೆ!"

ಎನ್ನುತ್ತಿದ್ದರು.

ಹೆಂಡತಿಯ ಮಾತಿಗ ಆಚಾರ್‍ಯರು ಗಹಗಹಿಸಿ ನಗುತ್ತಿದ್ದರು.

"ಅಯ್ಯೋ ಹುಚ್ಚಿ, ದರ್ಭೆಗೇನು ನಮ್ಮ ಮನೆಯಲ್ಲಿ ಬರ ಬಂದಿದೆಯೇನೆ? ಒಂದು ಹಸು ಮೇಯುವಷ್ಟು ಇದೆಯಲ್ಲಾ!"

"ಆದರೆ ನಾವು ಮೇಯುವುದಿಲ್ಲವಲ್ಲ ಅದನ್ನ"

ಎಂದು ವೆಂಕಮ್ಮ ಅದಕ್ಕೂ ಒಂದು ಕೋರಿ ಹಾಕಿ ಮಾತಿಗೆ ಮಾತು ಜೋಡಿಸುತ್ತಿದ್ದರು.

ಒಂದು ಗಳಿಗೆ ಬಿಟ್ಟು ಆಚಾರ್ಯರು,

"ನೋಡು, ಬಂಗಲಿ ಆಚಾರ್ರ ವಿಷಯ ಬೇರೆ. ಅವರು ದೊಡ್ಡ ಕಡೆ ಓಡಾಡುತ್ತಾರೆ. ಹೋದ ಬಂದ ಕಡೆ ಕೈತುಂಬ ಸಿಕ್ಕುತ್ತಲೂ ಇರುತ್ತದೆ.

ಅವರು ಆಸೆ ಪಡುವುದು ಸ್ವಾಭಾವಿಕವೇ. ಅವರು ಮಾಡುತ್ತಾರೆ ಅಂತ ನಾವೂ ಅವರ ಹಾಗೇ ಕುಣಿಯುವುದಕ್ಕೆ ಆಗುತ್ತದೆಯೆ ? ಅಥವಾ ಅದು ಸಾಧ್ಯವೋ ?"

ಆದರೆ ಆಕೆ ಅಷ್ಟಕ್ಕೇ ಸುಮ್ಮನಾಗುತ್ತಿರಲಿಲ್ಲ.

" ನಮಗೇನು ಹಿರಿಯರು ಗಂಟು ಮಾಡಿಟ್ಟಿದಾರೇನು ? ಏನೋ ಈಗ ದುಡಿದರೆ ಉಂಟು, ಇಲ್ಲದಿದ್ದರೆ ಇಲ್ಲ. ದೇವರು ಕಣ್ಣು ಬಿಟ್ಟು ನೋಡಿ ನಮಗೂ ಒಂದು ಕೊನೆ ಅಂತ ಕೊಟ್ಟಿದಾನೆ. ಅದರ ಅನು ತನು ನೋಡಬೇಕೋ ಬೇಡವೋ ? ನಾಳೆ ನಮ್ಮ ಕೈಕಾಲು ಉಡುಗಿದ ಸಮಯದಲ್ಲಿ ಅದು ನಮಗೆ ದಿಕ್ಕಾಗಬೇಕೋ ಇಲ್ಲವೋ ? ಇವೊತ್ತು ಇದ್ದ ಹಾಗೆ ನಾಳೆ ನಾವು ಇರುತೇವೆ ಅನ್ನೋ ನಂಬಿಕೆಯಾದರೂ ಏನು, ನೀವೇ ಹೇಳಿ ?"

" ನಿಜ ಕಣೆ ವೆಂಕೂ, ನಿಜ. ನಾನು ಇಲ್ಲ ಅನ್ನೊಲ್ಲ. ನಿನ್ನ ಹಕ್ಕೀನ ಸಾಕೋಕೆ ನಾನು ಬೇಡ ಅಂದೆನೆ ? ಅಂಗೈಯಲ್ಲಿ ಇಟ್ಟುಕೊಂಡು ಮುಂಗೈಯಲ್ಲಿ ಮುಚ್ಚಿಟ್ಟುಕೊಳ್ಳುತ್ತಾ ಇದ್ದೀ. ಅದಕ್ಕೆ ಆಗುವ ಉಪಚಾರವೆಲ್ಲಾ ಆಗುತ್ತಾ ಇಲ್ಲವೆ ? ಅದಕ್ಕೆ ಏನು ಅರೆಯಾಗಿದೆ ಹೇಳು ?"

ಎಂದು ಕೇಳುತ್ತಿದ್ದರು ಆಚಾರ್ಯರು.

ಅವರು 'ಹಕ್ಕಿ' ಎಂದಾಗ ಆಕೆಯ ಎದೆಯಲ್ಲಿ ಹರ್ಷ ಗರಿಕಟ್ಟಿ ಹಾರುತ್ತಿತ್ತು. ಅಲ್ಲಿ ಹಿಡಿಸಲಾಗದ ಅಭಿಮಾನ ಮುಖದ ಮೇಲೆ ಮಂದ ಹಾಸವಾಗಿ ಅರಳುತ್ತಿತ್ತು.

ಆದರೂ, ಮನಸ್ಸಿನಲ್ಲಿ ಒಪ್ಪಿದರೂ ಮಾತಿನಲ್ಲಿ ಒಪ್ಪಬಾರದೆಂದು ಗಂಡನ ಪ್ರಶ್ನೆಗೊಂದು ಉತ್ತರ ಜೋಡಿಸಿ ವೆಂಕಮ್ಮ,

" ಅರೆಯಾಗಿಲ್ಲ, ಕೊರೆಯಾಗಿದೆ. ನೀವು ಹೀಗೇ ಧರ್ಮರಾಯರ ಹಾಗೆ ಕೂತಿರಿ, ಗೊತ್ತಾಗತ್ತೆ "

ಎಂದು ಸರಕ್ಕನೆ ಹುಸಿಕೋಪ ತೋರಿ, ಮೂಗು ತಿರುಗಿಸುತ್ತಿದ್ದರು.

ಅಂಥ ವೇಳೆಗಳಲ್ಲಿ ಆಚಾರ್ಯರು ಹೆಂಡತಿಯ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದರು.

" ಅದೇನೂಂದ್ರೆ, ಹಾಗೆ ನೋಡುತೀರಿ ?"

ಎಂದು ಕೊಂಕಿದ ಧ್ವನಿಯಲ್ಲಿ ಕೇಳುತ್ತಿದ್ದರು ವೆಂಕಮ್ಮ.

ಆಚಾರ್ಯರು ಉತ್ತರ ಕೊಡುತ್ತಿರಲಿಲ್ಲ. ನಕ್ಕು ಸುಮ್ಮನಾಗುತ್ತಿದ್ದರು.

ಮುಖದ ಮೇಲೆ ತೇಲಿದ ಮುಗುಳ್ನಗೆ ಮರೆಯಾಗುವ ಮೊದಲೇ ಹೆಂಡತಿ ಮೂಗು ತಿರುಗಿಸಿದಾಗ ಫಳಚ್ಚನೆ ಹೊಳೆಯುತ್ತಿದ್ದ ಮೂಗುಬಟ್ಟು ಕತ್ತಲಿನಲ್ಲಿ ಮಿಂಚು ಬೆಳಗಿದಂತೆ ಅವರ ಎದೆಯನ್ನು ಬೆಳಗುತ್ತಿತ್ತು. ಅದರ ಕಾಂತಿಯಲ್ಲಿ ಅವರು ಕ್ಷಣಕಾಲ ಮೈಮರೆಯುತ್ತಿದ್ದರು. ಮನಸ್ಸಿನ ಅಂತರಾಳದಲ್ಲಿ ಸವಿ ನೆನಪಿನ ಸಣ್ಣ ಅಲೆ ಏಳುತ್ತಿತ್ತು.

ರಮಣಾಚಾರ್ಯರಿಗೆ ಹೆಂಡತಿಯನ್ನು ಕಂಡರೆ ತುಂಬ ಅಭಿಮಾನ. ಅದಕ್ಕೆ ಕಾರಣವಿಲ್ಲದೆಯೂ ಇರಲಿಲ್ಲ.

ಪ್ರಪಂಚದ ದೃಷ್ಟಿಯಲ್ಲಿ ಸಾಮ್ಯ ಮೀರಿದ್ದೆಂದು ತೋರಬಹುದಾದ ತಮ್ಮ ದಾಂಪತ್ಯದಲ್ಲಿ ಒಂದು ಕಹಿ ಪ್ರಸಂಗವನ್ನಾದರೂ ಅವರು ಕಂಡಿರಲಿಲ್ಲ. ಹಾಗೆಯೇ, ವಯಸ್ಸು ನೋಡದೆ ಮನೆತನ ನೋಡಿ ಹೆಣ್ಣು ಕೊಟ್ಟ ನಾಗೇಶ ರಾಯರು ಸ್ವಲ್ಪ ಹೆಚ್ಚು ಕಡಮೆ ತಮ್ಮ ತಮ್ಮನ ಹಾಗಿದ್ದ ಅಳಿಯನ ಸಂಸಾರ ನೋಡಿ ವ್ಯಥೆಪಡುವ ಕಾರಣವೂ ಇರಲಿಲ್ಲ. ಹದಿನೈದು ವರ್ಷದ ಹೆಣ್ಣು ಮೂವತ್ತೈದು ವರ್ಷದ ವರನ ಕೈಹಿಡಿದಾಗ ಈ ಸಂಸಾರದ ರಥಕ್ಕೆ ಈ ಚಕ್ರಗಳು ಸರಿಯೆ? ಅವು ಏರುಪೇರಾಗದೆ ಹೊಂದಿಕೊಳ್ಳುವುವೆ? – ಎಂದು ಸಂದೇಹಪಟ್ಟಿದ್ದವರಿಗೆ ಕೂಡ ಕೆಲವು ದಿನಗಳಲ್ಲೇ ಆ ಭ್ರಾಂತಿ ಅಳಿಸಿಹೋಗಿತ್ತು. ಹಾಗೆಯೇ ರಮಣಾಚಾರ್ಯರ ಮನಸ್ಸಿನಲ್ಲಿದ್ದ ಭ್ರಾಂತಿಯೂ ಅಳಿಸಿತ್ತು. ಯಾವುದೋ ಗೊಡ್ಡು ಹಟ ಹಿಡಿದು ಮದುವೆಯೇ ಬೇಡ ಎನ್ನುತ್ತಿದ್ದ ಬ್ರಾಹ್ಮಣನಿಗೆ ಈ ಮಧ್ಯವಯಸ್ಸಿನಲ್ಲಿ ಮದುವೆ ನೆಗಳುವುದಕ್ಕೂ ಯೋಗವಿತ್ತು.

ಇಷ್ಟಕ್ಕೂ ದಾಸರೇ ಕಾರಣ.

ಯೋಗ್ಯನಾದ ವರ ಸಿಕ್ಕದೆ ಊರು ಊರು ಕೇರಿ ಕೇರಿ ಅಲೆದಲೆದು ಬೇಸತ್ತಿದ್ದ ನಾಗೇಶರಾಯರಿಗೆ ದಾಸರು ಕುಚೋದ್ಯಕ್ಕಾಗಿ ರಮಣಾಚಾರ್ಯರ ಕಡೆ ತೋರಿಸಿದ್ದರು. ಅವರು ಯಾವಾಗಲೂ ಹಾಗೆಯೇ. ಮದುವೆಯಾಗುವುದಿಲ್ಲ ಎಂದು ಮೊಂಡು ಹಿಡಿದು ಕುಳಿತಿದ್ದ ಆಚಾರ್ಯರ ಮೇಲೆ ಕಂಡಕಂಡವರನ್ನೆಲ್ಲಾ ಛೂ ಬಿಟ್ಟು ತಮಾಷೆ ನೋಡುತ್ತಿದ್ದರು.

"ನನ್ನ ಸ್ವಾತಂತ್ರ್ಯ ನಿಮಗೆ ಕುಟುಕು ಮುಳ್ಳಾಗಿದೆಯೇನಪ್ಪಾ?"

ಎಂದು ಆಚಾರ್ಯರು ಕೇಳಿದರೆ ದಾಸರು ತಮ್ಮ ಡೊಳ್ಳುಹೊಟ್ಟೆ

ಕುಣಿಯುವಂತೆ ನಗುತ್ತ ಮಾತು ಹಾರಿಸುತ್ತಿದ್ದರು. ನಾಗೇಶರಾಯರನ್ನು ರಮಣಾರ್ಯರ ಕಡೆ ಅಟ್ಟಿದ ದಾಸರು ಒಂದು ಎಚ್ಚರಿಕೆಯನ್ನೂ ಕೊಟ್ಟಿದ್ದರು :

"ಅಲ್ಲೊಂದು ಯೋಗ್ಯ ವರ ಇದೆ, ವಿಚಾರಿಸಿ. ಆದರೆ ಇಸಂ ಸ್ವಲ್ಪ ಮೊಂಡು. ಬಲವಾಗಿ ಮೋಡಿ ಹಾಕದಿದ್ದರೆ ಬಗ್ಗುವುದಿಲ್ಲ"

ಇದನ್ನು ಕೇಳಿ ನಾಗೇಶರಾಯರು ತಮ್ಮ ಬತ್ತಳಿಕೆಯಲ್ಲಿದ್ದ ಅಸ್ತ್ರಗಳನ್ನೆಲ್ಲಾ ಚೆನ್ನಾಗಿ ಝಾಡಿಸಿಕೊಂಡು ಆಚಾರ್ಯರ ಮನೆಯ ಕಡೆಗೆ ದಂಡಯಾತ್ರೆ ಹೊರಟಿದ್ದರು. ವರಾನ್ವೇಷಿ ಕನ್ಯಾಪಿತೃಗಳಿಗೆಲ್ಲಾ ಈ ಮೊಂಡು ವರದ ಮನೆ ತೋರಿಸುತ್ತಿದ್ದ ದಾಸರ ಚೇಷ್ಟೆ ನೆರೆಹೊರೆಯವರಿಗೆ ಅರ್ಥವಾಗಿ ಅವರು ಈ ತಮಾಷೆ ನೋಡುತ್ತ ಒಳಗೊಳಗೇ ನಗುತ್ತಿದ್ದರೂ ನಾಗೇಶರಾಯರ ದಪ್ಪ ಬುದ್ಧಿಗೆ ಇದೊಂದೂ ಅರ್ಥವಾಗದೆ ಅವರು ಆಚಾರ್ಯರನ್ನು ಬಿಡದೆ ಬೆನ್ನು ಹತ್ತಿದ್ದರು, ಹಾಗೂ ಹೀಗೂ ಜಗ್ಗಾಡಿ ತಮಗೆ ಗೊತ್ತಿದ್ದ ಒರಟು ಪಟ್ಟುಗಳನ್ನೆಲ್ಲಾ ಹಾಕಿ, ಕೊನೆಗೆ ಯಾರಿಗೂ ಸಗ್ಗದ ಗೂಳಿಗೆ ಮೂಗುದಾರ ಹಾಕಿದ್ದರು. ದಾಸರು ಹೇಳಿದ್ದ ಹಾಗೆ ಬಲವಾಗಿ ಹಾಕಿದ್ದ ಮೋಡಿ ಕೆಂದಿತ್ತು.

"ಇದನ್ನೇ ಋಣಾನುಬಂಧವೆನ್ನುವುದು ಸ್ವಾಮಿ"

ಎಂದು ಮದುವೆಯಾದ ಮೇಲೆ ಬೀಗರ ಔತಣದ ಊಟ ಹೊಡೆದು, ತಾಂಬೂಲ ಹಾಕಿಕೊಂಡು ತೃಪ್ತಿಯಿಂದ ಹೊಟ್ಟೆಯ ಮೇಲೆ ಕೈ ಆಡಿಸುತ್ತ ದಾಸರು ನಾಗೇಶರಾಯರಿಗೆ ಹೇಳಿದ್ದರು.

"ನಿಜ ದಾಸರೇ. ಆದರೆ ನೀವು ಕೈಹಿಡಿಯದಿದ್ದರೆ ನಾನು ಒಂದು ಗಡ್ಡೆಗೆ ಬೀಳುತ್ತಿದ್ದೆನೆ ?"

"ನನ್ನ ಸಹಾಯವೇನು ಬಂತು ಸ್ವಾಮಿ ? ಮುಖ್ಯ ಕಂಕಣ ಕೂಡಿ ಬಂದಿತ್ತು. ನಮ್ಮ ರಮಣಾಚಾರ್ಯರ ವ್ರತವೂ ಮುಗಿದಿತ್ತು. ಎಲ್ಲಾ ಹರಿ ಸಂಕಲ್ಪ."

ಎಂದು ಆಚಾರ್ಯರ ಕಡೆ ನೋಡಿ ಮೂದಲಿಸುವ ಧ್ವನಿಯಲ್ಲಿ ನುಡಿದಿದ್ದರು ದಾಸರು. ತೊಂಡು ಸಲಗನನ್ನು ಹಳ್ಳಕ್ಕೆ ಕೆಡವಿದ ಬೇಟೆಗಾರನ ಹೆಮ್ಮೆಯಿತ್ತು ಆ ಧ್ವನಿಯಲ್ಲಿ.

ಹರಿಸಂಕಲ್ಪ ಎನ್ನುವ ಮಾತು ಆಚಾರ್ಯರ ಮನಸ್ಸಿಗೂ ಬಂದಿತ್ತು. ಮನುಷ್ಯ ಪ್ರಯತ್ನಕ್ಕೆ ಮೀರಿದ ಯಾವುದೋ ಒಂದು ಯೋಗದಿಂದ ನಡೆದ

ಈ ಮದುವೆ ಆಚಾರ್ಯರ ಬರಡಾಗಿದ್ದ ಬಾಳನ್ನು ಬೆಳಗಿಸಿ ದಾಸರಾಡಿದ್ದ ಮಾತನ್ನು ಹಲವು ವರ್ಷಗಳವರೆಗೆ ನೆನಪಿಗೆ ತರುತ್ತಿತ್ತು.

ದಾಸರಿಗೂ ಅವರಿಗೂ ಗಳಸ್ಯ ಕಂಠಸ್ಯ.

ನರಹರಿದಾಸರು ಎಂದರೆ ಮೈಸೂರಿನಲ್ಲಿ, ಅರಿಯದವರಿರಲಿಲ್ಲ. ವಾಸ ಹಳೇ ಅಗ್ರಹಾರದಲ್ಲೇ ಆದರೂ ಅವರು ಊರಲ್ಲಿ ಸಂಚಾರ ಮಾಡದಿದ್ದ ಸ್ಥಳವೇ ಇರಲಿಲ್ಲ. ನಿತ್ಯ ಯಾತ್ರೆಗೆ ದಿನಕ್ಕೊಂದು ಮೊಹಲ್ಲಾ ಗೊತ್ತುಮಾಡಿಕೊಂಡಿದ್ದರು. ಬೆಳಗ್ಗೆ ಅಷ್ಟು ಹೊತ್ತಿಗೇ ಎದ್ದು ಮುಖಮಾರ್ಜನೆ ಮಾಡಿಕೊಂಡು, ತುಳಸೀ ಮೃತ್ತಿಕೆ ಹಣೆಗೆ ಹಚ್ಚಿಕೊಂಡು, ಪ್ರಾತಃಸ್ತೋತ್ರ ಹೇಳುತ್ತ ತುಳಸೀ ದಳ ಬಿಡಿಸಿ ಇಟ್ಟುಕೊಂಡು ಸ್ನಾನಕ್ಕೇಳುತ್ತಿದ್ದರು. ಸ್ನಾನವಾದ ಮೇಲೆ ಆಹ್ನೀಕ, ದೇವರ ಪೂಜೆ. ಅತ್ತ ನರಸಕ್ಕನೂ ಉದಯ ರಾಗ ಹೇಳಿಕೊಳ್ಳುತ್ತ ಉಪಕರಣೆ ತೊಳೆದಿಟ್ಟು ಮೈತೊಳೆದುಕೊಂಡು ಅಡಿಗೆಗೆ ಸಿದ್ಧವಾಗುತ್ತಿದ್ದರು. ದಾಸರ ದೇವರ ಪೂಜೆ ಮುಗಿಯುವ ಹೊತ್ತಿಗೆ ಒಂದು ಲೋಟ ಕಾಫಿ ಹೇಗೋ ಸಿದ್ಧ ವಾಗುತ್ತಿತ್ತು. ದಾಸರು ಒಪ್ಪತ್ತು ಊಟವನ್ನಾದರೂ ಬಿಡುತ್ತಿದ್ದರು, ಕಾಫಿ ಬಿಡುವುದಕ್ಕೆ ಅವರ ಕೈಯಲ್ಲಿ ಆಗುತ್ತಿರಲಿಲ್ಲ. ಕಾಫಿ ಇಲ್ಲದೆ ಇದ್ದ ದಿನ ಅವರ ತಾಪತ್ರಯ ಹೇಳತೀರದು.

ಕಾಫಿ ಸೇವನೆಯಾಯಿತೆಂದರೆ ನಿತ್ಯ ಯಾತ್ರೆಗೆ ಹೊರಡುವುದೇ.

ಹೆಸರಿಗೆ ತಕ್ಕ ಹಾಗೆ ಗುಂಜಾ ನರಸಿಂಹನನ್ನು ಹೋಲುತ್ತಿದ್ದ ಮುಖ; ನರೆತ ಗಡ್ಡ; ಪ್ರಶಸ್ತವಾದ ಹೊಟ್ಟೆ; ಸ್ಥೂಲವಾದ ದೇಹ; ಸೋಪು ಕಾಣದೆ ಕೆಂಪು ಬಣ್ಣಕ್ಕೆ ತಿರುಗಿದ ಮೇಲುಕೋಟೆ ಅಂಚಿನ ಪಂಚೆ; ಮೈಯಲ್ಲಿ ದ್ವಾದಶ ನಾಮ; ತಲೆಗೆ ಪಾಗಿನ ಹಾಗೆ ಸುತ್ತಿ ಬೆನ್ನು ಮುಚ್ಚುವ ಹಾಗೆ ಇಳಿಬಿಡುತ್ತಿದ್ದ ಶೇಷವಸ್ತ್ರ; ಎಡಗೈಯಲ್ಲಿ ಚಿಟಿಕೆ ತಾಳ; ಅದೇ ತೋಳಿಗೆ ಬಲವಾದ ಜೋಳಿಗೆ; ಕಾಲಿಗೆ ಗೆಜ್ಜೆ; ಬಲಗೈಯಲ್ಲಿ ತಂಬೂರಿ – ದಾಸರು ಈ ವೃತ್ತಿವೇಷದಲ್ಲಿ ನಿತ್ಯವೂ ಬೆಳಗ್ಗೆ ಬೀದಿಗೆ ಇಳಿದರೆ ಯಾರಾದರೂ ಅವರನ್ನು ನಿಂತು ತಿರುಗಿ ನೋಡದೆ ಮುಂದೆ ಹೆಜ್ಜೆ ಹಾಕುವುದಕ್ಕೆ ಸಾಧ್ಯವೇ ಆಗುತ್ತಿರಲಿಲ್ಲ.

"ಏನು ದಾಸರೇ ಹೊರಟಿರಾ?"

ಇಂಟರ್ ಪರೀಕ್ಷೆಯಲ್ಲಿ ತಪ್ಪದೆ ಡುಂಕಿ ಹೊಡೆಯುತ್ತಿದ್ದ ಎದುರುಮನೆ ರಾಜು ಕೇಳುತ್ತಿದ್ದ.

" ಹ್ಞೂ, ಹೊರಟೇಪ್ಪಾ "

ದಾಸರು ದೇಶಾವರದ ನಗೆಬೀರಿ ಉತ್ತರಕೊಡುತ್ತಿದ್ದರು.

" ದಾಸರೇ ನಮಸ್ಕಾರ "

ಪಕ್ಕದ ಮನೆ ಶೇಷು ಧ್ವನಿ ಕಾಂಪೌಂಡಿನೊಳಗಿನಿಂದ ಕೇಳಬರುತ್ತಿತ್ತು.

" ನಮಸ್ಕಾರಾಪ್ಪಾ "

ಯಾರ ಉತ್ತರದಲ್ಲೂ ಕುಹಕವನ್ನು ಕಾಣದೆ, ಎಲ್ಲರ ಮಾತಿಗೂ ನಗು ನಗುತ್ತಲೇ ಉತ್ತರಕೊಡುತ್ತ ಹೋಗುತ್ತಿದ್ದರು ದಾಸರು.

ಒಂದು ಮನೆಯಲ್ಲಿ ಆರಂಭಿಸಿದ ದೇವರನಾಮುವನ್ನು ದಾಸರು ನಾಲ್ಕಾರು ಮನೆಗಳಿಗೆ ದಾಟಿಸುತ್ತಿದ್ದರು. ಮೊದಲನೆಯ ಮನೆಯಲ್ಲಿ ಪಲ್ಲವಿ ಕುರುಕುತ್ತಲೇ ತಳ್ಳಿದರೆ ಎರಡನೆಯ ಮನೆಗೆ ಅನುಪಲ್ಲವಿ ಮುಗಿಯು ತ್ತಿತ್ತು. ಇನ್ನು ಮೂರು ಮನೆಗಳಿಗೆ ಮೂರು ನುಡಿ ಹಂಚಿಬಿಡುತ್ತಿದ್ದರು. ಸರಕು ಹೆಚ್ಚಾಗಿರದೆ ಇದ್ದರೂ ಇದ್ದದ್ದರಲ್ಲೇ ಸಿಭಾಯಿಸುವ ಯುಕ್ತಿ ದಾಸರಿಗೆ ಸಹಜ ವಾಗಿ ಬಂದಿತ್ತು.

'' ಹರಿನಾಮ ಜಿಹ್ವೆಯೊಳಿರಬೇಕು । ನರನಾದ ಮೇಲೆ ''

'' ಊರಿಗೆ ಬಂದರೆ ದಾಸಯ್ಯಾ ನಮ್ಮ । ಕೇರಿಗೆ ಬಾ ಕಂಡ್ಯ ದಾಸಯ್ಯಾ ''

'' ಭಾಗ್ಯಾದ ಲಕ್ಷ್ಮೀ ಬಾರಮ್ಮ । ನಮ್ಮಮ್ಮ ಸೌಭಾಗ್ಯದಾ...''

'' ಭಕ್ತಿ ಬೇಕು ಅನು । ರಕ್ತಿಬೇಕು...''

ಯಾವ ದೇವರನಾಮ ಹಾಡಿದರೂ ಒಂದೇ ತರಹ: ದಾಸರದು ಗೊಗ್ಗರ ಧ್ವನಿ. ನಾಮುವನ್ನು ಅವರು ಒಮ್ಮೊಮ್ಮೆ ಖೇಚರಕ್ಕೆ ಮುಟ್ಟಿಸಿದಾಗ ಎರಡು ಧ್ವನಿ ಹೊರಟು ಇಬ್ಬರು ಹಾಡುವಂತೆ ಭಾನವಾಗುತ್ತಿತ್ತು. ಹುಡುಗರು ಯಾರಾದರೂ ಎದುರಿಗೆ ಇದ್ದರೆ ಫೊಳ್ ಎಂದು ನಕ್ಕುಬಿಡುತ್ತಿದ್ದರು. ದೊಡ್ಡವರು ಕಣ್ಣುಬಿಟ್ಟು ಅವರನ್ನು ಬೆದರಿಸುತ್ತಿದ್ದರು. ಆದರೆ ದಾಸರಿಗೆ ಅದರ ಪರಿವೆಯೇ ಇದ್ದಂತಿರಲಿಲ್ಲ ಆ ವಿಷಯದಲ್ಲಿ ಅವರು ಸಂಪೂರ್ಣ ಅನಾಸಕ್ತಿ ತಾಳಿದ್ದರು.

ದಾಸರು ಮನೆಯೊಳಗೆ ಬಂದಕೂಡಲೆ ಕೆಲವರು ಒಂದು ಹಿಡಿ ಅಕ್ಕಿ ಹಾಕಿ ಸಾಗಹಾಕುತ್ತಿದ್ದರು. ಇವರ ದೇವರನಾಮ ಕೇಳುವುದು ಅವರಿಗೆ ಬೇಕಾಗಿರ ಲಿಲ್ಲ. ಕೆಲವರಂತೂ ತಂಬೂರಿಧ್ವನಿ ಕೇಳಿದಕೂಡಲೆ ಬಾಗಿಲು ಹಾಕಿಕೊಳ್ಳು

ತ್ತಿದ್ದರು. ದಾಸರು ಅಂಥವರ ಮನೆಯ ಮೆಟ್ಟಲನ್ನೇ ಹತ್ತುತ್ತಿರಲಿಲ್ಲ. ಒಬ್ಬಿಬ್ಬರು ವಿಶ್ವಾಸಿಗಳು ದಾಸರು ಮನೆಗೆ ಬಂದಕೂಡಲೆ ಸ್ವಾಗತಿಸಿ ತಟ್ಟೆಯಲ್ಲಿ ಅಕ್ಕಿ ತಾಂಬೂಲ ದಕ್ಷಿಣೆ ತಂದು ಮುಂದಿಟ್ಟು ನಮಸ್ಕರಿಸುತ್ತಿದ್ದರು. ಅಂಥ ಕಡೆ ದಾಸರು ಕುಳಿತು ಒಂದು ಗಳಿಗೆ ಮಾತಾಡಿ ಹೋಗುತ್ತಿದ್ದುದೂ ಉಂಟು. ದಾಸರ ಕಾಫೀ ಚಟ ಬಲ್ಲ ಒಬ್ಬಿಬ್ಬರು ಅನುಕೂಲಸ್ಥರು ಒಂದು ಲೋಟ ಕಾಫಿ ಕೊಟ್ಟು ಕಳಿಸುತ್ತಿದ್ದುದೂ ಉಂಟು.

ಈ ಉಷ್ಣೋಪಚಾರ ಶಾಕಾಯ ಲವಣಾಯದಿಂದಲೇ ದಾಸರ ಸಂಸಾರ ಸಾಗಬೇಕಾಗಿತ್ತು. ಅಕ್ಕಿಯೇನೋ ತಿಂಗಳಿಗಾಗಿ ಮಿಗುವಷ್ಟು ಇರುತ್ತಿತ್ತು. ಹೆಚ್ಚು ಅಕ್ಕಿ ಸಂಗ್ರಹವಾದರೆ ದಾಸರು ಅದನ್ನು ಅಗ್ರಹಾರದ ಲಿಂಗಣ್ಣನ ಅಂಗಡಿಗೆ ಹಾಕುತ್ತಿದ್ದರು. ಕೈಯಲ್ಲಿ ಕಾಸು ಓಡಾಡುವುದು ಕಡಮೆ ಯಾದರೂ ಹೊಟ್ಟೆಗೆ ಬಟ್ಟೆಗೇನೂ ದಂಪತಿಗಳಿಗೆ ಕೊರತೆಯಿರಲಿಲ್ಲ. ಈ ಭಾಗದಲ್ಲಿ ರಘುಣಾಚಾರ್ಯರ ಸಹಾಯವನ್ನು ದಾಸರು ಮರೆಯಲು ಸರ್ವಥಾ ಸಾಧ್ಯವಿರಲಿಲ್ಲ.

ಅಪರಿಚಿತರಾದ ಈ ಇಬ್ಬರಲ್ಲಿ ಪರಸ್ಪರ ಸ್ನೇಹ ಬೆಳೆಯುವುದಕ್ಕೆ ಅನಿರಿಕ್ಷಿತವಾದ ಒಂದು ಘಟನೆ ಕಾರಣವಾಯಿತು.

ನರಹರಿದಾಸರು ಮೈಸೂರಿನವರಲ್ಲ; ಮುಳಬಾಗಲು ಕಡೆಯವರು. ಜೀವನಾನ್ವೇಷಿಯಾಗಿ ಅಲೆಯುತ್ತ ಬಂದು ಅವರು ಮೈಸೂರು ಸೇರಿದ್ದರು. ಅಗ್ರಹಾರದಲ್ಲಿ ಐದು ರೂಪಾಯಿ ಬಾಡಿಗೆಗೆ ಒಂದು ಮನೆ ಗೊತ್ತು ಮಾಡಿ ಕೊಂಡು ಸಂಸಾರ ಹೂಡಿದ್ದರು. ನರಸಕ್ಕನ ಹೊಟ್ಟೆಯಲ್ಲಿ ಮಕ್ಕಳಾಗಲೇ ಇಲ್ಲ. ಆಕೆಯೇನೋ ಮಕ್ಕಳಿಗಾಗಿ ಕೆಲವುಕಾಲ ಹಂಬಲಿಸಿದರಾದರೂ ದಾಸರು ಆ ಯೋಚನೆಯೇ ಇಲ್ಲದೆ ನಿರಾಳವಾಗಿ ಇದ್ದುಬಿಟ್ಟಿದ್ದರು.

"ಈ ಜನ್ಮದಲ್ಲಿ ಪುತ್ರಯೋಗವಿಲ್ಲ. ಒಳ್ಳೆಯದೇ ಆಯಿತು. ನಾವೇ ತಿರಿಯುವಾಗ ಮಕ್ಕಳಿಗೇನು ಹಾಕುವುದು? ದೇವರು ಇದನ್ನು ನೋಡಿಯೇ ನಮಗೆ ಮಕ್ಕಳನ್ನು ಕೊಡಲಿಲ್ಲ. ನಾಲ್ಕು ಜನಕ್ಕೆ ಒಳ್ಳೆಯವರಾಗಿದ್ದು ಹರಿ ಹರಿ ಎಂದು ಕಣ್ಣು ಮುಚ್ಚಿಕೊಂಡರೆ ಯಾರಾದರೂ ಒಂದು ಗತಿ ಕಾಣಿಸುತ್ತಾರೆ" ಎನ್ನುವುದು ಅವರ ವೇದಾಂತವಾಗಿತ್ತು. ಇನ್ನೂ ಚಪಲ ಬಿಡದಿದ್ದ

ನರಸಕ್ಕನ ಮನಸ್ಸು ಈ ವೇದಾಂತವನ್ನು ಸುಲಭಕ್ಕೆ ಒಪ್ಪದಿದ್ದರೂ ತಮ್ಮ ಬಾಳಿನಲ್ಲಿ ನಿಜವಾಗಿದ್ದ ಈ ಪರಿಸ್ಥಿತಿಗೆ ಅವರು ತಲೆಬಾಗದೆ ವಿಧಿಯೇ ಇರಲಿಲ್ಲ.

ಅಗ್ರಹಾರದ ಬೀದಿಯಲ್ಲಿ ಮೂರನೆಯ ಮನೆಯೇ ರಮಣಾಚಾರ್ಯರ ಮನೆ. ಆ ಸಾಲಿನಲ್ಲಿ ಕೊನೆಯ ಮನೆಯೇ ದಾಸರದು. ದಾಸರು ಆ ಮನೆಗೆ ಬಂದು ಸೇರಿದ್ದನ್ನು ಯಾರೂ ಅಷ್ಟಾಗಿ ಗಮನಿಸಲಿಲ್ಲವಾದರೂ ದಾಸರ ಮೇಲೆ ಇಡೀ ಅಗ್ರಹಾರದ ದೃಷ್ಟಿ ಬೀಳಲು ಬಹುಕಾಲ ಹಿಡಿನಲಿಲ್ಲ.

ಆ ಬೇಸಗೆಯಲ್ಲಿ ಮೈಸೂರಿನಲ್ಲಿ ಅಲ್ಲಲ್ಲೇ ಹಾವಳಿ ಮಾಡುತ್ತಿದ್ದ ಪ್ಲೇಗು ಅಗ್ರಹಾರಕ್ಕೆ ಪ್ರವೇಶಿಸಿ ನಾಲ್ಕಾರು ಜೀವಗಳನ್ನು ಬಲಿ ತೆಗೆದುಕೊಂಡು ಬೀದಿ ಬೀದಿಗೆ ಹಬ್ಬಿತು. ರಮಣಾಚಾರ್ಯರ ತಾಯಿ ಗೋದೂಬಾಯಿಗೆ ಜ್ವರ ಬಂದು ಗಡ್ಡೆ ಕಾಣಿಸಿಕೊಂಡಾಗ ಬೀದಿಯ ಜನವೇ ನಡುಗಿ ಹೋಯಿತು. ಯಾರೂ ಏನೂ ಮಾಡಲು ಸಾಧ್ಯವಾಗಲಿಲ್ಲ. ಮಡಿ ಮಡಿ ಎಂದು ಮೂರು ಹೊತ್ತೂ ಸಾಯುತ್ತಿದ್ದ ಮುದುಕಿ ಆಸ್ಪತ್ರೆಯ ಔಷಧಿಯನ್ನಾಗಲಿ ಇಂಜೆಕ್ಷನ್ನನ್ನಾಗಲಿ ತೆಗೆದುಕೊಳ್ಳದೆ ಮೊಂಡಾಟಮಾಡಿ ಎರಡೇ ದಿನಕ್ಕೆ ಕಣ್ಣುಮುಚ್ಚಿಕೊಂಡಿತು. ಬೀದಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬ್ರಾಹ್ಮಣರಿದ್ದರೂ ಒಬ್ಬನೂ ಹೊರಗೆ ತಲೆ ಹಾಕಲಿಲ್ಲ. ದಿನಕ್ಕೆ ನಾಲ್ಕು ಹೆಣ ಹೊರುತ್ತಿದ್ದ ಸುಬ್ಬಾಚಾರಿಯಾಗಲಿ, ಅಪರ ಕರ್ಮದಲ್ಲಿ ಬ್ರಾಹ್ಮಣಿಕೆಯ ಭಾಗ ಕೇಳಲು ನಾಚಿಕೆಯಿಲ್ಲದೆ ಬರುತ್ತಿದ್ದ ವಿಠಲಾಚಾರಿಯಾಗಲಿ, ಪ್ರೈಮರಿಸ್ಕೂಲ್ ಸಹಾಯೋಪಾಧ್ಯಾಯ ಶೇಷಣ್ಣನಾಗಲಿ ಕಣ್ಣಿಗೇ ಬೀಳಲಿಲ್ಲ.

ಸ್ವಜಾತೀಯರಾಗಿ, ಒಂದು ಹೆಣ ಸಾಗಿಸಲು ಮುಂದೆ ಬಾರದೆ ಹೋದ ಈ ಜನರ ಕ್ಷುದ್ರತನ ಕಂಡು ರಮಣಾಚಾರ್ಯರು ಕ್ರುದ್ಧವಾಗಿ ಹೋದರು.

ಈ ಸಂದಿಗ್ಧಸಮಯದಲ್ಲಿ ನಾನಿದ್ದೇನೆ ಎಂದು ಮುಂದೆ ಬಂದವರು ದಾಸರು.

"ನೀವು ಈ ಕೊನೆಮನೆಗೆ ಬಾಡಿಗೆಗೆ ಬಂದಿರುವವರಲ್ಲವೆ, ದಾಸರೆ?" ಎಂದು ಕೇಳಿದರು ರಮಣಾಚಾರ್ಯರು.

"ಹೌದು ದೇವರು"

ಎಂದು ದಾಸರು ಉತ್ತರವಿತ್ತು, ತಾವೇ ಬಂಬೂ ಬಜಾರಿಗೆ ಹೋಗಿ

ಹಗ್ಗ, ಗಳು, ವಸ್ತ್ರ, ಮಡಕೆ ಮುಂತಾದುವನ್ನು ತಂದು ಕರ್ತವ್ಯಮೂಢರಾಗಿ ಕುಳಿತಿದ್ದ ಆಚಾರ್ಯರನ್ನು ಎಚ್ಚರಿಸಿದ್ದರು.

“ ನಿಮಗೆ ನನ್ನಿಂದ ಎಷ್ಟೊಂದು ತೊಂದರೆ, ದಾಸರೇ ”

“ ತೊಂದರೆ ಎಂದರೆ ಏನು ಆಚಾರ್‌ಸ್ವಾಮಿ, ನೀವು ಬೆಳಗಿನಿಂದ ಪಡುತ್ತಿರುವ ತಾಪತ್ರಯವನ್ನು ನಾನೂ ನೋಡುತ್ತಿದೇನೆ. ಮನುಷ್ಯ ಕಷ್ಟಕ್ಕಾಗದೆ ಇದ್ದ ಮೇಲೆ ಇನ್ನೂ ಏತಕ್ಕೆ ಸ್ವಾಮಿ ? ಈ ದೇಹವೂ ಎಂದೋ ಒಂದು ದಿನ ಬಿದ್ದುಹೋಗತಕ್ಕದ್ದೇ. ಈ ಹಾಳು ಅಭಿಮಾನದಿಂದ ಕರ್ಮ ಚಂಡಾಲರಾಗೋಣವೆ ? ಏಳಿ, ಇನ್ನು ಮುಂದಿನ ಕೆಲಸ ಜರುಗಲಿ. ಯುಥಾ ಯುಥಾ ಕೂಡುವುದು ಬೇಡ ”

ಎಂದು ಅವನರಿಗೆ ಮುಂದಿನ ಕೆಲಸಕ್ಕೆ ಹೆಗಲು ಕೊಟ್ಟು ನಿಂತರು. ಇಬ್ಬರೇ ಸೇರಿ ಶವವನ್ನು ಸಾಗಿಸಿ ದಹನಕ್ರಿಯೆ ನಡೆಸಿದ್ದರು. ಎಲ್ಲಾ ಆದ ಮೇಲೆ ರಮಣಾಚಾರ್ಯರು, -

“ ದಾಸರೇ, ನಿಮ್ಮ ಉಪಕಾರಕ್ಕೆ ನಾನು ಏನು ಪ್ರತ್ಯುಪಕಾರ ಮಾಡಲು ಸಾಧ್ಯ? ಅಮ್ಮನಿಗೆ ಸದ್ಗತಿ ಕಾಣಿಸಿದಿರಿ. ನೀವು ಯಾವ ಜನ್ಮದ ಬಂಧು ವಾಗಿದ್ದಿರೋ ”

ಎಂದು ಗದ್ಗದ ಕಂಠರಾಗಿ ನುಡಿದಿದ್ದರು.

“ ಬಿಡಿ ಸ್ವಾಮಿ, ಯಾವ ದೊಡ್ಡ ವಿಷಯ ಅಂತ ಹೇಳುತ್ತೀರಿ. ನೀವು ಅದನ್ನೆಲ್ಲಾ ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಏನೋ ಆಗಿ ಹೋಯಿತು. ದೇವರು ಹೇಗೋ ನಡೆಸಿದ ”

ಎಂದು ದಾಸರು ವಿನಯವಾಗಿ ಉತ್ತರವಿತ್ತಿದ್ದರು.

ಆದರೆ ಆಚಾರ್ಯರು ಈ ಪ್ರಕರಣವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಸಾಧ್ಯವೇ ಇರಲಿಲ್ಲ.

ಅವರ ಅಂತರಂಗದಲ್ಲಿ ದಾಸರ ಬಗೆಗೆ ಕೃತಜ್ಞತೆ ಗಾಢವಾಗಿ ನೆಲಸಿತು.

ಈ ಪ್ರಸಂಗವೇ ಇಬ್ಬರ ಸ್ನೇಹಕ್ಕೂ ಬೆಸುಗೆ ಹಾಕಿದ್ದು.

## ೨

ಮದುವೆಯಾದ ಮೇಲೆ ರಮಣಾಚಾರ್ಯರ ಸ್ಥಿತಿ ಉತ್ತಮಗೊಂಡಿತು. ಗೃಹಸ್ಥಾಶ್ರಮಿಯಾದ ಅವರಿಗೆ ವೈದಿಕವರ್ಗಗಳಲ್ಲಿ ಒಂದು ದೃಢವಾದ ಸ್ಥಾನ, ಸಿಕ್ಕುವುದಕ್ಕೆ ತುಂಬ ದಿವಸ ಬೇಕಾಗಲಿಲ್ಲ. ಕೆಲವು ಮನೆಗಳಂತೂ ರಮಣಾಚಾರ್ಯರಿಗೇ ಗುತ್ತಿಗೆಯಾದವು. ಅವರಿಗೆ ಔತಣಗಳಿಗೇನೂ ಕಡಮೆ ಇರಲಿಲ್ಲ. ಎಷ್ಟೋ ಜನ ದಂಪತಿಗಳನ್ನು ಒಟ್ಟಿಗೆ ಊಟಕ್ಕೆ ಕರೆಯುತ್ತಿದ್ದರು. ಆಚಾರ್ಯರಿಗೆ ಪಂಚೆ, ಛತ್ರಿ, ಕಂಬಳಿ ಮುಂತಾದವು ಬರುತ್ತಿದ್ದವು: ಅವರ ಹೆಂಡತಿಗೆ ಮರದ ಬಾಗಿನ, ಸೀರೆ ಕುಪ್ಪಸ ಸಿಕ್ಕುತ್ತಿದ್ದವು. ಸಾಧಾರಣ ಆಮಂತ್ರಣಗಳಲ್ಲಿ ಊಟ ದಕ್ಷಿಣೆಗಳಂತೂ ತಪ್ಪದೆ ಗಿಟ್ಟುತ್ತಿದ್ದವು.

ಆಚಾರ್ಯರು ಎಷ್ಟೋ ದಿವಸ ಮನೆಯಲ್ಲಿ ಊಟವನ್ನೇ ಮಾಡುತ್ತಿರಲಿಲ್ಲ. ಯಾರ ಮನೆಯಲ್ಲಾದರೂ ಹಗಲು ಭಕ್ಷ್ಯದ ಊಟ ಬಿದ್ದ ದಿನ ರಾತ್ರಿಯ ಹೊತ್ತು ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಶ್ರಾದ್ಧಗಳ ದಿನವಂತೂ ರಾತ್ರಿ ಕಡ್ಡಾಯವಾಗಿ ಊಟವೇ ಇರುತ್ತಿರಲಿಲ್ಲ. ಬೇರೆ ಔತಣದ ದಿನವಾದರೆ ಒಂದೊಂದು ಸಲ ವೆಂಕಮ್ಮನವರು ರಾತ್ರಿಯ ಊಟಕ್ಕೆ ಗಂಡನನ್ನು ಎಬ್ಬಿಸುತ್ತಿದ್ದರು.

"ಬಿಸಿಬಿಸಿಯಾಗಿ ಗೊಡುಸಾರು, ಅನ್ನ ಮಾಡಿದ್ದೇನೆ. ಏಳಿ ಒಂದು ತುತ್ತಾದರೂ ಊಟ ಮಾಡಿ. ಈ ನಡುವೆ ನಿಮಗೆ ಮನೆಯಲ್ಲಿ ಊಟವೇ ಅಪರೂಪವಾಗಿಹೋಗಿದೆ"

ಎಂದರೆ,

"ಬೇಡ ಕಣೆ ವೆಂಕೂ, ನನ್ನ ಬಲವಂತ ಮಾಡಬೇಡ. ನನ್ನ ಮೈಗಾಗೊಲ್ಲ"

ಎಂದು ಆಚಾರ್ಯರು ತಪ್ಪಿಸಿಕೊಳ್ಳುತ್ತಿದ್ದರು.

ಉಳಿತಾಯಕ್ಕೆ ಉಳಿತಾಯ; ಆರೋಗ್ಯಕ್ಕೆ ಆರೋಗ್ಯ. ಅದೇ ಅವರ ಮಂತ್ರವಾಗಿತ್ತು.

ತಾವು ಹೋಗಲಾಗದಿದ್ದ ಕಡೆ ದಾಸರನ್ನು ಕಳಿಸುತ್ತಿದ್ದರು.

"ದಾಸರೇ ಇವೊತ್ತು ಒಂದು ಔತಣ ಬಂದಿದೆ, ಹೋಗುತ್ತೀರೇನು?"

ಎಂದು ಆಚಾರ್ಯರು ಕೇಳಿದರೆ,

"ನೀವು ಹೇಳಿದ ಮೇಲೆ ತೆಗೆದು ಹಾಕುವುದಕ್ಕಾಗುತ್ತದೆಯೆ, ದೇವರು?"

ಎನ್ನುತ್ತಿದ್ದರು ದಾಸರು.

ಆಚಾರ್ಯರ ಏರ್ಪಾಡಿನಿಂದ ದಾಸರಿಗೆ ತಿಂಗಳಿಗೆ ನಾಲ್ಕಾರು ಔತಣಗಳಾದರೂ ಸಿಕ್ಕದೆ ಇರುತ್ತಿರಲಿಲ್ಲ. ಅವರ ಹೆಂಡತಿಗೂ ಆಹ್ವಾನಗಳು ಬರುತ್ತಿದ್ದುವು. ಇಂಥ ಜೊತೆ ಜೊತೆ ಊಟ ಸಿಕ್ಕಿದರೆ ದಂಪತಿಗಳಿಗೆ ಎಷ್ಟೋ ಸಂತೋಷ. ಭರ್ಜರಿ ಭೋಜನವಾದ ದಿನವಂತೂ ದಾಸರು ಬಂದು ಆಚಾರ್ಯರಿಗೆ ಕಾಣಿಸಿಕೊಳ್ಳದೆ ಇರುತ್ತಲೇ ಇರಲಿಲ್ಲ. ಆಗ ಅವರ ಮುಖ ಊರಗಲವಾಗುತ್ತಿತ್ತು.

"ಹೇಗಿತ್ತು ದಾಸರೇ, ಭೋಜನ?"

ಎಂದು ಆಚಾರ್ಯರು ಕೇಳುತ್ತಿದ್ದರು.

"ದಿವಿನಾದ ಲಾಡು ಪ್ರಸ್ತ ಸ್ವಾಮಿ. ಆಹಾ! ಏನು ಕೂಟು, ಏನು ಅಂಬೋಡೆ. ಕೈಗೆ ಒರಕೊಂಡಿರುವ ತುಪ್ಪವೇ ಹೋಗಿಲ್ಲ ನೋಡಿರಿ ಇನ್ನೂ. ಮಹರಾಯರು, ಮಹರಾಯರು, ಅವರ ಹೊಟ್ಟೆ ಥಣ್ಣಗಿರಲಿ"

ಎಂದು ದಾಸರು ಉತ್ತರ ಕೊಡುತ್ತಿದ್ದರು.

"ಅವರ ಹೊಟ್ಟೆಯ ಮಾತಿರಲಿ, ನಿಮ್ಮ ಹೊಟ್ಟೆಗೆ ತಂಪಾಯಿತೋ ಇಲ್ಲರೀ, ದಾಸರೇ?"

ಎಂದು ತಮಾಷೆಯಾಗಿ ನುಡಿದರೆ,

"ಆಯಿತಪ್ಪಾ ಆಯಿತು. ಸಧ್ಯ ನಿಮ್ಮ ದಯದಿಂದ

ಎಂದು ನಗುತ್ತ ನಿಷ್ಕಲಂಕ ಮನಸ್ಸಿನಿಂದ ಉತ್ತರ ಕೊಡುತ್ತಿದ್ದರು.

ಇಂಥ ಸರಸ ವಿನೋದಗಳಿಗೆ ಇಬ್ಬರ ಜೀವನದಲ್ಲಿಯೂ ಬೇಕಾದಷ್ಟು ಅವಕಾಶವಿತ್ತು.

ತಾವು ಮಾಡಿದ ಒಂದು ಉಪಕಾರಕ್ಕಾಗಿ ಆಚಾರ್ಯರು ಸಮಯ ಸಿಕ್ಕಿದಾಗಲೆಲ್ಲ ಎಷ್ಟು ರೀತಿಯಲ್ಲಿ ಕೃತಜ್ಞತೆ ತೋರಿಸುತ್ತಿದ್ದಾರೆಂಬುದು ದಾಸರಿಗೆ ಹೊಳೆಯದೆ ಇರುತ್ತಿರಲಿಲ್ಲ. ಅಂಥ ಪ್ರತ್ಯುಪಕಾರ ಪಡೆಯುವುದು ತಮ್ಮ ಹಕ್ಕು ಎಂದೂ ಅವರು ಭಾವಿಸುತ್ತಿರಲಿಲ್ಲ. ಅದನ್ನು ಪಡೆಯುವಾಗ ಅವರ ಮನಸ್ಸು ಖಿನ್ನವಾಗುತ್ತಿತ್ತು. ಆ ಭಾವನೆ ಅವರ ಮನಸ್ಸಿನಲ್ಲಿ ತಲೆಯೆತ್ತುತ್ತಿದ್ದ ಹಾಗೇ ಆಚಾರ್ಯರಿಗೆ ಅರ್ಥವಾಗಿ ಹೋಗುತ್ತಿತ್ತು. ಅದಕ್ಕೆ ಅವರ ಬಳಿ ಔಷಧಿಯೂ ಸಿದ್ಧವಾಗಿಯೇ ಇರುತ್ತಿತ್ತು.

ಲೋಕಾಭಿರಾಮವಾಗಿ ಹರಟುತ್ತ ಕುಳಿತಿದ್ದಾಗ ಊಟದ ಕಡೆ ಮಾತಿನ ಸರಣಿ ಹೊರಳಿಸುತ್ತಿದ್ದುದು ಆಚಾರ್ಯರ ಒಂದು ಉಪಾಯ.

ದಾಸರಿಗೆ ಜೀಳಿ ಹುಳಿ ಎಂದರೆ ಬಹು ಪ್ರಿಯ. ನಾಲ್ಕು ಭಕ್ಷ್ಯ ಇದ್ದ ಕಡೆ ಅದನ್ನು ಒತ್ತಟ್ಟಿಗೆ ನೂಕಿ ಅಚ್ಚುಕಟ್ಟಾಗಿ ಹುಳಿ ಅನ್ನ ಕಲಸಿಕೊಳ್ಳುತ್ತಿದ್ದುದು ಅವರ ವಾಡಿಕೆ. ಚೆನ್ನಾಗಿ ಹಸಿವಾದಾಗ ಒಂದು ಒಬ್ಬೆ ಹುಳಿ ಅನ್ನದ ಮುಂದೆ ಯಾವುದೂ ಇಲ್ಲವೆಂದು ಅವರ ವಾದ. ಅದು ಕೊಡುವ ತೃಪ್ತಿಗೆ ಯಾವ ಭಕ್ಷ್ಯವೂ ಸಾಟಿಯಾಗಲಾರದು ಎನ್ನುತ್ತಿದ್ದರು. ಆ ವಾದಕ್ಕೆ ಸಮರ್ಥನೆಯಾಗಿ ಅವರೇ ಜೋಡಿಸಿದ್ದ ಒಂದು ವಾಕ್ಯವನ್ನು ಸಮಯ ಬಂದಾಗಲೆಲ್ಲಾ ತಮಾಷೆಯಾಗಿ ಉಲ್ಲೇಖಿಸುತ್ತಿದ್ದರು. ವೈದಿಕಮಂಡಲಿಯಲ್ಲಿ ಯಾರಾದರೂ ಅಂದಿನ ಔತಣದ ಊಟದ ವಿಚಾರವೆತ್ತಿ ಭಕ್ಷ್ಯಗಳ ಪ್ರಶಂಸೆಗೆ ಹೊರಟರೆ ದಾಸರು ಸುಮ್ಮನಿರುತ್ತಿರಲಿಲ್ಲ.

"ಏನು ಭಕ್ಷ್ಯ ಭಕ್ಷ್ಯ ಅಂತ ಬಾಯಿಬಿಡುತೀರೊಪ್ಪ. ಎರಡು ತಿನ್ನುವುದಕ್ಕಿಲ್ಲ, ಮುಖಕ್ಕೆ ಹಾಕಿ ಒರಸಿದ ಹಾಗಾಗುತ್ತೆ. ಸೊಗಸಾದ ಒಂದು ಹುಳಿಯ ಮುಂದೆ ಭಕ್ಷ್ಯವೇನ್ರಿ? 'ಪರಭಕ್ಷ್ಯ ಸಮೌ ಹುಳಿಃ'"

ಎನ್ನುತ್ತಿದ್ದರು. ದಾಸರ ಈ ದೌರ್ಬಲ್ಯ ಆಚಾರ್ಯರಿಗೆ ಗೊತ್ತಿತ್ತು. ಜೊತೆಗೆ ದಾಸರ ಹೆಂಡತಿ ಸರಸಕ್ಕ ಜೀಳಿ ಹುಳಿ ಮಾಡುವುದರಲ್ಲಿ ಎತ್ತಿದ ಕೈ

ಎಂದು ಅಗ್ರಹಾರಕ್ಕೇ ಹೆಸರಾಗಿತ್ತು. ಅದಕ್ಕೇ ಆಚಾರ್ಯರು ಉದ್ದೇಶ ಪೂರ್ವಕವಾಗಿ ವಿಷಯವನ್ನು ಆ ಕಡೆಗೆ ಹೊರಳಿಸಿ, ಇದ್ದಕ್ಕಿದ್ದ ಹಾಗೆ,

"ದಾಸರೇ, ನಿಮ್ಮ ಮನೆಯಲ್ಲಿ ಒಂದು ದಿನ ಊಟಮಾಡಬೇಕಲ್ರೀ"

ಎನ್ನುತ್ತಿದ್ದರು.

"ಇದೇನು ಸ್ವಾಮಿ ಗ್ರಹಚಾರ. ಬಡವನ ಮೇಲೆ ಏನು ಇಷ್ಟು ಅನುಗ್ರಹ?"

ಎಂದು ದಾಸರು ಕಕ್ಕಾಬಿಕ್ಕಿಯಾಗಿ ಕೇಳುತ್ತಿದ್ದರು.

"ನೀವು ಬಡವ ಗಿಡವ ಅನ್ನಬೇಡೀಪ್ಪಾ. ಬಡವನ ಮೇಲೆ ಬಡವ ಅನುಗ್ರಹಮಾಡದೆ ಭಾಗ್ಯವಂತ ಮಾಡುತಾನೇನ್ರಿ?"

ಎಂದು ಆಚಾರ್ಯರು ನಕ್ಕು ನುಡಿದು,

"ನಿಮ್ಮ ಕುಟುಂಬ ಬೇಳೆ ಹುಳಿ ಬಹು ಚೆನ್ನಾಗಿ ಮಾಡುತಾರಂತೆ. ನನಗೂ ದಿನಾ ಈ ಹಾಳು ಭಕ್ಷ್ಯದೂಟ ಮಾಡಿ ಮಾಡಿ ನಾಲಗೆ ಕೆಟ್ಟು ಹಾಳಾಗಿ ಹೋಗಿದೆ"

ಎಂದು ಏನೋ ಒಂದು ಸುಳ್ಳು ಬಿಟ್ಟು ಮಾತು ಮುಗಿಸುತ್ತಿದ್ದರು.

"ಅದಕ್ಕೇನು ಮುಟ್ಟಿನಬೇಕು, ನಾಳೆಯೇ ನಡೆಯಲಿ ಧಣಿಯ ಸೇವೆ"

ಎಂದು ದಾಸರು ಹಿಗ್ಗಿ ಹೇಳುತ್ತಿದ್ದರು

ಹೀಗೆ ಹೇಳಿ, ಕರೆಸಿಕೊಳ್ಳದೆ ತಾವೇ ಆಹ್ವಾನ ಕೊಟ್ಟುಕೊಂಡರೆ ದಾಸರಿಗೆ ಪರಮ ಸಂತೋಷವಾಗುವುದೆಂದು ಆಚಾರ್ಯರಿಗೆ ಗೊತ್ತಿತ್ತು.

ತಮ್ಮ ಸಂತೋಷಾರ್ಥವಾಗಿಯೇ ಆಚಾರ್ಯರು ಹೀಗೆ ಹೇಳುತ್ತಿದ್ದಾರೆಂಬ ಗುಮಾನಿಯೂ ದಾಸರಿಗೆ ಬಾರದೆ ಇರುತ್ತಿರಲಿಲ್ಲ. ಹಾಗೆ ಬಂದರೂ ಆಚಾರ್ಯರ ಮಾತಿನಿಂದಲೇ ಅವರ ಮನಸ್ಸಿಗೆ ಏನೋ ನೆಮ್ಮದಿಯಾಗುತ್ತಿತ್ತು.

ಆಗಾಗ್ಗೆ ಇಂಥ ನಾಟಕ ನಡೆಯುತ್ತಲೇ ಇರುತ್ತಿತ್ತು.

## ೩

ವಿವಾಹವಾಗಿ ವೆಂಕಮ್ಮ ಗಂಡನ ಮನೆಗೆ ಬಂದ ಮೇಲೆ ಬಹುಕಾಲದ ವರೆಗೆ ಮಕ್ಕಳಾಗಲಿಲ್ಲ. ಆಚಾರ್ಯರಿಗೂ ಮಧ್ಯವಯಸ್ಸು ಮೀರುತ್ತಿತ್ತು. ಸಕಾಲದಲ್ಲಿ ಮನೆಯಲ್ಲಿ ಒಂದು ತೊಟ್ಟಿಲು ಕಟ್ಟುವ ಭಾಗ್ಯವನ್ನು ದೇವರು ತಮಗಿನ್ನೂ ಕರುಣಿಸಲಿಲ್ಲವಲ್ಲಾ ಎಂದು ದಂಪತಿಗಳು ಒಳಗೇ ಕೊರಗುತ್ತಿದ್ದರು. ವೆಂಕಮ್ಮ ಅಶ್ವತ್ಥಕಟ್ಟೆ ಪ್ರದಕ್ಷಿಣೆ, ರಾಯರ ಸೇವೆಮಾಡಿ ವ್ರತ ನೇಮಗಳಲ್ಲಿ ಬಳಲಿದರು. ಹೆಂಡತಿ ಈ ಚಿಂತೆಯಲ್ಲಿ ಶೋಕಿಸುತ್ತಿದ್ದುದನ್ನು ಗಮನಿಸುತ್ತಿದ್ದ ರಮಣಾಚಾರ್ಯರು ತಮ್ಮ ಮನಸ್ಸಿನ ಕೊರಗನ್ನು ಬದಿಗೊತ್ತಿ ಆಕೆಗೆ ಸಮಾಧಾನ ಹೇಳುತ್ತಿದ್ದರು.

"ಕೊಡುವ ದೇವರು ಕೊಟ್ಟೇ ಕೊಡುತಾನೆ. ಒಂದು ವೇಳೆ ಹಣೆಯಲ್ಲಿ ಪುತ್ರಸಂತಾನ ಬರೆಯದಿದ್ದರೆ ಏನು ಮಾಡಿ ಏನು ಫಲ, ವೆಂಕೂ?"

ಎಂದು ಆಕೆಯ ಪೇಚಾಟ ನೋಡಲಾರದೆ ಒಮ್ಮೊಮ್ಮೆ ಬೇಸರಗೊಂಡು ನುಡಿಯುತ್ತಿದ್ದರು.

ದಂಪತಿಗಳ ಪ್ರಾರ್ಥನೆ ದೇವರಿಗೆ ಮುಟ್ಟಿತೋ, ಇಲ್ಲ ಆಗುವ ಕಾಲವೇ ಬಂದಿತೋ ಅಂತೂ ವೆಂಕಮ್ಮ ಆ ಸಲ ಮುಟ್ಟಾಗಲಿಲ್ಲ.

ಮುಟ್ಟಿನ ದಿವಸ ದಾಟಿ ಹೋಗುತ್ತಿದ್ದುದನ್ನು ಗಂಡಹೆಂಡತಿಯರಿಬ್ಬರೂ ಗಮನಿಸಿದ್ದರು. ಇಬ್ಬರ ಮನಸ್ಸೂ ಯಾವುದೋ ಉದ್ವೇಗದಿಂದ ತುಡಿಯುತ್ತಿತ್ತು.

ಇಬ್ಬರೂ ಬಾಯಿಬಿಟ್ಟು ಮಾತಾಡಲಾರರು. ಒಂದೆರಡು ತಿಂಗಳು ದಾಟುವ ವರೆಗೂ ಧೈರ್ಯವಿಲ್ಲ.

ಆಸೆ ಇಬ್ಬರ ಮನಸ್ಸಿನಲ್ಲಿಯೂ ಚಿಗುರೊಡೆಯಿತು.

" ಇದನ್ನು ನಿಜವಾಗಿಸು, ದೇವರೇ "

ಎಂದು ವೆಂಕಮ್ಮ ಮೌನವಾಗಿ ಮೊರೆಯಿಟ್ಟರು.

ಸಂದೇಹಕ್ಕೆ ಅವಕಾಶವೇ ಇರಲಿಲ್ಲ.

ವೆಂಕಮ್ಮನಿಗೆ ಪುತ್ರೋತ್ಸವವಾದ ಸುದ್ದಿ ಕೇಳಿ ದಾಸರೂ ಅವರ ಕುಟುಂಬವೂ ಹಿರಿಹಿರಿ ಹಿಗ್ಗಿಹೋಗಿದ್ದರು. ಮಾವನವರಿಂದ ರಮಣಾಚಾರ್ಯರಿಗೆ ಕಾಗದ ಬಂದ ದಿನ ನಿತ್ಯಯಾತ್ರೆಗೆ ಬಂದಿದ್ದ ದಾಸರು ಈ ಸುದ್ದಿ ಕೇಳಿ ಹಾಗೆಯೇ ಸ್ತಂಭೀಭೂತರಾಗಿ ನಿಂತುಬಿಟ್ಟರು. ಸಂತೋಷಾಧಿಕ್ಯದಿಂದ ಅವರಿಗೆ ಮಾತೇ ಹೊರಡದಾಗಿತ್ತು.

" ಏನು ದಾಸರೇ, ಹೀಗೆ ನಿಂತುಬಿಟ್ಟರಿ ?"

ಎಂದು ಆಚಾರ್ಯರು ನಕ್ಕು ಕೇಳಿದ್ದಕ್ಕೆ ದಾಸರಿಗೆ ಪ್ರಜ್ಞೆ ಬಂದಂತಾಗಿ, 'ನೋಡಿದಿರಾ ನಾನು ಮೊದಲೇ ಹೇಳಲಿಲ್ಲವೇ' ಎಂಬ ಭಾವವನ್ನು ತೋರಿಸುವಂತೆ ತಲೆದೂಗಿ,

"ಹರಿನಿನ್ನೊಲುಮೆಯು ಆಗುವ ತನಕ ।
ಅರಿತು ಸುಮ್ಮನಿರುವುದೇ ಲೇಸು"

ಎಂದು ಕುಣಿಯುತ್ತ ಧ್ವನಿ ಎತ್ತರಿಸಿ ಹಾಡುವುದಕ್ಕೆ ಉಪಕ್ರಮಿಸಿ ಬಿಟ್ಟಿದ್ದರು.

ವೆಂಕಮ್ಮ ಊರಿಗೆ ಬರುವ ಹೊತ್ತಿಗೆ ಮನೆ ತೋರಣವಾಗಿ ಅಣಿ ಮಾಡಿಟ್ಟಿದ್ದವರು ನರಸಕ್ಕ. ಶುಭ ದಿನದಲ್ಲಿ ಬಂದ ಬಾಣಂತಿ ಕೂಸಿಗೆ ಆರತಿ ಮಾಡಿ, ದೃಷ್ಟಿ ತೆಗೆದು ಅಕ್ಕರೆಯಿಂದ ಹೋಳಿಗೆ ಪಾಯಸದ ಅಡಿಗೆ ಮಾಡಿ ಬಡಿಸಿದರು.

" ಈ ದಾಸರೂ ಇವರ ಕುಟುಂಬವೂ ಸೇರಿ ನಮ್ಮ ಮೇಲೆ ತುಂಬ ಭಾರ ಹೊರಿಸುತಿದಾರೆ ಕಣೆ, ವೆಂಕೂ "

ಎಂದು ಪತ್ನೀ ಪುತ್ರಾಗಮನದ ಸಂತೋಷದಲ್ಲಿ ರಮಣಾಚಾರ್ಯರು ನುಡಿದಿದ್ದರು.

"ಹೊರಿಸಲಿ ಬಿಡಿ. ಯಾವ ಜನ್ಮದಲ್ಲಿ ನಮ್ಮ ಬೆನ್ನಲ್ಲಿ ಬಿದ್ದಿದ್ದರೋ ಪುಣ್ಯಾತ್ಮರು"

ಎಂದು ವೆಂಕಮ್ಮ ಉತ್ತರವಿತ್ತಿದ್ದರು.

ಗಂಡಹೆಂಡತಿಯರ ಕಣ್ಣು ಈ ನಿರ್ವ್ಯಾಜವಾದ ಸ್ನೇಹದಿಂದ ಒದ್ದೆಯಾಗುತ್ತಿತ್ತು.

ಮಗುವಿಗೆ ಇಟ್ಟಿದ್ದ ಹೆಸರನ್ನು ತಿಳಿಸಿ,

"ಚೆನ್ನಾಗಿದೆಯೇ ನರಸಕ್ಕನವರೇ, ಮಗೂ ?"

ಎಂದು ವೆಂಕಮ್ಮ ಕೇಳಿದ್ದಕ್ಕೆ,

"ದಿವಿನಾದ ಹೆಸರು. ದೊರೆ ಇದ್ದ ಹಾಗೆ ಇದಾನಮ್ಮಾ ಕೂಸು. ಉಡುಪಿ ಕೃಷ್ಣ ಎಲ್ಲಿದಾನೆ ಅನ್ನೋ ಹಾಗಿಲ್ಲ. ನಿಮ್ಮನ್ನ ಹೋತಮೇಲಿ ಕೇಳಬೇಕೆ ?"

ಎನ್ನುತ್ತಿದ್ದರು ನರಸಕ್ಕ.

"ನೀವು ಬಿಡಿ ನರಸಕ್ಕ, ಯಾವಾಗಲೂ ಹೀಗೇ ಹಾಸ್ಯ"

ಎಂದು ವೆಂಕಮ್ಮ ತಮ್ಮ ಸಂತೋಷವನ್ನು ಮುಚ್ಚಿಕೊಳ್ಳಲು ಹವಣಿಸಿ ಏನಾದರೂ ಹೇಳುತ್ತಿದ್ದರು.

ಆಚಾರ್ಯರಂತೂ ಮಗುವನ್ನು ಎಲ್ಲೂ ಇಡರು. ಮಗು ತಾಯಿಯನ್ನು ಹೋಲುತ್ತಿದ್ದುದನ್ನು ನೋಡಿ ಅವರು ವಿನೋದಕ್ಕೆ,

"ನಿನ್ನ ಮಗ ನಿನ್ನ ಹಾಗೇ ಇದಾನೆ ಕಣೆ, ವೆಂಕೂ"

ಎನ್ನುತ್ತಿದ್ದರು. ನಿಜಕ್ಕೂ ಮಧುಸೂದನ ತಾಯಿಯ ಪಡಿಯಚ್ಚು. ಅದೇ ಎಸಳಾದ ಮೂಗು, ತಿದ್ದಿದ ಹುಬ್ಬು, ಹೊಳೆಯುವ ಕಣ್ಣು, ಪುಟ್ಟ ತೊಂಡೆ ಹಣ್ಣಿನಂಥ ತುಟಿ, ದುಂಡಾಗಿ ತುಂಬಿಕೊಂಡ ಮೈಕೈಗಳು. ಮಗು ಬರಿ ಮೈಯಲ್ಲಿ ಓಡಾಡುತ್ತಿದ್ದರೆ ಎಲ್ಲಿ ದೃಷ್ಟಿ ತಾಕುವುದೋ ಎನ್ನುವ ಹಾಗಿರುತ್ತಿತ್ತು. ಅದೋ ಶ್ರೀರಂಗದ ಒನಕೆಯ ಹಾಗೆ ಎಲ್ಲರ ಕಂಕುಳಲ್ಲೂ ಇರುತ್ತಿತ್ತು. ವೆಂಕಮ್ಮನವರಿಗಂತೂ ನಿತ್ಯವೂ ಸಂಜೆಯ ಹೊತ್ತು ಮಗುವಿಗೆ ದೃಷ್ಟಿ ತೆಗೆಯುವುದೇ ಒಂದು ಕೆಲಸವಾಗಿತ್ತು. ಉಪ್ಪು ಮೆಣಸಿನಕಾಯಿ ನಿವಾಳಿಸಿ

ಒಲೆಗೆ ಹಾಕುತ್ತಿದ್ದರು. ವಾರಕ್ಕೊಂದು ಕಸಪೊರಕೆಯಾದರೂ ಮುಗಿದು ಹೋಗುತ್ತಿತ್ತು.

"ಹಾದಿ ದೃಷ್ಟಿ, ಬೀದಿ ದೃಷ್ಟಿ ಹಾಳಾಗಿಹೋಗಲಿ"

ಎಂದು ದಿನಕ್ಕೊಂದು ಬಗೆಯಲ್ಲಿ ಮಗನಿಗೆ ದೃಷ್ಟಿ ತೆಗೆಯುತ್ತಿದ್ದ ಮಡದಿಯ ಮಮತೆಯ ಆಳವನ್ನು ಕಂಡು ಆಚಾರ್ಯರ ಹೃದಯ ಹಿಗ್ಗುತ್ತಿತ್ತು.

ಅಕ್ಕರೆಯ ಮಗನನ್ನು ಆಡಿಸುವುದರಲ್ಲೇ ದಂಪತಿಗಳಿಗೆ ಹೊತ್ತು ಕಳೆದು ಹೋಗುತ್ತಿತ್ತು. ಹೊರಗೆ ಹೋಗಿದ್ದ ಆಚಾರ್ಯರು ಮನೆಗೆ ಯಾವಾಗ ಬಂದೇನೋ, ಯಾವಾಗ ಮಗುವನ್ನು ಎತ್ತಿಕೊಂಡು ಮುದ್ದಿಸೇನೋ ಎಂದು ಹಂಬಲಿಸುತ್ತಿದ್ದರೆ, ಗಂಡ ಮನೆಗೆ ಬಂದಕೂಡಲೆ ವೆಂಕಮ್ಮ ಮಗನ ಬಾಲ ಲೀಲೆಗಳನ್ನು ಒಂದೊಂದಾಗಿ ಬಣ್ಣಿಸಬೇಕು. ಇಬ್ಬರೂ ಸೇರಿ ಅವನನ್ನು ಆಟವಾಡಿಸಬೇಕು, ಅವನ ಜೊತೆಗೂ ಕುಣಿಯಬೇಕು. ಅವನು ತೊದಲು ತೊದಲಾಗಿ ಮಾತಾಡುತ್ತ ತಪ್ಪುಹೆಜ್ಜೆ ಇಡಲು ಯತ್ನಿಸುತ್ತಿದ್ದಾಗ ದಂಪತಿಗಳಿಗೆ ಹೊಸ ಪ್ರಪಂಚವೇ ಕಣ್ಣ ಮುಂದೆ ಕಟ್ಟಿದಂತಾಗಿತ್ತು. ಎಷ್ಟೋ ದಿನ ದೇವರ ಪೂಜೆಯ ಸಮಯದಲ್ಲಿ ಕೈಯಲ್ಲಿ ಗಂಟೆ ಹಿಡಿದು, ಮಂಗಳಾರತಿ ಮಾಡುತ್ತಿದ್ದಾಗ ಮಗನ ಯಾವುದೋ ಲೀಲೆ ನೋಡಿ ಆಚಾರ್ಯರು ತಾವು ಮಾಡುತ್ತಿದ್ದ ಕೆಲಸವನ್ನೇ ಮರೆತು,

"ನೋಡೇ ನೋಡೇ, ಅವನ ಆಟಾನ!"

ಎಂದು ಹೆಂಡತಿಗೆ ಕೂಗಿ ಹೇಳುತ್ತಿದ್ದರು.

ಒಗ್ಗರಣೆ ಹಾಕುತ್ತಿದ್ದ ಸೌಟಿನ ಸಮೇತವಾಗಿಯೇ ವೆಂಕಮ್ಮ ದಡಬಡ ಲಾಗಿ ಬಂದು,

"ಏನು ಬಂಗಾರವಮ್ಮಾ ಇದು!"

ಎಂದು ಮಮತೆ ಉಕ್ಕಿ ಮಗುವನ್ನು ಹಾಗೇ ಎದೆಗವಚಿಕೊಳ್ಳುತ್ತಿದ್ದರು.

ಮಗನ ತುಂಟಾಟಗಳನ್ನು ನೋಡುತ್ತ ನೋಡುತ್ತ, ಮೂರು ಜೀವದ ಸೂತ್ರಗಳೂ ಒಂದಾಗಿ ನೆಯ್ದುಕೊಳ್ಳುತ್ತಿರಲು ದಿನ, ತಿಂಗಳು, ವರ್ಷ ಕಳೆದು ಹೋದುದೂ ಅವರ ಗಮನಕ್ಕೆ ಬಾರದಾಯಿತು.

ಆಚಾರ್ಯರ ಗೃಹಜೀವನ ತೃಪ್ತಿಯಿಂದ ತುಂಬಿತ್ತು.

ಕೈಹಿಡಿದ ಹೆಂಡತಿ ನೆಚ್ಚಿನ ಮಡದಿಯಾಗಿದ್ದಳು.

ಬಹುಕಾಲದಿಂದ ಬಿಸಿಲಿನಲ್ಲಿ ಬೆಂದು ಬಸವಳಿದಿದ್ದ ನೆಲಕ್ಕೆ ಮಳೆ ತಂಪಾದ ನೀರನ್ನೆರೆದು ಸಂತೈಸುವಂತೆ ಬ್ರಹ್ಮಚರ್ಯದ ಬರಡು ಬಾಳನ್ನು ಕಂಡಿದ್ದ ಆಚಾರ್ಯರಿಗೆ ದಾಂಪತ್ಯ ತೃಪ್ತಿಸುಖಗಳ ಪನ್ನೀರನ್ನು ಸೇಚನೆ ಮಾಡಿತ್ತು; ಅದಕ್ಕೆ ಕಲಶಪ್ರಾಯವಾಗಿ ಪುತ್ರಭಾಗ್ಯವನ್ನೂ ನೀಡಿತ್ತು.

ನಿತ್ಯವೂ ದೇವರ ಪೂಜೆ ಮುಗಿಸಿ ಏಳುವಾಗ ಆಚಾರ್ಯರು,

"ನಾನು ಹೆಚ್ಚು ಬೇಡುವುದಿಲ್ಲ. ಇಷ್ಟನ್ನೇ ಶಾಶ್ವತವಾಗಿಸು ತಂದೆ"

ಎಂದು ಮನಸ್ಸಿನಲ್ಲೇ ಬೇಡಿಕೊಳ್ಳುತ್ತಿದ್ದರು.

ಆಚಾರ್ಯರ ಸಂಸಾರ ಸೌಖ್ಯವನ್ನು ನೋಡಿ ನಿರ್ವಂಚನೆಯಿಂದ ಸಂತೋಷಪಡುತ್ತಿದ್ದವರೆಂದರೆ ದಾಸರು. ಸಂತಾನ ಸೌಭಾಗ್ಯ ಪಡೆಯದ ಆ ದಂಪತಿಗಳು ಆಚಾರ್ಯರ ಸಂಸಾರ ಸಂತೃಪ್ತಿ ನೋಡಿ ಕರುಬದೆ ಅವರ ಸುಖ ದಲ್ಲಿ ತಾವೂ ಭಾಗಿಗಳಾಗಿ ತಮ್ಮ ಕೊರತೆಯನ್ನು ಮರೆಯಲು ಯತ್ನಿಸುತ್ತಿದ್ದರು. ನರಸಕ್ಕ ದಿನಕ್ಕೆ ಒಂದು ಸಲವಾದರೂ ಮಧುಸೂದನನ್ನು ತಮ್ಮ ಮನೆಗೆ ಎತ್ತಿ ಕೊಂಡು ಹೋಗದೆ ಇರುತ್ತಿರಲಿಲ್ಲ. ಬಹಳ ಹೊತ್ತು ಮಗುವನ್ನು ಮನೆ ಯಲ್ಲಿಟ್ಟುಕೊಂಡಿದ್ದರೆ ದಾಸರೇ ಎಚ್ಚರಿಸುತ್ತಿದ್ದರು :

"ಆಕೆ ಎಷ್ಟು ಒದ್ದುಕೊಳ್ಳುತ್ತಾರೋ ಏನೋ, ಮಗುವನ್ನು ಕರೆದು ಕೊಂಡು ಹೋಗಿ ಬಿಟ್ಟು ಬಾ"

ಎನ್ನುತ್ತಿದ್ದರು. ಹಣ್ಣೋ ಹಾಲೋ ಕಲ್ಲುಸಕ್ಕರೆಯೋ ಕೊಡದೆ ಮಗುವನ್ನು ಬರಿಗೈಯಲ್ಲಿ ಮನೆಗೆ ಕಳುಹಿಸುತ್ತಲೇ ಇರಲಿಲ್ಲ. ನಿತ್ಯ ಯಾತ್ರೆ ಯಲ್ಲಿ ಆಚಾರ್ಯರ ಮನೆಗೆ ಬಂದಾಗ ದಾಸರು ಒಂದು ದೇವರನಾಮ ಹೇಳಿ, ಮಗುವನ್ನೆತ್ತಿಕೊಂಡು ಆಡಿಸುತ್ತ ಕುಳಿತುಬಿಡುತ್ತಿದ್ದರು. ಅವರ ಜೋಳಿಗೆಗೂ ತಂಬೂರಿಗೂ ಅವನು ಕೈಹಾಕದೆ ಬಿಡುತ್ತಿರಲಿಲ್ಲ; ಅವರ ಕೈಯಿಂದ ಚಿಟಿಕೆ ತಾಳ ಕಿತ್ತುಕೊಂಡು ಕುಟ್ಟದೆ ಬಿಡುತ್ತಿರಲಿಲ್ಲ. ತಂಬೂರಿಯ ತಂತಿಯೆಳೆದು ಅದರಿಂದ ಏನೋ ಸದ್ದು ಹೊರಡುವುದೆಂದು ತಿಳಿದ ಬಳಿಕವಂತೂ ಅವರು ಬಂದಾಗಲೆಲ್ಲಾ ಅದಕ್ಕೆ ಕೈಹಾಕಿ ತಂತಿಮೀಟದೆ ಬಿಡುತ್ತಿರಲಿಲ್ಲ. ಅದರ ನಾದ ಕೇಳಿ ಅವನು ವಿಸ್ಮಿತನಾಗಿದ್ದ. ದಾಸರು ಕುಳಿತುಕೊಳ್ಳದೆ ನಿಂತುಕೊಂಡೇ

ಇದ್ದರೆ ಹತ್ತಿರ ಬಂದು ಹಿಡಿದು ಕೂಡಿಸುತ್ತಿದ್ದ. ದಾಸರು ಆನಂದ ತುಂದಿಲರಾಗಿ,

"ಕೂಸಿನ ಕಂಡೀರಾ! ಮುಖ್ಯ ಪ್ರಾಣನ ಕಂಡೀರಾ?"

ಎಂದು ಹಾಡುತ್ತ ಮಗುವಿನ ಗಲ್ಲ ಹಿಡಿದು ನೇವರಿಸಿ ಗೆಜ್ಜೆಯ ಕಾಲು ಘಲುಘಲರೆನುವಂತೆ ಒಂದು ಸಣ್ಣ ಕುಣಿತ ಕುಣಿಯುತ್ತಿದ್ದರು. ಮಧು ಕೇಕೆ ಹಾಕುತ್ತ ಅವರ ಜೊತೆಗೂ ಕುಣಿಯುವುದಕ್ಕಾರಂಭಿಸುತ್ತಿದ್ದ.

"ಈ ಪೋರನಿಗೆ ಸಂಗೀತ ಎಂದರೆ ಈಗಲೇ ಎಷ್ಟು ಇಷ್ಟಾಪ್ಪ"

ಎಂದು ದಾಸರು ನುಡಿಯುತ್ತಿದ್ದರು ಅವರು ಬಂದಾಗಲೆಲ್ಲಾ ಮಧು ಭ್ರಾಂತನಾಗಿ ನಿಂತು ನೋಡುತ್ತಿದ್ದ. ತಂಬೂರಿಯ ನಾದ, ಅದರ ಜೊತೆಗೆ ನಡೆಯುವ ಹಾಡಿಕೆ ಅವನ ಚಿತ್ತವನ್ನು ಸೆರೆಹಿಡಿಯುತ್ತಿತ್ತು. ಈ ನಾದದ ಉಗಮ ಯಾವುದೆಂದು ತಿಳಿದುಕೊಳ್ಳುವ ಕುತೂಹಲ, ಅದನ್ನು ಬೆದಕಿ ನೋಡುವ ಚಪಲ ಆ ಬಾಲಬುದ್ಧಿಯಲ್ಲಿ ತಲೆದೋರಿದೆಯೆಂಬುದನ್ನು ತಿಳಿದು ಕೊಳ್ಳುವುದಕ್ಕೆ ಕಷ್ಟವಾಗುತ್ತಿರಲಿಲ್ಲ. ದಾಸರು ಅವನ ಕುತೂಹಲವನ್ನು ಇನ್ನಷ್ಟು ಕೆರಳಿಸಲು ಮುಖದ ಹತ್ತಿರ ತಂಬೂರಿ ತಂದು ಒಂದು ಮೀಟು ಹಾಕುತ್ತಿದ್ದರು.

"ದಾಸರೇ ಹೀಗೆ ಇವನ ಹತ್ತಿರ ಆಡುತ್ತ ಕುಳಿತುಕೊಂಡರೆ ನೀವು ಹೊಟ್ಟೆಯ ಮೇಲೆ ತಣ್ಣೀರುಬಟ್ಟೆ ಹಾಕಿಕೊಳ್ಳಬೇಕಾದ್ದೇ"

ಎಂದು ಆಚಾರ್ಯರು ಎಚ್ಚರಿಸುತ್ತಿದ್ದರು. ದಾಸರು ನಕ್ಕು ಸುಮ್ಮ ನಾಗುತ್ತಿದ್ದರು.

ವಾರದಲ್ಲಿ ಎರಡು ಮೂರು ದಿನಕ್ಕೊಂದು ಸಲವಾದರೂ ಈ ಆಟ ನಡೆಯದೆ ಇರುತ್ತಿರಲಿಲ್ಲ.

ಸಂಪ್ರದಾಯಸ್ಥರಾದ ಆಚಾರ್ಯರು ಮಗನಿಗೆ ಸಕಾಲದಲ್ಲಿ ಅಕ್ಷರಾ ಭ್ಯಾಸಮಾಡಿಸಿ ಸ್ಕೂಲಿಗೆ ಸೇರಿಸಿದರು. ಎಂಟನೆಯ ವಯಸ್ಸಿನೊಳಗಾಗಿ ಮುಂಜಿಯನ್ನೂ ಮಾಡಿಬಿಟ್ಟರು. ಸಾಯಂಕಾಲದ ಹೊತ್ತು ಸ್ಕೂಲಿನ ಪಾಠ ಓದಿ ಆದ ಮೇಲೆ ಸ್ತೋತ್ರ ಮಂತ್ರ ಹೇಳಿಕೊಟ್ಟು ಬಾಯಿಪಾಠ ಮಾಡಿಸು ತ್ತಿದ್ದರು. ಮಗ ತುಂಬ ಓದಿ ದೊಡ್ಡ ಚಾಕರಿಮಾಡಿ ಕೀರ್ತಿಶಾಲಿಯಾಗ ಬೇಕೆಂದು ಗಂಡ ಹೆಂಡತಿ ಆಸೆ ಪಡುತ್ತಿದ್ದರು. ಅವನು ಹನ್ನೆರಡನೆಯ

ವಯಸ್ಸಿನಲ್ಲಿ ಲೋವರ್‌ಸೆಕೆಂಡರಿ ಪ್ಯಾಸ್ ಮಾಡಿದಾಗ ದಂಪತಿಗಳ ಆನಂದ ಹೇಳತೀರದು. ಹೊಟ್ಟೆ ಬಟ್ಟೆ ಕಟ್ಟೆಯಾದರೂ ಮಗನಿಗೆ ಕಾಲೇಜ್ ವಿದ್ಯಾಭ್ಯಾಸ ಕೊಡಿಸಬೇಕೆಂಬ ಹಂಬಲ ಆಚಾರ್ಯರಿಗೆ ಬಲವಾಯಿತು. ತಾವು ಪಿಂಚನ್ ಆಗಿ ಮನೆಯಲ್ಲಿ ಕುಳಿತುಕೊಳ್ಳುವ ವೇಳೆಗೆ ಮಗ ಒಂದು ದಾರಿ ಹಿಡಿದು, ಕೈತುಂಬ ಸಂಪಾದಿಸಿ ತಮ್ಮನ್ನು ಕಾಪಾಡುವ ಸ್ಥಿತಿಗೆ ಬರುತ್ತಾನೆಂದು ಅವರು ಮನಸ್ಸಿನಲ್ಲೇ ಮಂಡಿಗೆ ಮಾಡಿಕೊಳ್ಳುತ್ತಿದ್ದರು. ಮಗನ ಭವ್ಯ ಭವಿಷ್ಯತ್ತಿನ ಸುಂದರ ಕಲ್ಪನೆಯನ್ನು ತಮ್ಮ ಮನಸ್ಸಿನಲ್ಲಿ ತಾವೇ ರೂಪಿಸಿಕೊಂಡು ನೋಡಿ ಹಿಗ್ಗುತ್ತಿದ್ದರು.

ಆದರೆ ವಿಧಿ ಬೆನ್ನ ಹಿಂದೆ ನಿಂತು ಈ ಸುಖದ ಸನ್ನಾಹವನ್ನು ನೋಡಿ ನಗುತ್ತಿತ್ತು.

ಹುಲುಸಾಗಿ ಬೆಳೆದ ಹಚ್ಚನೆಯ ಹೊಲದಲ್ಲಿ ನಡೆಯುತ್ತ ಇಕ್ಕೆಲಗಳಲ್ಲಿಯೂ ತೂಗಿ ತೊನೆಯುತ್ತಿರುವ ಬಂಗಾರದ ತೆನೆಗಳನ್ನು ನೋಡಿ ಸಂತಸಗೊಳ್ಳುತ್ತಿರುವಾಗ, ಆ ಹಸುರಿನ ಮರೆಯಲ್ಲೇ ಸದ್ದಿಲ್ಲದಂತೆ ಮೆಲ್ಲನೆ ಬೆನ್ನಟ್ಟಿ ಬಂದಿತ್ತು ವಿಧಿವಿಲಾಸದ ಘೋರ ಘಟಸರ್ಪ.

ಇದ್ದಕ್ಕಿದ್ದ ಹಾಗೆ ಅದರ ದಂಶನವಾಯಿತು.

ಒಂದು ಸಂಜೆ ಸ್ಕೂಲು ಮುಗಿಸಿಕೊಂಡು ಬಂದ ರಮಣಾಚಾರ್ಯರು ಮನೆಯಲ್ಲಿ ವಿಶ್ರಮಿಸುತ್ತ ಕುಳಿತುಕೊಂಡಿದ್ದರು. ಹೊಟ್ಟೆಯಲ್ಲಿ ಏನೋ ಸಂಕಟವಾದಂತಾಗಿ ಒಂದುಸಲ ವಾಂತಿಯಾಯಿತು. ತಲೆಗೆ ಕೈಕೊಟ್ಟು ಹಾಗೆಯೇ ಚಾಪೆಯ ಮೇಲೆ ಮಲಗಿಕೊಂಡರು. ವೆಂಕಮ್ಮ ಹಿತ್ತಿಲಕಡೆ ಏನೋ ಕೆಲಸಮಾಡುತ್ತದ್ದವರು ಕೂಗಿದಂತಾಗಲು ಒಳಗೆ ಬಂದರು. ಗಂಡ ಸಂಕಟಪಡುತ್ತಿದ್ದುದನ್ನು ಕಂಡು ಗಾಬರಿಯಾಗಿ ಹತ್ತಿರ ಬಂದು ಕುಳಿತುಕೊಂಡರು.

"ಯಾಕೇಂದ್ರೆ, ಏನಾಗತ್ತೆ ?"

"ಏನೋ ಸಂಕಟ; ಒಂದು ಲೋಟ ನೀರು ಕೊಡು"

ಎಂದು ಆಚಾರ್ಯರು ಕಷ್ಟದಿಂದ ನುಡಿದರು. ವೆಂಕಮ್ಮ ನೀರು ತರಲು ಅಡುಗೆ ಮನೆಗೆ ಎದ್ದು ಹೋದರು. ಬರುವುದರಲ್ಲಿ ಸಂಕಟ ಹೆಚ್ಚಾಗಿತ್ತು.

ಆಚಾರ್ಯರು ಬಾಯಿ ಮುಚ್ಚಿ ಮುಚ್ಚಿ ತೆಗೆಯುತ್ತಿದ್ದರು. ವೆಂಕಮ್ಮನಿಗೆ ಜಂಘಾ ಬಲವೇ ಉಡುಗಿಹೋಯಿತು.

"ಅಯ್ಯೋ ಇನ್ನೇನು ಗತಿ"

ಎನ್ನುತ್ತಾ ಹತ್ತಿರ ಬಂದು ಕುಳಿತುಕೊಂಡರು.

ಆಚಾರ್ಯರು ಕೈ ಎತ್ತಿ ಏನೋ ಹೇಳುವುದಕ್ಕೆ ಪ್ರಯತ್ನಿಸುತ್ತಿದ್ದ ಹಾಗೆಯೇ ತಲೆ ಒಂದು ಕಡೆ ವಾಲಿತು.

"ನಾ....ರಾ....ಯ....ಣ"

ಎಂದು ಹೇಗೋ ಬಾಯಿಂದ ಸ್ಪಷ್ಟಾಸ್ಪಷ್ಟವಾಗಿ ಹೊರಟಿತು. ಮರು ಕ್ಷಣವೇ ಅವರು ಐಹಿಕ ಸಂಕಟದಿಂದ ವಿಮುಕ್ತರಾಗಿದ್ದರು.

"ಅಮ್ಮಾ"

ಎಂದು ಚೀರಾರನೆ ಚೀರಿ ವೆಂಕಮ್ಮ ಪತಿಯ ದೇಹದ ಮೇಲೆ ಉರುಳಿ ಬಿಟ್ಟರು.

ಆಟ ಮುಗಿಸಿಕೊಂಡು ಬಂದಿದ್ದ ಮಧುಸೂದನ,

"ಅಣ್ಣಾ"

ಎಂದು ದೊಡ್ಡದಾಗಿ ಧ್ವನಿ ತೆಗೆದು ರೋದಿಸುವುದಕ್ಕಾರಂಭಿಸಿಬಿಟ್ಟ.

ಸದ್ದು ಕೇಳಿ ಅಕ್ಕಪಕ್ಕದ ಮನೆಗಳವರು ಬಂದು ಸೇರಿದರು.

"ಏನಾಯಿತು, ಏನಾಯಿತು ?"

ಆಗುವುದೇನು, ಒಂದು ಗಳಿಗೆಯ ಹಿಂದೆ ಶಾಂತಿ ತೃಪ್ತಿಗಳು ತುಂಬಿ ತುಳುಕುತ್ತಿದ್ದ ನಂದನದಂಥ ಮನೆ ಕ್ಷಣಮಾತ್ರದಲ್ಲಿ ನರಕವಾಗಿ ಪರಿಣಮಿಸಿತ್ತು.

ಯಾರೋ ಸಮಾಚಾರ ಕೊಡಲು ದಾಸರು, ಅವರ ಹೆಂಡತಿ ಧಾವಿಸಿ ಬಂದರು. ಅಷ್ಟು ಹೊತ್ತಿಗೆ ಯಾರೋ ಹೋಗಿ ಅಗ್ರಹಾರದ ಫಾರ್ಮಸಿಯ ಡಾಕ್ಟರನ್ನೂ ಕರೆತಂದಿದ್ದರು.

ಡಾಕ್ಟರು ಆಚಾರ್ಯರನ್ನು ಪರೀಕ್ಷಿಸಿ ತಲೆ ಅಲ್ಲಾಡಿಸಿಬಿಟ್ಟರು.

"ಹೃದಯಕ್ರಿಯೆ ನಿಂತು ಹೋಗಿದೆ"

ಒಂದು ಕಡೆ ವೆಂಕಮ್ಮ ಮೂರ್ಛಿತರಾಗಿ ಬಿದ್ದಿದ್ದರು. ನರಸಕ್ಕ ತಲೆಗೆ ನೀರು ತಟ್ಟಿ ಆಕೆಯನ್ನು ಸಂತೈಸುತ್ತಿದ್ದರು. ಏನೂ ತಿಳಿಯದ ಬಾಲಕ ಮಧು

ಭಯವಿಸ್ಮಯಗಳಿಂದ ಬೆಪ್ಪಾಗಿ ಒಂದು ಕಡೆ ನಿಂತಿದ್ದ. ಬಂಗಾರದಂಥ ಸಂಸಾರವನ್ನು ನಿಷ್ಕರುಣೆಯಿಂದ ಬಿಟ್ಟು ಆಚಾರ್ಯರು ನಡೆದುಬಿಟ್ಟಿದ್ದರು.

ಅವೊತ್ತು ಆ ಮನೆಗೆ ಬಿದ್ದ ಬೆಂಕಿ ಇಡೀ ಊರಿನ ಜನರ ಎದೆಗೆ ಬಿದ್ದ ಬೆಂಕಿಯಾಯಿತು.

ದಾಸರೇ ಮಧುಸೂದನನನ್ನು ಮುಂದಿಟ್ಟುಕೊಂಡು ಅಂದಿನ ಕಾರ್ಯ ನೆರವೇರಿಸಿದ್ದರು.

ಆಚಾರ್ಯರ ಕಳೇಬರವನ್ನು ಚಿತೆಯ ಮೇಲಿಡುವಾಗ ಧಾರಾಕಾರವಾಗಿ ಸುರಿಯುತ್ತಿದ್ದ ಕಣ್ಣೀರನ್ನು ಒರಸಿಕೊಳ್ಳಲೂ ತೋರದೆ ದಾಸರು,

"ಈ ಹಾಳು ಕೈಯಿಂದಲೇ ನಿಮ್ಮ ತಾಯಿಗೆ ಗತಿಕಾಣಿಸಿದ್ದೆ. ನಿಮಗೂ ನಾನೇ ಮಾಡಬೇಕೆಂದು ಕಾದಿದ್ದಿರಾಪ್ಪಾ? ಇವೊತ್ತಿಗೆ ನಮ್ಮ ಋಣಾನುಬಂಧ ಹರಿಯಿತೆ? ಇನ್ನು ನಿಮ್ಮನ್ನು ಕಾಣಲಾರೆನೇ?"

ಎಂದು ಹೆಂಗಸರಿಗಿಂತ ಹೆಚ್ಚಾಗಿ ಮುಖಕ್ಕೆ ಬಟ್ಟೆ ಹಾಕಿಕೊಂಡು ರೋಧಿಸುವುದಕ್ಕೆ ಉಪಕ್ರಮಿಸಿಬಿಟ್ಟಿದ್ದರು.

"ದಾಸರೇ, ನೀವೇ ಹೀಗೆ ಧೈರ್ಯಗೆಟ್ಟು ಉಳಿದವರ ಕೈಕಾಲು ಕೆಡಿಸಿ ಬಿಟ್ಟರೆ ಹೇಗೆ? ಏಳಿ ಹುಡುಗ ಹೆದರಿಕೊಂಡಾನು?"

ಎಂದು ಪುರೋಹಿತ ಸುಬ್ಬಣ್ಣಾಚಾರ್ಯರು ಎಚ್ಚರಿಸಿದ್ದರು.

ದಾಸರನ್ನು ಸಮಾಧಾನಪಡಿಸಿ ಮನೆಗೆ ಕರೆದುಕೊಂಡು ಬರುವುದೇ ಕಷ್ಟ ವಾಯಿತು.

ಯಾವುದೂ ನಿಲ್ಲುವ ಹಾಗಿರಲಿಲ್ಲ. ಯಥಾಶಕ್ತಿಯಾಗಿ ಅಪರ ಕರ್ಮ. ಗಳು ಜರುಗಿ ವೈಕುಂಠ ಸಮಾರಾಧನೆಯೂ ನಡೆದುಹೋಗಿತ್ತು.

೪

ಕಟ್ಟುತ್ತಿರುವ ಮನೆಯನ್ನು ಅರ್ಧಕ್ಕೇ ಬಿಟ್ಟು ಓಡಿಹೋಗುವವರ ಹಾಗೆ ಆಚಾರ್ಯರು ಹೊರಟು ಹೋಗಿದ್ದರು. ಅವರ ಕಥೆಯೇನೋ ಮುಗಿದು ಹೋಗಿತ್ತು. ಆದರೆ ಉಳಿದವರು ಹೋದವರನ್ನು ನೆನೆದು ಹಗಲಿರುಳೂ ಅಳುವು ದೊಂದೇ ಆಗಿತ್ತು. ಸತ್ತವರಂತೂ ಗೆದ್ದಿದ್ದರು; ಆದರೆ ಬದುಕಿದ್ದವರು ಸಾಯು ವಂತಾಗಿದ್ದರು. ಯಾವ ಸುಖವೂ ಬೇಡ ಸಾವು ಬಂದರೆ ಸಾಕು, ಎರಡು ಕೈಯಲ್ಲೂ ಅಪ್ಪಿಕೊಂಡೇನು ಎನ್ನುವ ಹಾಗಾಗಿತ್ತು ಅವರ ಸ್ಥಿತಿ. ಆದರೆ ಸಾವು ಬರಲೊಲ್ಲದು. ಅಂತೆಯೇ ವೆಂಕಮ್ಮ ಅತ್ತು ಅತ್ತು ಕಂಗಾಲಾಗಿದ್ದರು.

ಒಂದು ವರ್ಷದ ಹಿಂದೆ ಅವರನ್ನು ನೋಡಿದವರಾರಿಗೂ ಈಗ ಅವರನ್ನು ಗುರುತು ಹಿಡಿಯುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ಗುಳಿ ಬಿದ್ದ ಕಣ್ಣು ಕೊನೆ ಗಾಣದ ದುಃಖದ ಕುಲುಮೆಯಾಗಿತ್ತು. ಅಂತೆಯೇ ಶೋಷಿಸಿ ಹಂಜರವಾಗಿದ್ದ ಮೈ ವರ್ಷಾಂತರದಿಂದ ಕಾಹಿಲೆ ಮಲಗಿದ್ದವರನ್ನೂ ನಾಚಿಸುವಂತಿತ್ತು. ಈ ವಯಸ್ಸಿಗೇ ತಲೆಯಲ್ಲಿ ಒಂದೆರಡು ನರೆಕೂದಲು ಕಾಣಿಸಿಕೊಂಡು ಅಕಾಲದ ವೃದ್ಧಾಪ್ಯಕ್ಕೆ ಆಹ್ವಾನ ನೀಡುತ್ತಿತ್ತು.

'ಮಗನನ್ನು ನೋಡಿಕೊಂಡು ಬದುಕಲೇ – ಹೋದ ಗಂಡನನ್ನು ನೆನೆದು ಅಳಲೆ?'

ವೆಂಕಮ್ಮನವರನ್ನು ಇದೊಂದೇ ಚಿಂತೆ ಕಾಡುತ್ತಿತ್ತು. ಎಲ್ಲಿ ಹೋದರೂ ಅದೇ ಚಿಂತೆ. ಕೈಯಿಂದ ನಿವಾರಿಸುತ್ತಿದ್ದರೂ ಹೋಗದೆ ಬಿಟ್ಟು ಬಿಟ್ಟು ಬಂದು

ಮುಖಕ್ಕೆ ಮುತ್ತಿಕೊಳ್ಳುವ ಗುಂಗಾಡಿನ ಹಾಗೆ, ಹೀಗೆ ಹೋದ ಚಿಂತೆ ಹಾಗೆ ಹಿಂತಿರುಗಿ ಬಂದು ಎಡಬಿಡದೆ ಕಾಡುತ್ತಿತ್ತು.

ಅವರು ಕಟ್ಟುತ್ತಿದ್ದ ಕನಸಿನ ಗೋಪುರ ಕಳಚಿ ಬಿದ್ದಿತ್ತು. ಯಾವ ಯಾವುದೋ ಸುಖದ ಕನಸನ್ನು ಕಂಡು ಸಂತಸದಿಂದ ಹಾರುತ್ತಿದ್ದ ಬಯಕೆಯ ಪಕ್ಷಿ ರೆಕ್ಕೆ ಮುರಿದು ನೆಲದಲ್ಲಿ ಕೆಡೆದಿತ್ತು.

ಇದೆಲ್ಲವನ್ನೂ ಏಕಾಪೋಶನ ತೆಗೆದುಕೊಳ್ಳುವಂತೆ ಭಯಂಕರವಾದ ಸಮಸ್ಯೆಯೊಂದು ಭೂತಾಕಾರವಾಗಿ ಎದುರಿಗೆ ಎದ್ದು ನಿಂತು ಗಹಗಹಿಸಿ ನಗುತ್ತಿತ್ತು.

" ಮುಂದೇನು ಮಾಡುವೆ ?"

" ಹೌದು, ಮುಂದೇನು ಗತಿ ? ಬಾಳು ನೂಕುವುದು ಹೇಗೆ ?

ತೆರೆಯ ಮೇಲೆ ತೆರೆಯೆದ್ದು ಬಂದು ಬಡಿಯುವಂತೆ ಒಂದೇ ಸಮನಾಗಿ ಬಂದೆರಗುತ್ತಿತ್ತು ಪ್ರಶ್ನೆ.

ತವರುಮನೆಯ ಆಸೆಯೆ ?

ಅವರ ಸ್ಥಿತಿಯೇ ಚೆನ್ನಾಗಿರಲಿಲ್ಲ. ಬರುವುದು ಅವರ ಹೊಟ್ಟೆಬಟ್ಟೆಗೇ ಸಾಲದಾಗಿತ್ತು. ಅವರೆಷ್ಟು ದಿನ ಸಾಕಿಯಾರು ? ಹೊಟ್ಟೆಬಟ್ಟೆಗಳ ಗತಿ ಹೇಗೆ ? ಮಗನ ವಿದ್ಯಾಭ್ಯಾಸ ಹೇಗೆ ? ಯಾರ ಕಾಲು ಕಟ್ಟುವುದು ? ಯಾರನ್ನು ಆಶ್ರಯಿಸುವುದು ? ಭಿಕ್ಷೆ ಬೇಡುವುದೆ ? ಇಲ್ಲ, ಮಗನನ್ನೂ ಕಟ್ಟಿಕೊಂಡು ಕೆರೆಗೋ ಬಾವಿಗೋ ಬೀಳುವುದೆ ? ಕಂಡವರ ಎಂಜಲಿಗೆ ಕೈಯೊಡ್ಡುವುದೆ ? ಅಥವಾ ಕೂಲಿ ಮಾಡಿ ಬದುಕುವುದೆ ?

ಕೂಲಿ ?

ಏಕಾಗಬಾರದು ? ಎಷ್ಟು ಜನ ಹೀಗೆ ಬದುಕುತ್ತಿಲ್ಲ ? ಸಾಯದೆ ಇರುವವರೆಷ್ಟೋ ಮಂದಿ ಹೀಗೆಯೇ ಒದ್ದಾಡಿ ಬೇಡದ ಬಾಳಿಗೆ ಜೋತು ಬಿದ್ದಿಲ್ಲವೆ ? ಬದುಕಿನ ಸುಳಿ ಪಾತಾಳಕ್ಕೆಳೆಯುತ್ತಿದ್ದರೂ ಮುಳುಗಿ ಮುಗಿದು ಹೋಗಲಾರದೆ ಹೊಂಡಾಟ ಮಾಡುತ್ತಿರುವವರೆಲ್ಲ ಜೀವಕ್ಕೂ ಈ ಹುಲ್ಲು ಕಡ್ಡಿಯೇ ಆಶ್ರಯವಾಗಿಲ್ಲವೆ ?

ಅಯ್ಯೋ ಬದುಕೆ !

ವೆಂಕಮ್ಮ ಕೊನೆಗಾಣದ ಚಿಂತೆಯಲ್ಲಿ ಹಣ್ಣಾದರು.

ರಮಣಾಚಾರ್ಯರು ಕೂಡಿಸಿಟ್ಟಿದ್ದ ಪುಡಿಕಾಸು ಖರ್ಚಾಗಲು ಹೆಚ್ಚು ದಿನ ಬೇಕಾಗಿರಲಿಲ್ಲ. ಇದ್ದ ಅಲ್ಪ ಸ್ವಲ್ಪ ಪಾತ್ರೆ ಪಡಗುಗಳು ಸೇಟಿನಂಗಡಿಯ ಹಾದಿ ಹಿಡಿಯಲೂ ಹೆಚ್ಚು ಕಾಲ ಬೇಕಾಗಿರಲಿಲ್ಲ.

ದಾಸರಿಗೆ ಈ ಸ್ಥಿತಿ ಗೊತ್ತಿಲ್ಲದೆ ಇರಲಿಲ್ಲ. ಆದರೆ ಗೊತ್ತಿದ್ದೂ ಅವರೇನೂ ಮಾಡುವ ಹಾಗಿರಲಿಲ್ಲ. ಜೋಳಿಗೆ ದಾಸಯ್ಯನ ಹತ್ತಿರ ಹೋಳಿಗೆ ಕೇಳಿದ ಹಾಗೆ ಅವರೇ ನಿಸ್ಸಹಾಯಕರಾಗಿದ್ದರು. ಕೈಯೆತ್ತಿ ಕೊಡಲು ಅವರಲ್ಲಿ ಏನೂ ಇರಲಿಲ್ಲ. ಸಹಾಯ ಮಾಡುವ ಸ್ಥಿತಿಯಂತೂ ಅವರದಾಗಿರಲಿಲ್ಲ.

ವೆಂಕಮ್ಮನ ತಲೆಯಲ್ಲಿ ಸುಳಿದು ಸುಳಿದು ಹಿಮ್ಮೆಟ್ಟುತ್ತಿದ್ದ ಯೋಚನೆ ದಾಸರ ತಲೆಯಲ್ಲಿಯೂ ಸುಳಿಯದಿರಿಲಿಲ್ಲ.

ಭಗ್ನವಾದ ಈ ಕುಟುಂಬದ ಬಾಳಿನ ಗತಿಯೆಂತು?

ಹುಡುಗನ ಭವಿಷ್ಯಕ್ಕೆ ಕಲ್ಲು ಬಿತ್ತೆ?

ಹಾಗಾಗಬಾರದು. ಹಾಗಾಗುವುದಕ್ಕೆ ಅವಕಾಶ ಕೊಡಬಾರದು. ದಿನವೆಲ್ಲ ಏನೋ ಯೋಚನೆ ಮಾಡುವರು. ಅಳೆದು ಸುರಿಯುವರು. ಯೋಚನೆ ಮಾಡಿದಷ್ಟೂ ಸಮಸ್ಯೆ ಗಭೀರವಾಗುವುದು.

ನರಸಕ್ಕ ಆಗಾಗ ಅಕ್ಕಪಕ್ಕದ ಮನೆಗಳಿಗೆ ಪುಡಿ ಸಡಿ ಮಾಡಿ ಕೊಡುವುದಕ್ಕೆ ಹೋಗಿಬರುತ್ತಿದ್ದರು. ಅದರಿಂದ ಏನೋ ನಾಲ್ಕು ಪುಡಿಕಾಸು ಸಿಕ್ಕುತ್ತಿತ್ತು. ಅವರ ಸಂಸಾರಕ್ಕೆ ಈ ಬಗೆಯ ಜೀವನ ಒಗ್ಗಿ ಬಂದಿತ್ತು. ಆದರೆ ಆಚಾರ್ಯರ ಹೆಂಡತಿಗೆ ಇದು ಒಗ್ಗುವುದೆ? ಏನೋ ಇದ್ದಷ್ಟು ಕಾಲ ಆಕೆ ತಕ್ಕ ಮಟ್ಟಿನ ಸುಖದಲ್ಲಿಯೇ ಇರಲಿಲ್ಲವೆ? ಈಗಿನ ತಾಪತ್ರಯದಲ್ಲಿ ಆಕೆ ಇದಕ್ಕೆ ಒಪ್ಪುವರೋ ಹೇಗೋ?

ಎಷ್ಟೋ ದಿನ ಗಂಡಹೆಂಡತಿಯರು ತುದಿನಾಲಗೆಯವರೆಗೂ ಬಂದಿದ್ದ ಮಾತನ್ನು ಆಡದೆ ತಡೆದುಕೊಂಡಿದ್ದುದುಂಟು. ಆದರೆ ಹಾಗೆ ಬಹುಕಾಲ ಸುಮ್ಮನಿರಲು ಸಾಧ್ಯವೇ ಇರಲಿಲ್ಲ. ಒಂದು ದಿನ ತಡೆಯಲಾರದೆ ದಾಸರು,

"ಏನಾದರೂ ಯೋಚನೆ ಮಾಡಿದ್ದೀಯಾ?"

"ಏನು ಯೋಚನೆ ಮಾಡಲಿ ಹೇಳಿ?"

"ಆಕೆಯ ತಾಪತ್ರಯವನ್ನು ನೋಡುವುದಕ್ಕಾಗುವುದಿಲ್ಲ ಕಣೆ, ಅವರ ಜೀವನಕ್ಕೇನಾದರೂ ಮಾರ್ಗ ಆಗಬೇಡವೆ?"

" ನೀವು ಕಂಡಹಾಗೆ ಪಾಪ ಆ ಪ್ರಾಣಿಗೆ ಬೇರೆ ಮಾರ್ಗ ಯಾವುದಿದೆ ಹೇಳಿ ? ಇರುವುದೊಂದೇ ಮಾರ್ಗ."

" ಅದನ್ನೂ ನಾನು ಯೋಚಿಸುತ್ತಿದೇನೆ. ಆದರೆ ವೆಂಕಮ್ಮ ಅದಕ್ಕೊಪ್ಪುವರೆ ?"

" ಕೇಳಿ ನೋಡಬೇಕು."

" ಕೇಳು, ಮೊದಲು ಕೇಳಿ ನೋಡು."

ಮಾರನೆಯ ದಿನ ನರಸಕ್ಕ ಮಧ್ಯಾಹ್ನದ ಊಟವಾದ ಮೇಲೆ ಹತ್ತಿಬುಟ್ಟಿ ಕೈಯಲ್ಲಿ ಹಿಡಿದು ಆಚಾರ್ಯರ ಮನೆಗೆ ಬಂದು ಕುಳಿತರು. ಆ ಮಾತು ಈ ಮಾತು ಆಡುತ್ತ ತಮ್ಮ ಮನಸ್ಸಿನಲ್ಲಿದ್ದುದನ್ನು ಸೂಕ್ಷ್ಮವಾಗಿ ನುಡಿದರು.

" ಈ ಹಣೆಯಲ್ಲಿ ಇನ್ನೂ ಏನೇನು ಬರೆದಿದೆಯೋ. ಆಗುವುದನ್ನೆಲ್ಲ ಅನುಭವಿಸಲೇಬೇಕಲ್ಲಮ್ಮಾ "

ಎಂದರು ವೆಂಕಮ್ಮ ಕಣ್ಣಲ್ಲಿ ನೀರು ತಂದುಕೊಳ್ಳುತ್ತ.

" ನೀವು ಕಣ್ಣಲ್ಲಿ ನೀರು ಹಾಕಿಕೊಳ್ಳಬೇಡಿ, ವೆಂಕಮ್ಮ. ನಿಮ್ಮನ್ನ ನೋಡಿದರೆ ನನ್ನ ಕರುಳು ಕಿತ್ತುಬರುತ್ತೆ."

" ಹಡಗಿನಂಥ ಸಂಸಾರ ನಡುನೀರಿನಲ್ಲಿ ಬಿಟ್ಟುಹೋದರಲ್ಲಾ ನರಸಕ್ಕ."

" ಅವರು ಬಯಸಿ ಹೋದರೆ, ತಾಯಿ ? ದೇವರಿಗೆ ಕಣ್ಣಿದ್ದರೆ ಅವರು ಇಷ್ಟು ಬೇಗ ಹೋಗಬೇಕಾಗಿತ್ತೆ ?"

" ಅವನಿಗೆ ಕಣ್ಣಿದೆಯೋ ಇಲ್ಲವೋ, ನಮ್ಮ ಕಣ್ಣನ್ನಂತೂ ಕಿತ್ತುಕೊಂಡ. ಈ ಪಾಪಿ ಜೀವ ಇನ್ನು ಬದುಕಿ ಏನು ಸಾರ್ಥಕ ?"

" ಮಗುವನ್ನಾದರೂ ನೋಡಿಕೊಂಡು ಬದುಕಿರಬೇಕಲ್ಲಮ್ಮಾ."

" ಆ ಹೊಣೆಯನ್ನೂ ನನ್ನ ಮೇಲೇ ಹಾಕಿಬಿಟ್ಟು ಹೊರಟುಹೋದರು."

ದುಃಖ ಉಕ್ಕಿ ಬಂದಿತು. ಇಬ್ಬರೂ ಮನಸ್ಸು ಸಮಾಧಾನವಾಗುವವರೆಗೂ ಅತ್ತರು.

" ಹಗಲೆಲ್ಲಾ ಹೀಗೆ ದುಃಖದಲ್ಲಿ ಬೆಂದರೆ ಪ್ರಯೋಜನವೇನಮ್ಮಾ ? ಧೈರ್ಯ ತಂದುಕೊಳ್ಳಬೇಕರೀ. ಹೋದ ಪದಾರ್ಥ ಹಿಂತಿರುಗಿ ಬರುವುದೇ ವೆಂಕಮ್ಮ ? ಮುಂದಿನ ದಾರಿ ನೋಡಿ. ನೀವೂ ಹೀಗೆ ಅತ್ತು ಅತ್ತು ಕೃಶವಾಗಿ ನಾಳೆ ಕಣ್ಣು ಮುಚ್ಚಿಕೊಂಡುಬಿಡಿ. ಆ ಮಗು ಬೀದಿಯಲ್ಲಿ ನಿಂತುಕೊಳ್ಳತ್ತೆ "

ಎಂದು ನರಸಕ್ಕ ಸ್ವಲ್ಪ ಗದರಿಸುವ ಧ್ವನಿಯಲ್ಲಿ ನುಡಿದರು.

"ಅಳುವುದಿಲ್ಲಮ್ಮಾ, ಅಳುವುದಿಲ್ಲ."

ನರಸಕ್ಕ ಒಂದು ಗಳಿಗೆ ಬಿಟ್ಟು,

"ಹಾಗಾದರೆ ನಾನು ಹೇಳಿದ ವಿಷಯ ಯೋಚನೆ ಮಾಡುತ್ತೀರಾ? ಸಮಾಧಾನವಿದ್ದರೆ ಹೇಳಿ, ಇಲ್ಲದಿದ್ದರೆ ಬೇಡ. ನಿಮ್ಮನ್ನು ಕೇಳುವುದಕ್ಕೆ ನನಗೆ ಬಾಯೇ ಬರುವುದಿಲ್ಲ"

ಎಂದರು.

"ಒಪ್ಪಿಕೊಳ್ಳದಿದ್ದರೆ ವಿಧಿಯೇ ಇಲ್ಲವಲ್ಲರೀ"

ಎಂದು ವೆಂಕಮ್ಮ ನಿರುತ್ಸಾಹದಿಂದ ಉತ್ತರವಿತ್ತರು.

ಎಲ್ಲಿಗೆ ಹೋಗುವುದಕ್ಕೂ ಅಪಮಾನ, ಏನು ಮಾಡುವುದಕ್ಕೂ ಜೀವ ಹಿಡಿಯಾಗುತ್ತಿತ್ತು. ಒಂದು ಮನೆಯ ಯಜಮಾನಿತಿಯಾಗಿದ್ದವಳು ಹೆರರ ಮನೆಯಲ್ಲಿ ಕೂಲಿಗೆ ಹೋಗುವುದಕ್ಕಿಂತ ಹೀನಾಯವಾದ ಪ್ರಸಂಗ ಇನ್ನೊಂದಿರಲಿಲ್ಲ. ಮೆಣಸಿನಕಾಯಿ ಪುಡಿಯೋ, ಚಟ್ನಿ ಪುಡಿಯೋ, ಮೆಂತ್ಯದ ಹಿಟ್ಟೋ ಮಾಡುವುದು, ಹಪ್ಪಳ ಲಟ್ಟಿಸಿ ಸಂಡಿಗೆ ಹಾಕಿಕೊಡುವುದು, ಸಮಯ ಬಿದ್ದರೆ ಯಾರ ಮನೆಗಾದರೂ ಅಡುಗೆಗೆ ಹೋಗುವುದು ವೆಂಕಮ್ಮನವರ ದಿನಚರಿಯಾಗಿತ್ತು. ಅಗ್ರಹಾರದಲ್ಲಿ ಗುರುತು ಕಂಡವರಿರುತ್ತಾರೆಂದು ಶಿವರಾಮಪೇಟೆ, ಹಳ್ಳದ ಕೇರಿ, ದಿವಾನರ ಅಗ್ರಹಾರಗಳಿಗೆ ಹೋಗಿಬರುತ್ತಿದ್ದರು. ನರಸಕ್ಕ ಅವರನ್ನೂ ಜೊತೆಯಲ್ಲಿ ಕರೆದೊಯ್ದು ಅನೇಕ ಮನೆಗಳ ಪರಿಚಯ ಮಾಡಿಕೊಟ್ಟಿದ್ದರು.

ಇದರಿಂದ ಬರುತ್ತಿದ್ದ ಪುಡಿಕಾಸು ಜೀವನಕ್ಕೆ ಸಾಲದಾಗಿತ್ತು. ಮನೆ ಬಾಡಿಗೆ, ಮಧುಸೂದನನ ವಿದ್ಯಾಭ್ಯಾಸದ ವೆಚ್ಚ, ಸ್ಕೂಲು ಫೀಜುಗಳಿಗೆ ಯಾರಾದರೂ ಪುಣ್ಯಾತ್ಮರ ಕೈಕಾಲು ಕಟ್ಟಬೇಕಾಗಿತ್ತು. ದಾಸರು ಅಲ್ಲಿ ಇಲ್ಲಿ ಹೇಳಿ ಮಧುವಿಗೆ ಒಂದೊಂದು ದಿನ ಒಬ್ಬೊಬ್ಬರ ಮನೆಯಲ್ಲಿ ಹಗಲುಹೊತ್ತು ವಾರ ಕೊಡಿಸಿದ್ದರು. ಅದಕ್ಕೂ ಎಷ್ಟೋ ದಾಕ್ಷಿಣ್ಯ ಖರ್ಚಾಗಬೇಕಾಯಿತು; ಅವರಿವರನ್ನು ಎಷ್ಟೋ ಅಜೂಜುವಾರಿ ಮಾಡಬೇಕಾಯಿತು. ಆಚಾರ್ಯರ ಪರಿಚಯವಿದ್ದ ಒಬ್ಬಿಬ್ಬರು ಗೃಹಸ್ಥರು ಆಗಾಗ್ಗೆ ಏನಾದರೂ ಸಹಾಯ ಮಾಡುತ್ತಿದ್ದರು.

ವೆಂಕಮ್ಮನಿಗಂತೂ ಒಪ್ಪೊತ್ತೇ ಊಟ. ಮಧುಸೂದನನಿಗೆ ಒಂದೊಂದು

ದಿನ ರಾತ್ರಿ ಊಟಕ್ಕೆ ಇದ್ದರೆ ಇತ್ತು, ಇಲ್ಲದಿದ್ದರೆ ಇಲ್ಲ. ದಾಸರು ಕಂಡಾಗ ತಮ್ಮ ಮನೆಗೆ ಕರೆದುಕೊಂಡು ಹೋಗುತ್ತಿದ್ದರು. ಇಲ್ಲದಿದ್ದಾಗ ತಾಯಿ ಮಗ ಇಬ್ಬರೂ ಕಣ್ಣು ತುಂಬ ಅತ್ತು, ಹೊಟ್ಟೆತುಂಬ ತಣ್ಣೀರು ಕುಡಿದು ಮಲಗಿ ಕೊಳ್ಳುತ್ತಿದ್ದರು.

ತಿಂಗಳಲ್ಲಿ ಇಂಥ ಬಲವಂತದ ಉಪವಾಸಗಳು ಹತ್ತು ಹನ್ನೆರಡಾದರೂ ಒದಗದೆ ಇರುತ್ತಿರಲಿಲ್ಲ.

ವಿಧಿಗೆ ಈ ಸ್ಥಿತಿಯೂ ಸಮಾಧಾನಕರವಾಗಿದ್ದಂತೆ ತೋರಲಿಲ್ಲ.

ಇದಕ್ಕೂ ಊನ ಬರುವಂಥ ಒಂದು ಪ್ರಸಂಗ ನಡೆಯಿತು.

ವೆಂಕಮ್ಮ ಶಿರಸ್ತೇದಾರ್ ಪುರುಷೋತ್ತಮರಾಯರ ಮನೆಯಲ್ಲಿ ಅಡುಗೆಗೆ ಒಪ್ಪಿಕೊಂಡಿದ್ದರು. ಅದನ್ನು ಕುದುರಿಸಿಕೊಟ್ಟಿದ್ದವರೂ ನರಸಕ್ಕನೇ. ಪುರುಷೋತ್ತಮರಾಯರ ಹೆಂಡತಿ ಭಾಗೀರಥಿ ಹೆರಿಗೆಗೆ ತವರುಮನೆಗೆ ಹೋಗಲೇ ಬೇಕಾಗಿ ಬಂದಿತ್ತು. ಹತ್ತು ವರ್ಷದ ಮೇಲೆ ಎರಡನೇ ಹೆರಿಗೆ. ಇಲ್ಲೇ ಇದ್ದು ಯಾರ ಕೈಯಲ್ಲಾದರೂ ಬಾಣಂತನ ಮಾಡಿಸಿಕೊಳ್ಳಲು ಆಕೆಗೆ ಧೈರ್ಯವಿರಲಿಲ್ಲ. ತವರುಮನೆಯವರ ಒತ್ತಾಯವೂ ಬಲವಾಗಿತ್ತು. ಈ ಸಲ ಮೈಬಿಟ್ಟು ಕಳೆದರೆ ಸಾಕೆಂದು ಎಲ್ಲರೂ ತಪಿಸುತ್ತಿದ್ದರು. ಗಂಡ - ಮಗನಿಗೆ ಅಡುಗೆ ಮಾಡಿ ಬಡಿಸಿ ಹೋಗಲು ವೆಂಕಮ್ಮನವರನ್ನು ಗೊತ್ತುಮಾಡಿಕೊಟ್ಟು ಭಾಗೀರಥೀಬಾಯಿ ಹೊರಟು ಹೋಗಿದ್ದಳು.

ಸ್ಕೂಲಿಗೆ ಹೋಗುವ ಹುಡುಗ, ಆಫೀಸಿಗೆ ಹೋಗುವ ತಂದೆ ಇಬ್ಬರಿಗೂ ಅಡುಗೆ ಮಾಡಿ ಬಡಿಸಿ ತಾವೂ ಊಟ ಮಾಡಿಕೊಂಡು ಉಳಿದ ಅಡುಗೆಯನ್ನು ರಾತ್ರಿಗೆ ಮುಚ್ಚಿಟ್ಟು ವೆಂಕಮ್ಮ ಬರುತ್ತಿದ್ದರು. ರಾತ್ರಿ ಬೇಕಾದರೆ ತಂದೆ ಮಗ ಸೇರಿ ಒಂದು ಅನ್ನ ಮಾಡಿಕೊಳ್ಳುತ್ತಿದ್ದರು. ಶ್ರೀಧರ ಹನ್ನೊಂದು ಘಂಟೆಯ ವರೆಗೂ ಮನೆಯಲ್ಲೇ ಇರುತ್ತಿದ್ದ. ಯಾವುದಾದರೂ ಸುತ್ತು ಕೆಲಸಕ್ಕೆ ಒದಗುತ್ತಿದ್ದ. ಪರರ ಮನೆ; ಪರ ಗಂಡಸು. ಜೊತೆಗೆ ಒಂದು ಪಿಳ್ಳೆ ಅಂತ ಇದ್ದರೆ ಎಷ್ಟೋ ವಾಸಿ ಎಂದುಕೊಂಡು ವೆಂಕಮ್ಮ ಧೈರ್ಯವಾಗಿದ್ದರು. ಆದರೆ ಆ ಧೈರ್ಯದ ಬೇರು ಅಲ್ಲಾಡಿ ಹೋಗುವ ಘಟನೆ ಒಂದು ದಿನ ನಡೆಯಿತು.

ಅಂದು ಅಮಾವಾಸ್ಯೆ. ಶ್ರೀಧರ ಬೆಳಗಿನ ಸ್ಕೂಲಿಗೆ ಹೊರಟುಹೋಗಿದ್ದ.

ವೆಂಕಮ್ಮ ಒಬ್ಬರೇ ಅಡುಗೆಮನೆಯಲ್ಲಿ ಕುಳಿತು ಅಡುಗೆ ಮಾಡುತ್ತಿದ್ದರು.

ರಾಯರು ರೂಮಿನಲ್ಲಿ ಕುಳಿತು ಪತ್ರಿಕೆ ಓದುತ್ತಿದ್ದರು.

ಇದ್ದಕ್ಕಿದ್ದಹಾಗೆ ಬಾಗಿಲ ಸದ್ದಾಯಿತು. ಶ್ರೀಧರ ಬಂದನೇನೋ ಎಂದು ವೆಂಕಮ್ಮ ತಮ್ಮ ಪಾಡಿಗೆ ತಾವು ತಲೆ ಬಗ್ಗಿಸಿಕೊಂಡು ಅಡುಗೆಯ ಕೆಲಸದಲ್ಲೇ ಇದ್ದರು.

ಅಡುಗೆಮನೆಯ ಬಳಿ ಹೆಜ್ಜೆಯ ಸಪ್ಪಳವಾಯಿತು.

"ಶ್ರೀಧರಾ, ಸ್ಕೂಲು ಮುಗಿಯಿತೇನಪ್ಪಾ ?"

ಎಂದು ತಿರುಗಿ ನೋಡದೆಯೆ ಕೇಳಿದರು ವೆಂಕಮ್ಮ.

ಉತ್ತರವಿಲ್ಲ.

ಏಕೋ ಎದೆಯಲ್ಲಿ ಧಿಗ್ ಎಂದ ಹಾಗೆ ಆಗಿ ಹಿಂತಿರುಗಿ ನೋಡಿದರು. ರಾಯರು ಮುಸಿ ಮುಸಿ ನಗುತ್ತ ಅಡುಗೆಮನೆಯ ಬಾಗಿಲಲ್ಲಿ ನಿಂತಿದ್ದರು. ವೆಂಕಮ್ಮನವರಿಗೆ ಜಂಘಾಬಲವೇ ಉಡುಗಿಹೋಯಿತು. ಗಂಟಲಲ್ಲಿ ಸ್ವರವೇ ಏಳಲಿಲ್ಲ.

"ಏನು ಬೇಕು ?"

ಎಂದು ನಾಲಿಗೆ ತಡವರಿಸುತ್ತಿರಲು ಇಲ್ಲದ ಧೈರ್ಯ ತಂದುಕೊಂಡು ಕೇಳಿದರು.

"ಏನು ಬೇಕು ಎಂದು ಕೇಳಬೇಕೆ ?"

ಎಂದು ರಾಯರು ಮುಗುಳ್ನಗೆ ಸೂಸಿ ಅರ್ಥಗರ್ಭಿತವಾಗಿ ನುಡಿದು ಎರಡು ಹೆಜ್ಜೆ ಮುಂದಿಟ್ಟರು.

"ಅಯ್ಯೋ, ಇನ್ನೇನು ಗತಿಯಮ್ಮಾ"

ಎಂದು ವೆಂಕಮ್ಮ ನಡಗುವ ಧ್ವನಿಯಲ್ಲಿ ನುಡಿಯುತ್ತ ಏಳುವುದಕ್ಕೆ ಪ್ರಯತ್ನಿಸಿದರು. ಆದರೆ ಥರಗುಟ್ಟುತ್ತಿದ್ದ ಕಾಲುಗಳು ಅದಕ್ಕೆ ಆಸ್ಪದಕೊಡಲಿಲ್ಲ. ಅಷ್ಟರಲ್ಲಿ ರಾಯರ ಕೈ ವೆಂಕಮ್ಮನವರ ಭುಜದ ಮೇಲೆ ಬಿದ್ದಿತ್ತು.

"ಈ ಸಮಯಕ್ಕೆ ಎಷ್ಟೋ ದಿನಗಳಿಂದ ಕಾಯುತ್ತಿದ್ದೆ. ಇಂಥ ರೂಪ ಕಾಡು ಬೆಳದಿಂಗಳಂತಾಗಬಾರದು, ವೆಂಕೂ"

ಎನ್ನುತ್ತ ರಾಯರು ವೆಂಕಮ್ಮನ ಮುಖವನ್ನು ಹಿಡಿದು ತಮ್ಮೆಡೆಗೆ ತಿರುಗಿಸಿಕೊಳ್ಳಲೆತ್ನಿಸಿದರು.

ವೆಂಕಮ್ಮನವರಿಗೆ ಮೈ ಝಲ್ಲೆಂದು ಬೆವತುಹೋಯಿತು.

" ಅಯ್ಯೋ "

ಎಂದು ಚೀರಿ ನಿಂತ ನಿಲುವಿನಲ್ಲೇ ನೆಲಕ್ಕೆ ಕುಕ್ಕುರಿಸಿಕೊಂಡುಬಿಟ್ಟರು. ಅಷ್ಟರಲ್ಲಿ " ಅಣ್ಣಾ " ಎಂದು ಶ್ರೀಧರ ಹೊರಗೆ ಕೂಗಿದ ಸದ್ದಾಯಿತು. ರಾಯರು ಹಲ್ಲುಮುಡಿ ಕಡಿಯುತ್ತ ಹೊರಗೆ ಹಾರಿದರು.

ಶ್ರೀಧರ ಒಳಗೆ ಬಂದು ನೋಡಿದಾಗ ವೆಂಕಮ್ಮ ಜೀವ ಹೋದಂತಾಗಿ ನೆಲವನ್ನಪ್ಪಿ ಕುಳಿತಿದ್ದುದು ಕಾಣಿಸಿತು.

" ಏಕೆ ವೆಂಕತ್ತೆ ಹೀಗೆ ಕುಳಿತುಬಿಟ್ಟರಿ, ಮೈ ಚೆನ್ನಾಗಿಲ್ಲವೆ ?"

ಎಂದ. ವೆಂಕಮ್ಮನವರಿಗೆ ಹೋದ ಉಸಿರು ಬಂದ ಹಾಗಾಗಿತ್ತು. ಆದರೆ ಎದೆ ಡವಡವ ಎಂದು ಹೊಡೆದುಕೊಳ್ಳುವುದು ಇನ್ನೂ ನಿಂತಿರಲಿಲ್ಲ. ಕಣ್ಣಿಂದ ಹನಿಹನಿಯಾಗಿ ನೀರು ಇಳಿಯುತ್ತಿತ್ತು.

" ನನ್ನ ಭಾಗ್ಯದ ದೇವರ ಹಾಗೆ ಬಂದೆಯಪ್ಪಾ. ಅಡುಗೆ ಮಾಡಿಟ್ಟಿದೀನಿ. ಬಡಿಸಿಕೊಂಡು ಊಟ ಮಾಡಿ "

ಎಂದು ಹೇಳಿ ಒಂದು ಕ್ಷಣವೂ ಅಲ್ಲಿ ನಿಲ್ಲದೆ ಹೊರಟುಬಿಟ್ಟರು.

ಶ್ರೀಧರನಿಗೆ ಏನೂ ಅರ್ಥವಾಗದೆ ಬೆಪ್ಪನ ಹಾಗೆ ನೋಡುತ್ತ ನಿಂತಿದ್ದ.

ಸುದ್ದಿ ಕೇಳಿ ನರಸಕ್ಕ ಕಿಡಿಕಿಡಿಯಾದರು; ಪುರುಷೋತ್ತಮರಾಯನಿಗೆ ಹಿಡಿಶಾಪ ಹಾಕಿದರು.

" ಏನಾದರೂ ಹೆಚ್ಚು ಕಡಮೆಯಾಗಿದ್ದಿದ್ದರೆ ಏನು ಗತಿಯಮ್ಮಾ ? ನಿಮ್ಮ ಪಾಡೇನಾಗುತ್ತಿತ್ತೋ, ನನಗೆ ಯಾವ ಅಪಖ್ಯಾತಿ ಬರುತ್ತಿತ್ತೋ. ಸದ್ಯ ಅಷ್ಟರಲ್ಲೇ ಪಾರಾಯಿತಲ್ಲಾ ಗಂಡಾಂತರ. ಎಷ್ಟು ದಿನದಿಂದ ಹೊಂಚುಹಾಕಿ ಕೊಂಡಿದ್ದನೋ ಏನೋ. ಅಯ್ಯೋ ಪಾಪಿ ಮುಂಡೇಮಗನೇ, ಅವನಿಗೇನು ಬಂದಿತ್ತರೀ ಕೇಡು, ಮನೇಲಿ ಅಂಥಾ ದಿವಿನಾದ ಹೆಂಡತಿ ಇರೋವಾಗ ?"

" ಅಂಥಾ ವಿದ್ಯ ಕಲಿತವರಿಗೆ ಚಪಲ ಇದ್ದೇ ಇರುತ್ತಂತರೀ "

ಎಂದು ಇಬ್ಬರ ಮಾತಿನ ಮಧ್ಯೆ ತಲೆಹಾಕಿದ ಸುಬ್ಬಾಜೋಯಿಸರ ಹೆಂಡತಿ ನುಡಿದಳು.

" ಅವನ ಮೂತಿ ಸುಟ್ಟರು "

ಎಂದು ನರಸಕ್ಕ ಲಟಕ್ಕನೆ ನೆಟ್ಟಿಕೆ ಮುರಿದರು.

ಅದೇ ಅದು, ವೆಂಕಮ್ಮನವರಿಗೆ ಇನ್ನೊಬ್ಬರ ಮನೆಯ ಅಡುಗೆಯ ಹವ್ಯಾಸ ಬಿಟ್ಟುಹೋಯಿತು.

ಅದರಿಂದ ಲಭಿಸುತ್ತಿದ್ದ ಅನ್ನ - ಅರ್ಥಗಳ ಪ್ರಯೋಜನವೂ ಅದರ ಹಿಂದೆಯೇ ಹೊರಟುಹೋಗಿತ್ತು. ಬರೀ ಪರಿಚಾರಿಕೆಯ ಕೆಲಸದಿಂದ ಬರುವುದಷ್ಟನ್ನೇ ಅವಲಂಬಿಸಿ ಕೂಡಬೇಕಾಯಿತು.

ಒಂದು ಚಿಂತೆ ನೀಗಿತೆಂದರೆ ಅದೇ ಇನ್ನೂ ಹತ್ತು ಮರಿ ಹಾಕಿ ಮುಂದೆ ಹೊರಟುಹೋಗಿತ್ತು.

ಎಲ್ಲಿ ಹೋದರೂ ಸುತ್ತಿಕೊಂಡು ಸುತ್ತಿಕೊಂಡು ಅಲ್ಲಿಗೇ ಬರುತ್ತಿತ್ತು.

ರಾತ್ರಿ ಕೆಟ್ಟಕನಸುಗಳ ನಡುವೆ ತಡವರಿಸುತ್ತ, ಒಮ್ಮೊಮ್ಮೆ ನಿದ್ದೆ ಎನ್ನುವ ಮಾಯಾಮೃಗ ಹತ್ತಿರ ಸುಳಿದಾಗ ಕ್ಷಣಕಾಲ ಮೈಮರೆಯುತ್ತಿದ್ದ ಜೀವ ಜಾಗೃತಿಗೆ ಮರಳಿದೊಡನೆ "ನಾನು ಎಲ್ಲೂ ಹೋಗಿಲ್ಲ, ಇಲ್ಲೇ ಇದ್ದೇನೆ" ಎಂದು ಜ್ಞಾಪಿಸುವಂತೆ ಬದುಕಿನ ಪ್ರಶ್ನೆ ಭೂತದಂತೆ ಬಂದು ಮುಂದೆ ನಿಲ್ಲುತ್ತಿತ್ತು.

ಆ ಹೆಣ್ಣು ಜೀವಕ್ಕೆ ಹೇಗೂ ಸುಖವಿರಲಿಲ್ಲ.

## ೫

ಮುಂದಿನ ಸುಖಕ್ಕಾದರೂ ಮಗ ನೆರವಾದಾನೇನೋ ಎನ್ನುವ ದೂರದ ಆಸೆಯಿಂದ ವೆಂಕಮ್ಮ ಎಲ್ಲ ಕಷ್ಟಕಾರ್ಪಣ್ಯಗಳನ್ನೂ ಸಹಿಸಿಕೊಂಡು ಮೂಗೆತ್ತಿನ ಹಾಗೆ ದುಡಿಯುತ್ತಿದ್ದರು.

ಆದರೆ ಈಚೆಗೆ ಅವನ ನಡತೆಯೇ ಬದಲಾಯಿಸಿತ್ತು. ಸ್ಕೂಲು ಓದಿನ ಮೇಲೆ ಅವನಿಗೆ ಸುತರಾಂ ಗಮನವಿದ್ದಂತಿರಲಿಲ್ಲ. ಸಂಗೀತದ ಗೀಳು ಹತ್ತಿ ಮೂರುಹೊತ್ತೂ ಅದಕ್ಕೇ ಒದ್ದುಕೊಳ್ಳುತ್ತಿದ್ದ. ಎಲ್ಲಿ ಸಂಗೀತ ಕಚೇರಿ ನಡೆಯಲಿ ಅಲ್ಲಿ ಮಧುಸೂದನ ಹಾಜರು. ಕಾಸು ಕೊಟ್ಟೋ ಕೊಡದೆಯೋ ಸಭಾಮಂದಿರ ದೊಳಗೆ ನುಸಿಯುತ್ತಿದ್ದ. ಮುಂದುಗಡೆ ಹೋಗಿ ಕುಳಿತು ಕಚೇರಿ ಕೇಳಿ ಬರುತ್ತಿದ್ದ. ಬಿಡಾರ ಕೃಷ್ಣಪ್ಪನವರ ರಾಮಮಂದಿರ, ಟೌನ್‌ಹಾಲುಗಳಲ್ಲಿ ಸಂಗೀತ ಕಾರ್ಯಕ್ರಮವಿದ್ದರೆ ಮಧುಸೂದನನನ್ನು ಬೇರೆ ಯಾವ ಕಡೆಯೂ ಹುಡುಕಿಕೊಂಡು ಹೋಗಬೇಕಾಗಿಯೇ ಇರಲಿಲ್ಲ. ರಾಮೋತ್ಸವ ಸಮಯ ದಲ್ಲಂತೂ ಒಂದು ದಿನವೂ ಸಂಗೀತಕ್ಕೆ ತಪ್ಪಿಸಿಕೊಂಡವನಲ್ಲ. ಮೈಸೂರಲ್ಲಿ ಎಲ್ಲಿ ಕಚೇರಿಗಳು ನಡೆದರೂ ಬಿಡದೆ ಹೋಗುತ್ತಿದ್ದ. ದೊಡ್ಡ ದೊಡ್ಡ ವಿದ್ವಾಂಸರ ಕಚೇರಿಗಳಿಗೆ ಹೋಗುವುದು, ಅವರ ಹಾಡಿಕೆಯನ್ನು ಚಿತ್ತವಿಟ್ಟು ಕೇಳುವುದು, ಪಕ್ಕದಲ್ಲಿದ್ದವರನ್ನು ಇದು ಯಾವ ರಾಗ, ಇದು ಯಾವ ತಾಳ ಎಂದು ಕೇಳಿ ತಿಳಿದುಕೊಳ್ಳುವುದು ಅವನಿಗೆ ಸಹಜವಾಗಿ ಅಭ್ಯಾಸಕ್ಕೆ ಬಂದುಬಿಟ್ಟಿತ್ತು.

ಅವನಿಗೆ ತಿಳಿಯದಂತೆಯೇ ಅವ್ಯಕ್ತ ಶಕ್ತಿ ಅವನನ್ನು ಸೆಳೆಯುತ್ತಿತ್ತು. ಮಧು ಅದರ ಸೂತ್ರಕ್ಕೆ ಸಿಕ್ಕಿದ ಬೊಂಬೆಯಾಗಿದ್ದ.

ವೆಂಕಮ್ಮ ಹೊಟ್ಟೆ ಬಟ್ಟೆ ಕಟ್ಟೆ ಮಗನ ವಿದ್ಯಾಭ್ಯಾಸಕ್ಕೆ ಕೂಡಿಡುತ್ತಿದ್ದುದು ಬೂದಿಯಲ್ಲಿ ಹೋಮ ಮಾಡಿದ ಹಾಗಾಗಿತ್ತು. ಎಸ್. ಎಸ್. ಎಲ್. ಸಿ. ಗೆ ಕಟ್ಟಿದ್ದ ಮಧು ಡುಂಕಿ ಹೊಡೆದಿದ್ದ.

ಅದು ಅವನಿಗೆ ಆಶ್ಚರ್ಯವನ್ನೇನೂ ಉಂಟು ಮಾಡಿರಲಿಲ್ಲ. ಫೇಲಾಗುವುದೆಂದು ಅವನು ನಿರೀಕ್ಷಿಸಿಯೇ ಇದ್ದ.

ಆದರೆ ವೆಂಕಮ್ಮನವರ ಎದೆ ಒಡೆದುಹೋಯಿತು. ಅದರೊಡನೆ ಅಸಾಧ್ಯವಾದ ಕೋಪವೂ ಬಂದಿತ್ತು,

ಓದುವುದಕ್ಕೆ ರೂಮಿನಲ್ಲಿ ಕುಳಿತಾಗ ಕುರುಕಲು ಪದ ಹೇಳುತ್ತಿದ್ದ ಮಧುಸೂದನನನ್ನು ವೆಂಕಮ್ಮ ಆಗಾಗ್ಗೆ ಎಚ್ಚರಿಸುತ್ತಿದ್ದರು. ಅವನು ಓದುವುದಕ್ಕೆ ಕಳ್ಳಬಿದ್ದು ಸಂಗೀತ ಕಚೇರಿಗಳಿಗೆ ಹೋಗುತ್ತಿದ್ದುದೂ ಅವರಿಗೆ ಕ್ರಮೇಣ ತಿಳಿದಿತ್ತು. ಹೊತ್ತಾಗಿ ಮನೆಗೆ ಬಂದ ದಿನವೆಲ್ಲಾ ಅವನು ಏನಾದರೊಂದು ನೆಪ ಹೇಳುತ್ತಿದ್ದ. ಮೊದಲು ಮೊದಲು ವೆಂಕಮ್ಮ ನಿಜವೆಂದೇ ನಂಬುತ್ತಿದ್ದರು. ಆದರೆ ನೆರೆಹೊರೆಯ ಹುಡುಗರಿಂದ ಅವನ ಗುಟ್ಟು ರಟ್ಟಾಗಲು ಹೆಚ್ಚು ದಿನ ಬೇಕಾಗಲಿಲ್ಲ.

ಪಕ್ಕದಮನೆ ಮುರಲಿಗೂ ಮಧುಸೂದನನಿಗೂ ಮೊದಲಿಂದಲೂ ಆಗುತ್ತಿರಲಿಲ್ಲ. ಮುರಲಿ ಮಾತಾಡಿದ್ದಕ್ಕೆ ಏನಾದರೊಂದು ಗಂಟಲು ವ್ಯಾಜ್ಯ ತೆಗೆಯುತ್ತಿದ್ದ. ತನ್ನ ಪೆನ್ಸಿಲು, ಬ್ಲೇಡು, ಪುಸ್ತಕ ಯಾರಾದರೂ ಮುಟ್ಟಿದರೆ ಹುಲಿಯ ಹಾಗೆ ಮೇಲೆ ಬೀಳುತ್ತಿದ್ದ. ಅವನಲ್ಲಿ ಸಹನೆ ಸ್ವಲ್ಪವೂ ಇರಲಿಲ್ಲ. ಆದರೆ ಸ್ನೇಹಿತರು ಕಡಲೇಕಾಯೋ, ಸೀಬೇಹಣ್ಣೋ ಕೊಂಡುಕೊಂಡರೆ ಸ್ವಲ್ಪವೂ ನಾಚಿಕೆಯಿಲ್ಲದೆ ಅವರ ಹತ್ತಿರ ಪಾಲಿಗೆ ಹೋಗುತ್ತಿದ್ದ.

ಅವನ ಸ್ವಭಾವ ಕಂಡು ಮಧುಸೂದನನಿಗೆ ಅಸಹ್ಯವಾಗಿತ್ತು. ಇಂಥದೇ ಒಂದು ಸಂದರ್ಭದಲ್ಲಿ ಇಬ್ಬರಿಗೂ ಜಗಳವಾಗಿ ಮಾತು ನಿಂತುಹೋಗಿತ್ತು. ಮಾತು ಬಿಟ್ಟಮೇಲೂ ಮುರಲಿ ನಿಷ್ಕಾರಣವಾಗಿ ತನ್ನನ್ನು ಸ್ನೇಹಿತರ ಎದುರಿಗೆ ಎತ್ತಿ ಆಡುತ್ತಿದ್ದುದು ಮಧುಸೂದನನಿಗೆ ರೋಷವುಂಟುಮಾಡಿತ್ತು. ಅವನೂ ಸ್ನೇಹಿತರ ಹತ್ತಿರ ಮುರಲಿಯ ಹೇಡಿತನವನ್ನು ಎತ್ತಿ ಆಡುತ್ತಿದ್ದ. ಇಬ್ಬರಿಗೂ

ಒಳಗೇ ಮಸೆಯುತ್ತಿತ್ತು. ಮುರಲಿ ಹೇಗಾದರೂ ಮಾಡಿ ಹಗೆ ತೀರಿಸಿಕೊಳ್ಳ ಬೇಕೆಂದು ಸಮಯ ಕಾಯುತ್ತಿದ್ದ. ಅವನು ಎಷ್ಟೋ ದಿನದಿಂದ ಕಾಯುತ್ತಿದ್ದ ಸಮಯ ಒಂದು ದಿನ ಅವನಿದ್ದೆಡೆಗೇ ಸಾರಿಬಂದಿತು.

ಒಂದು ಸಂಜೆ ಏಳು ಗಂಟೆಯಾಗಿತ್ತು. ಮುರಲಿ, ಸುಬ್ಬಕೃಷ್ಣ ಮಧುಸೂದನನ ಮನೆಯ ಮುಂದೆಯೇ ಹಾದು ಹೋಗುತ್ತಿದ್ದರು. ವೆಂಕಮ್ಮ ಹೊರಗೆ ಬಂದು ಇವರಿಬ್ಬರೂ ಹೋಗುತ್ತಿದ್ದುದನ್ನು ಕಂಡು ಕೂಗಿದರು.

"ಸುಬ್ಬು, ನಮ್ಮ ಮಧೂನ ಕಂಡೆಯೂಪ್ಪಾ ? ಇಷ್ಟು ಹೊತ್ತಾದರೂ ಅವನು ಮನೆಗೆ ಬರಲಿಲ್ಲ"

"ಅವನೆಲ್ಲಿ ಬರುತಾಸ್ರೀ ಈಗ? ರಾಮಮಂದಿರದಲ್ಲಿ ಇವತ್ತು ಅರಿಯಾಕುಡಿ ಸಂಗೀತ ಇದೆ. ಅಲ್ಲಿಗೆ ಹೋಗಿದಾನೆ ಅಂತ ಕಾಣತ್ತೆ"

ಎಂದ ಮುರಲಿ.

"ನೀನು ನೋಡಿದೆಯಪ್ಪ ಅವನು ಅಲ್ಲಿಗೆ ಹೋದ್ದನ್ನ ?"

ಎಂದು ವೆಂಕಮ್ಮ ಕೇಳಿದರು.

"ಹೂಸ್ರೀ. ಅವನೂ, ಶೀನೂ ಇಬ್ಬರೂ ಆಟ ಬಿಟ್ಟು ಐದು ಘಂಟೆಗೇ ಹೊರಟು ಹೋದರು. ಇಷ್ಟು ಬೇಗ ಆಟ ಬಿಟ್ಟು ಯಾಕೆ ಹೋಗುತೀರ್ರೋ ಎಂದರೆ 'ಇವೊತ್ತು ರಾಮಮಂದಿರದಲ್ಲಿ ಭರ್ಜರಿ ಸಂಗಿತ ಕಚೇರಿ ಇದೆ ಕಣೋ. ಬೇಗ ಹೋಗದೆ ಇದ್ದರೆ ಜಾಗ ಸಿಕ್ಕೊಲ್ಲ' ಎಂದು ಹೊರಟು ಹೋದರು ಕಣ್ರಿ"

ಎಂದು ಮುರಲಿ ಇದ್ದದ್ದು ಇಲ್ಲದ್ದು ಎರಡನ್ನೂ ಒಳ್ಳೇ ಖಾರವಾಗಿ ಸೇರಿಸಿ ಹೇಳಿದ.

ವೆಂಕಮ್ಮನವರಿಗೆ ಮೈಯೆಲ್ಲಾ ಬೆಂಕಿಯಾಗಿಹೋಯಿತು.

"ಮನೆಗೆ ಬರಲಿ ಅವನ ಮೂಳೆ ಮುರಿತೀನಿ ಇವತ್ತು"

ಎಂದುಕೊಂಡು ಒಳಗೆ ಹೋದರು. ಸುಬ್ಬಕೃಷ್ಣನಿಗೆ ಮಧುಸೂದನನ ವಿಷಯದಲ್ಲಿ ವಿಶ್ವಾಸವಿತ್ತು. ಆದರೆ ಮುರಲಿಯ ದಗಲಬಾಜಿತನಕ್ಕೆ ಹೆದರುತ್ತಿದ್ದ. ಅದಕ್ಕೇ ತನ್ನ ಮನಸ್ಸಿನಲ್ಲಿದ್ದುದನ್ನು ಬಾಯಿ ಬಿಟ್ಟು ಹೇಳಲು ಹಿಂಜರಿಯುತ್ತಿದ್ದ. ಆದರೂ ಈ ಸಮಯದಲ್ಲಿ ಮಧುಸೂದನನ ಮೇಲೆ ಹೀಗೆ ಚಾಡಿ ಹೇಳಿದ್ದು ನ್ಯಾಯವಲ್ಲವೆಂದು ಅವನಿಗೆ ತೋರಿತು

" ಲೋ, ಯಾಕೋ ಹೇಳಿದೆ ಅವರಮ್ಮನ ಮುಂದೆ ? ಹೊಡೀತಾರಲ್ಲೋ ಇನ್ನು ಅವನ್ನ "

ಎಂದು ಸ್ವಲ್ಪ ಅಸಮಾಧಾನದಿಂದಲೇ ನುಡಿದ.

" ಬೀಳಲಿ ಸುಮ್ಮನಿರೋ ಬಡ್ಡೀಮಗನಿಗೆ ಚೆನ್ನಾಗಿ ನಾಲಕ್ಕು ಒದೆ, ಬುದ್ಧಿ ಬರತ್ತೆ. ನಮ್ಮ ಹತ್ತಿರ ಖಾಲಿ ರೋಪ್ ಹಾಕೋಹಾಗಲ್ಲ "

ಎಂದ ಮುರಳಿ ಮೂಗರಳಿಸಿಕೊಂಡು.

ಅವೊತ್ತು ರಾತ್ರಿ ಮಧು ಮನೆಗೆ ಬಂದಾಗ ಹತ್ತು ಗಂಟೆ ಹೊಡೆದು ಹೋಗಿತ್ತು. ಅವನೂ ಹೆದರಿಕೊಂಡೇ ಬಂದಿದ್ದ. ವೆಂಕಮ್ಮನವರೂ ಹಸಿದ ಹುಲಿಯ ಹಾಗೆ ಮೇಲೆ ಬೀಳಲು ಕಾದಿದ್ದರು. ಅವನು ಒಳಗೆ ತಲೆಹಾಕುತ್ತಿದ್ದ ಹಾಗೆಯೇ,

" ಎಲ್ಲಿ ಹಾಳಾಗಿ ಹೋಗಿದ್ದಿಯೋ ಇಷ್ಟುಹೊತ್ತು ?"

ಎಂದು ಘರ್ಜಿಸಿದರು.

" ಎಲ್ಲೂ ಇಲ್ಲಮ್ಮ "

ಎಂದು ಮಧು ಮಳ್ಳಿಯ ಹಾಗೆ ಉತ್ತರ ಕೊಟ್ಟು ಮೆಲ್ಲನೆ ರೂಮಿನೊಳಗೆ ಹೋಗಲು ಕಾಲ್ತೆಗೆದ.

" ಒಳಗೆ ಕಾಲಿಟ್ಟೇಯೆ ಭಡವಾ. ಎಲ್ಲಿ ಹೋಗಿದ್ದಿ ಹೇಳತೀಯೋ – ಇಲ್ಲ ನಿನಗೆ ಸರಿಯಾಗಿ ಆಗಬೇಕೋ ?"

ಎಂದರು. ಮಧು ಕಣ್ಣು ಕಣ್ಣು ಬಡಿದುಕೊಂಡು ತುಟಿ ಕಚ್ಚುತ್ತ,

" ಎಲ್ಲಿಗೂ ಇಲ್ಲಮ್ಮಾ, ಸ್ಕೂಲು ಹುಡುಗರು ಐದಾರು ಜನ ಸಂಗೀತ ಇದೆ ಅಂತ ಹೋಗಿದ್ದರು. ನನ್ನೂ ಬಾ ಎಂದರು. ಅವರ ಜೊತೆಗೆ ಹೋಗಿದ್ದೆ. ಸ್ವಲ್ಪ ಹೊತ್ತಾಗಿ ಹೋಯಿತು "

" ನಿನ್ನೂ ಬಾ ಅಂದರು ಹೋದಿ. ಇವತ್ತು ಸಂಗೀತಕ್ಕೆ ಬಾ ಅಂದರು. ನಾಳೆ ಇನ್ನೊಂದು ಕಡೆ ಬಾ ಅಂತಾರೆ, ಹೋಗು. ಮಣ್ಣುಹುಯಿದುಕೋ, ದರಿದ್ರಮುಂಡೇದೆ. ಸಂಗೀತ, ಸಂಗೀತ ಅಂತ ಬಡಕೊಂಡು ಆಯಿತಲ್ಲಾ ಈ ಸಲ ಪರೀಕ್ಷೇಲಿ ಮೋಕ್ಷ. ನಾವು ಇರೋ ಸ್ಥಿತಿಯೇನು, ಮಾಡೋ ಕೆಲಸ ವೇನು ಅನ್ನೋ ಪರಿಜ್ಞಾನ ಬೇಡವೇನೋ ? ಸಂಗೀತದ ಸುತ್ತಾ ಬಡಕೊಳ್ಳೋಕೆ ನಾವೇನು ನಟರು ಕೆಟ್ಟುಹೋದೆವೇನೋ ? ಬಡವ ನೀ ಮಡಗಿದ ಹಾಗಿರು

ಅನ್ನೋದು ಬಿಟ್ಟು ನಿನಗೆ ಯಾಕೋ ಸಂಗೀತ? ಇನ್ನು ಮೇಲೆ ಸಂಗೀತ ಗಿಂಗೀತ ಅಂತ ಎಲ್ಲಾದರೂ ಹೋದೆಗೀದೆಯೋ ಕಾಲು ಮುರಿದುಬಿಡುತೀನಿ ನೋಡು,"

ಎಂದು ವೆಂಕಮ್ಮ ಜಡಿಮಳೆ ಹಿಡಿದ ಹಾಗೆ ಹಿಡಿದು 'ತೊಗೋ ಬಿಡ ಬೇಡ' ಅಂತ ಗ್ರಹಚಾರ ಬಿಡಿಸಿಬಿಟ್ಟರು.

ತಿಂಗಳಿಗೆ ಒಂದೆರಡು ಸಲವಾದರೂ ಇಂಥ ಪ್ರಸಂಗಗಳಾಗದೆ ಇರುತ್ತಿರ ಲಿಲ್ಲ. ರಾಮೋತ್ಸವ, ತ್ಯಾಗರಾಜರ ಆರಾಧನೆ, ಪುರಂದರದಾಸರ ಆರಾಧನೆ ಬಂದರಂತೂ ಮಧುಸೂದನನಿಗೆ ಚತುರ್ಭುಜವಾಗುತ್ತಿತ್ತು. ಅವನು ಆ ಸಮಯಕ್ಕೇ ಕಾದಿರುತ್ತಿದ್ದ. ಒಳ್ಳೊಳ್ಳೆಯ ಕಚೇರಿಗಳಿಗೆ ತಪ್ಪದೆ ಹೋಗುತ್ತಿದ್ದ. ಮನೆಗೆ ಬಂದಕೂಡಲೆ ಯಥಾಪ್ರಕಾರ ಪೂಜೆ ಸಿದ್ಧವಾಗಿಯೇ ಇರುತ್ತಿತ್ತು. ಅದು ಅವನಿಗೆ ಹೊಸ ವಿಷಯವೂ ಆಗಿರಲಿಲ್ಲ. ಈಚೆಗಂತೂ ತಾಯಿ ಬೈಯ್ಯು ವುದನ್ನು ಅವನು ಲೆಕ್ಕಿಸುತ್ತಲೂ ಇರಲಿಲ್ಲ. ಬೈದರೆ ಬೈದುಕೊಳ್ಳಲಿ; ಬೈದು ಬೈದು ಸಾಕಾಗಿ ತಾನೇ ನಿಲ್ಲಿಸುತ್ತಾಳೆ ಎಂದುಕೊಂಡು ಒಂದು ಬಗೆಯ ನೊಂಡಿಗೆ ಬಿದ್ದಿದ್ದ. ತಾಯಿ ಮಗನಿಗೆ ಹತ್ತಿದ ಜಗಳ ಹರಿಯುತ್ತಿರಲಿಲ್ಲ.

ಒಂದು ದಿನ ಪರಿಸ್ಥಿತಿ ನಿರ್ಧಾರಕ ಘಟ್ಟಕ್ಕೆ ಹೋಯಿತು.

ಅವೊತ್ತು ರಾಮಮಂದಿರದಲ್ಲಿ ಚಿತ್ತೂರು ಸುಬ್ರಹ್ಮಣ್ಯ ಪಿಳ್ಳೆಯವರ ಕಚೇರಿ ಇತ್ತು. ಪಾಪ ವೆಂಕಟರಾಮಯ್ಯನವರ ಪಿಟೀಲು, ದಕ್ಷಿಣಾಮೂರ್ತಿ ಯವರ ಮೃದಂಗ. ಭರ್ಜರಿ ಕಚೇರಿ. ಸಭಾಮಂದಿರದಲ್ಲಿ ವಿದ್ವಾಂಸರೂ ಸಂಗೀತಾಭಿಮಾನಿಗಳೂ ತುಂಬಿಬಿಟ್ಟಿದ್ದರು. ಮಧುಸೂದನನೂ ಸಮಯಕ್ಕೆ ಸರಿಯಾಗಿ ಹಾಜರಾಗಿ ಹೇಗೋ ನುಸುಳಿಕೊಂಡು ಮುಂದುಗಡೆ ಪ್ರಶಸ್ತವಾದ ಒಂದು ಜಾಗ ಮಾಡಿಕೊಂಡು ಕುಳಿತಿದ್ದ. ವೇದಿಕೆಯ ಮೇಲೆ ವಿದ್ವಾಂಸರ ಒಬ್ಬ ಶಿಷ್ಯ ಶ್ರುತಿಮಾಡಿದ ತಂಬೂರಿಯನ್ನು ಮೀಟುತ್ತ ಕುಳಿತಿದ್ದ. ಅದರ ನಾದಸೌರಭ ಇಡೀ ಸಭಾಮಂದಿರವನ್ನು ತುಂಬಿ ಕಚೇರಿ ಆರಂಭವಾಗುವ ಮುನ್ನವೇ ಶ್ರಾವಕರ ಚಿತ್ತವನ್ನು ಸೆರೆಹಿಡಿದಿತ್ತು.

ಪಿಳ್ಳೆಯವರು ಸೊಗಸಾದ ಒಂದು ವರ್ಣದೊಡನೆ ಕಚೇರಿ ಪ್ರಾರಂಭಿಸಿ ದಿವ್ಯವಾಗಿ ಎರಡು ಘಂಟೆಗಳ ಕಾಲ ಕಚೇರಿ ಮಾಡಿಬಿಟ್ಟರು. ಅಸಾಧಾರಣ ವಾದ ಅವರ ಲಯ ಜ್ಞಾನ, ತಾಳದ ಬಿಗಿ, ಚಚ್ಚೌಕವಾದ ಹಾಡಿಕೆ, ಅಪರೂಪ

ವಾದ ವಕ್ರಸಂಚಾರದ ರಾಗಗಳನ್ನು ಅವರು ಲೀಲಾಜಾಲವಾಗಿ ನಿರ್ವಹಿಸುತ್ತಿದ್ದ ರೀತಿ ವಿದ್ವಜ್ಜನರ ಚಿತ್ತವನ್ನು ಅಪಹರಿಸಿಬಿಟ್ಟಿತು.

ಮಧು ಸಂಗೀತ ಕೇಳಿ ಮುಗ್ಧನಾಗಿಹೋದ. ಅಂದಿನ ಕಚೇರಿಯಲ್ಲಿ ನೂರರಲ್ಲಿ ಒಂದು ಭಾಗ ಅವನಿಗೆ ಅರ್ಥವಾಗಿರಲಿಲ್ಲ. ಕೇವಲ ಅಭ್ಯಾಸಬಲದಿಂದ ಕೆಲವು ರಾಗಗಳನ್ನೂ ತಾಳಗಳನ್ನೂ ಗುರುತಿಸಿದ್ದ. ಅದಕ್ಕಿಂತ ಹೆಚ್ಚಾಗಿ ಅವನ ಬುದ್ಧಿಗೆ ಏನೂ ಅರ್ಥವಾಗಿರಲಿಲ್ಲ. ಆದರೆ ರಾಗಲೋಕ ಎಷ್ಟು ವಿಸ್ತಾರವಾದದ್ದು, ಅದರ ಪ್ರತಿಭಾಸಂಪತ್ತು ಎಷ್ಟು ಚಿರನೂತನವಾದದ್ದು, ಅದು ಎಷ್ಟು ಸುಂದರ ಹಾಗೂ ಭವ್ಯ ಎಂಬ ಕಲ್ಪನೆ ಅವನ ಮನಸ್ಸಿನಲ್ಲಿ ಮಿಂಚಿ ಯಾವುದೋ ಒಂದು ಸುಂದರ ಲೋಕದ ಕ್ಷಣ ದರ್ಶನವಾದಂತಾಯಿತು. ಮಿಂಚಿನಂತೆ ಬೆಳಕು, ಮತ್ತೆ ಕತ್ತಲು. ಭವ್ಯ ಪ್ರಾಸಾದವೊಂದರ ಬಾಗಿಲಲ್ಲಿ ಬಂದು ನಿಂತ ಆಗಂತುಕನಿಗೆ ಮುಚ್ಚಿದ್ದ ಬಾಗಿಲು ಕ್ಷಣಮಾತ್ರ ತೆರೆದು ಒಳಗಿನ ಅಸಾಧಾರಣ ದೃಶ್ಯ ಕ್ಷಣಮಾತ್ರ ಗೋಚರವಾಗಿ ಮತ್ತೆ ಬಾಗಿಲು ಮುಚ್ಚಿದರೆ ಯಾವ ಅನುಭವವಾಗುವುದೋ ಆ ಅನುಭವ ಮಧುಸೂದನನಿಗಾಯಿತು. ಮಿಂಚಿನಂಥ ಆ ಅನುಭವದಿಂದ ಅವನ ಮನಸ್ಸು ಉಲ್ಲಸಿತವಾಯಿತು; ಅಪರಿಚಿತ ಭಾವನೆಗಳು ಹೊಳೆದು ಅವನ ಮೈ ರೋಮಾಂಚನಗೊಂಡಿತು.

ಮಧುಸೂದನ ಅಂದೇ ಒಂದು ನಿರ್ಧಾರ ಮಾಡಿಬಿಟ್ಟ.

ಈ ರಹಸ್ಯವನ್ನು ಭೇದಿಸಬೇಕು. ಈ ಕಲೆಯನ್ನು ಕರತಲಾಮಲಕ ಮಾಡಿಕೊಳ್ಳಬೇಕು.

ಅವನಿಗೆ ಸ್ವಪ್ನದಲ್ಲಿದ್ದಂತೆ ಭಾಸವಾಗುತ್ತಿತ್ತು. ಕಾಲು ಮನೆಯ ಕಡೆ ಅಭ್ಯಾಸ ಬಲದಿಂದ ತಾನಾಗಿಯೇ ಹೋಗುತ್ತಿತ್ತು. ಆದರೆ ಮನಸ್ಸು ಸಂಗೀತದ ಗುಂಗಿನಲ್ಲಿ ಮುಳುಗಿ ಹೋಗಿತ್ತು. ಗಾಯಕರ ರಾಗವಿನ್ಯಾಸ ಕೌಶಲ, ಸ್ವರ ಪ್ರಸ್ತಾರ ವೈಖರಿಗಳು ಅವನ ಮನಸ್ಸಿನಲ್ಲಿ ಝೇಂಕಾರವಾಗಿ ನುಡಿದು ಮಾರ್ದನಿ ಕೊಡುತ್ತಿದ್ದವು.

ಮನೆ ತಲುಪಿದಾಗ ರಾತ್ರಿ ಹನ್ನೊಂದು ಘಂಟೆಯಾಗಿತ್ತು.

ಯಥಾಪ್ರಕಾರ ತಾಯಿಯ ಛೇಡನೆ; ಕೊನೆಮೊದಲಿಲ್ಲದ ಬೈಗುಳ.

ಮಧು ರೂಮಿಗೆ ಹೋಗಿ ಚಾಪೆಯಮೇಲೆ ಅಂಗಾತನಾಗಿ ಬಿದ್ದುಕೊಂಡ. ಅವನ ಮನಸ್ಸು ಎಲ್ಲೋ ಅಲೆಯುತ್ತಿತ್ತು. ದೇಹ ಮಾತ್ರ ಆ ಮುರುಕು

ಮನೆಯ ಕಿರುಕೋಣೆಯಲ್ಲಿ ಬಿದ್ದಿತ್ತು. ಯೋಚನೆಗಳು ತರಂಗ ತರಂಗವಾಗಿ ಬಂದು ಮುತ್ತುತ್ತಿದ್ದುವು.

"ದೇವರೆ, ನನಗೊಂದು ದಾರಿ ತೋರಿಸು"

ಎಂದು ಮನಸ್ಸು ಆರ್ತವಾಗಿ ಮೊರೆಯುತ್ತಿತ್ತು.

"ಊಟಕ್ಕೆ ಏಳುವುದಿಲ್ಲವೇನೋ? ಅನ್ನ ಆರಿ ತಂಗಳಾಗಿದೆ. ತಿಂದು ಬಿದ್ದುಕೋ. ನಿನ್ನ ಹಣೆಬರಹ ಕಂಡಹಾಗೇ ಇದೆ"

ಎಂದು ವೆಂಕಮ್ಮ ನಡುಮನೆಯಿಂದ ಕೂಗಿದರು.

"ನನಗೆ ಹಸಿವಿಲ್ಲಮ್ಮಾ, ನಾನು ಊಟಮಾಡುವುದಿಲ್ಲ."

"ಹಸಿವಿಲ್ಲದೆ ಇರುವುದಕ್ಕೆ ಏನು ತಿಂದೆಯೋ? ಮಧ್ಯಾಹ್ನ ಒಂದು ತುತ್ತು ತಿಂದುಹೋದವನು. ಏಳು ತಟ್ಟೆ ತಂದು ಹಾಕಿಕೋ."

"ನನಗೆ ಊಟ ಬೇಡ."

"ಹಾಗಾದರೆ ನಾನೂ ಉಪವಾಸ ಮಲಗಿಕೊಳ್ಳುತ್ತೇನೆ"

ಒಳ್ಳೇ ಪೀಕಲಾಟಕ್ಕೆ ಬಂದಿತು, ನಿಜವಾಗಿ ಅವನಿಗೆ ಅನ್ನ ಬೇಕಿರಲಿಲ್ಲ. ಅವನ ಮನಸ್ಸಿನಲ್ಲಿ ಏನೋ ವಿಚಿತ್ರ ಒಳತೋಟಿ ನಡೆಯುತ್ತಿತ್ತು. ತಾಯಿಯ ಬೈಗುಳ ಅವನ ಅಸಹಾಯಕ ಪರಿಸ್ಥಿತಿಯನ್ನು ಎತ್ತಿ ಮುಂದೆ ಹಿಡಿದಿತ್ತು.

ಬಲವಂತಕ್ಕೆ ಎದ್ದು ತಟ್ಟೆಯ ಮುಂದೆ ಕುಳಿತುಕೊಂಡ.

ಅರ್ಧ ಊಟ ಸಾಗುನವರೆಗೂ ಇಬ್ಬರೂ ಮಾತಾಡಲಿಲ್ಲ.

ಮಜ್ಜಿಗೆ ಅನ್ನ ಕಲಿಸುತ್ತಿದ್ದಾಗ ವೆಂಕಮ್ಮನವರು ಉಪಾಯವಾಗಿ ಮಾತು ತೆಗೆದರು.

"ಮಧೂ, ನಿನ್ನ ಒಳ್ಳೆಯದಕ್ಕೇ ನಾನು ಹೇಳುವುದು ಕಣೋ. ನಿನ್ನ ಮೇಲೆ ನನಗೆ ದ್ವೇಷವೇ ಅಪ್ಪ? ಒಳ್ಳೆಯ ವಂಶದಲ್ಲಿ ಹುಟ್ಟಿದವನು ನೀನು ಏನೋ ಒಂದು ಪ್ಯಾಸು ಮಾಡಿ ನಾಲ್ಕು ಜನದ ಹಾಗೆ ಒಂದು ಚಾಕರಿ ಮಾಡಿಕೊಂಡು ಸಂಪಾದಿಸಿ ಚೆನ್ನಾಗಿರಲಿ ಅಂತಲೇ ಅಲ್ಲವೆ ನಾನಿಷ್ಟು ಕಷ್ಟ ಪಡುತ್ತಿರುವುದು? ಈ ವರ್ಷ ಫೇಲಾದರೆ ಹೋಗಲಿ, ಇನ್ನೊಂದು ವರ್ಷ ಓದು. ಒಂದು ಎಸ್.ಎಸ್.ಎಲ್.ಸಿ. ನಾದರೂ ಪ್ಯಾಸ್‌ಮಾಡಿಕೊಳ್ಳಪ್ಪ, ಎಲ್ಲಾದರೂ ಕೆಲಸ ಸಿಕ್ಕತ್ತೆ. ನೀನೂ ಒಬ್ಬ ಮನುಷ್ಯ ಅಂತ ಇರಬಹುದು. ಅದು ಬಿಟ್ಟು ಸಂಗೀತ, ನಾಟಕ ಅಂತ ಪೋಲಿ ಬಿದ್ದರೆ ಮುಂದಿನ ಗತಿಯೇನಪ್ಪಾ? ಅವರೂ

ಕಣ್ಣು ಮುಚ್ಚಿಕೊಂಡರು, ನೀನೂ ಹೀಗಾದರೆ ನಾನು ಎಲ್ಲಿಗೆ ಹೋಗಲೋ ಮಗು ?"

ವೆಂಕಮ್ಮನವರ ಕೊರಳ ಸೆರೆ ಉಬ್ಬಿ ಬಂದಿತು. ಮುಂದೆ ಮಾತು ಹೊರಡದಾಯಿತು,

" ನನಗೆ ಓದು ಹತ್ತುವುದಿಲ್ಲಮ್ಮಾ."

" ಹಾಗಾದರೆ ಈ ಕೆಟ್ಟದಾರೀನೇ ಹಿಡಿಯುತ್ತೀಯಾ ?"

" ಸಂಗೀತ ಕಲಿತವರೆಲ್ಲಾ ಕೆಟ್ಟದಾರಿಗೆ ಬಿದ್ದವರು, ಪೋಲಿಗಳು ಅಂತ ಯಾರಮ್ಮ ನಿನಗೆ ಹೇಳಿದ್ದು ? ಎಷ್ಟು ಜನ ಸಂಗೀತ ಕಲಿತು ದೊಡ್ಡ ವಿದ್ವಾಂಸ ರಾಗಿಲ್ಲ, ಕೀರ್ತಿ ಸಂಪಾದಿಸಿಲ್ಲ ?"

" ಅವರಿಗೂ ನಮಗೂ ನಾಟಂಗೋನೋ ಮಧು ? ಅದೆಲ್ಲಾ ನಮ್ಮಂಥಾವರಿ ಗಲ್ಲಪ್ಪಾ."

" ಇನ್ನೆಂಥಾವರಿಗಮ್ಮಾ ? ಸಂಗೀತಗಾರರೆಲ್ಲಾ ಏನು ಸ್ವರ್ಗಲೋಕದಿಂದ ಇಳಿದು ಬಂದಿರುತಾರೇನಮ್ಮಾ ? ಅವರೂ ನಮ್ಮ ಹಾಗೇ ಮನುಷ್ಯರು. ಅದಕ್ಕೋಸ್ಕರ ಸಾಧನೆ ಮಾಡಿರುತ್ತಾರೆ, ಕಷ್ಟಪಟ್ಟು ಕಲಿತಿರುತ್ತಾರೆ, ಅಷ್ಟೆ."

" ಏನೋಪ್ಪ, ಅದೆಲ್ಲಾ ನನಗೆ ಏನು ಅರ್ಥವಾಗತ್ತೆ ಹೇಳು ?"

" ಅರ್ಥವಾಗದೆ ಇದ್ದರೆ ನಿನ್ನ ಪಾಡಿಗೆ ನೀನು ಸುಮ್ಮನಿರು "

" ಸುಮ್ಮನಿದ್ದರೆ ಆಗತ್ತೇನೋ ಮಗು ? ನಿನ್ನ ಹಿತಚಿಂತನೆ ನನಗೂ ಸೇರಿದ್ದಲ್ಲವೇನೋ ?"

" ನನ್ನ ಹಿತಚಿಂತನೆ ನಿನಗೆ ಸೇರಿದ್ದರೆ ನೀನು ಹೀಗೆ ಪದೇಪದೆ ಛೇಡಿ ಸುತಾ ಇರಬೇಡ. ನನಗೆ ಹುಚ್ಚು ಹಿಡಿದುಹೋಗತ್ತೆ. ನಿನ್ನ ಕಾಟ ತಡೆಯ ಲಾರದೆ ನಾನೆಲ್ಲಾದರೂ ಮನೆಬಿಟ್ಟು ಹೊರಟುಹೋಗಬೇಕಾಗತ್ತೆ ನೋಡು."

" ಸದ್ಯ ಅದು ಮಾತ್ರ ಮಾಡಬೇಡ ಮಹರಾಯ, ನಿನ್ನ ಶ್ರೇಯಸ್ಸಿಗೇ ಹೇಳಿದ್ದು. ವಯಸ್ಸಿಗೆ ಬಂದ ಹುಡುಗ ನೀನು ಹಟ ಮಾಡಿದರೆ ನಾನು ಹೆಣ್ಣು ಹೆಂಗಸು ತಪ್ಪಿಸೋಕೆ ಸಾಧ್ಯವೇನೋ ? ನಿನ್ನ ಇಷ್ಟ ಬಂದ ಹಾಗೆ ಇರು. ದೇವರು ಮಾಡಿಸಿದ ಹಾಗಾಗಲಿ. ನಿನ್ನ ಹಣೇಬರಹ. ಇನ್ನು ಮೇಲೆ ನಾನು ಹರ ಶಿವ ಅನ್ನೊಲ್ಲ"

ಎಂದು ಅಸಮಾಧಾನ ದುಃಖಗಳು ಬೆರೆತ ಧ್ವನಿಯಲ್ಲಿ ನುಡಿದು ಅಲ್ಲಿ ಕೂಡದೆ ಎದ್ದುಹೋದರು.

ಅಂದು ರಾತ್ರಿ ವೆಂಕಮ್ಮನವರಿಗೆ ನಿದ್ದೆ ಹತ್ತಲಿಲ್ಲ. ಅವರ ಮನಸ್ಸು ಕೊನೆಗಾಣದ ಯೋಚನೆಯ ಸುಳಿಗೆ ಸಿಕ್ಕಿ ಅದರಿಂದ ಬಿಡಿಸಿಕೊಂಡು ಬರಲಾರದೆ ಒದ್ದಾಡುತ್ತಿತ್ತು. ದಾರಿ ನಡೆಯುವಾಗ ಅಕ್ಕಪಕ್ಕದ ನೋಟ ಕಾಣದಿರಲೆಂದು ಮುಖಪಟ್ಟಿ ಹಾಕಿದ ಗಾಡಿಯ ಕುದುರೆ ತಾನು ನಡೆದು ರೂಢಿಯಾದ ಮಾರ್ಗಬಿಟ್ಟು ಬೇರೆ ದಾರಿ ಹಿಡಿಯಲು ನಿರಾಕರಿಸುವಂತೆ, ಸಾಮಾನ್ಯ ಜನಕ್ಕೆ ಗೊತ್ತಾದ ವಿದ್ಯಾಭ್ಯಾಸ. ನೌಕರಿಗಳನ್ನು ಮೀರಿದ ಪ್ರಪಂಚವೂ ಬೇರೆ ಒಂದಿದೆ. ಯೆಂಬುದನ್ನು ವೆಂಕಮ್ಮನವರ ಬುದ್ಧಿ ಒಪ್ಪುತ್ತಿರಲಿಲ್ಲ. ಅದೇ ಪುರುಷಾರ್ಥ, ಅದರ ಸಾಧನೆಗಾಗಿಯೇ ಪ್ರಯತ್ನಿಸಬೇಕು ಎಂದವರು ನಿಶ್ಚಲವಾಗಿ ನಂಬಿದ್ದರು.

ಸಂಪ್ರದಾಯದ ಕಟ್ಟುಪಾಡಿನಲ್ಲಿ ನುರುಗಿದ ಅವರ ಸ್ವಭಾವ ಬೇರೆ ಜಾಡು ಹಿಡಿಯಲು ಸಾಧ್ಯವೇ ಇರಲಿಲ್ಲ. ಕೀರ್ತಿಯೋ ಅಧಿಕಾರವೋ ಸಿರಿಯೋ ಒಲಿದವರಿದ್ದರೆ, ಅಂಥದು ತಮಗಲ್ಲ, ಪೂರ್ವಪುಣ್ಯ ಪಡೆದ ಭಾಗ್ಯಶಾಲಿಗಳಿಗೇ ಎಂಬ ಕಲ್ಪನೆಯೂ ಆಕೆಗಿತ್ತು.

'ಹಂದಿಗೆ ತನ್ನ ಗೊಂದಿಯೇ ಲೇಸು' ಎಂಬ ಗಾದೆಯನ್ನವರು ಅನೇಕ ವೇಳೆ ಮಗನೆದುರಿಗೆ ಉದಾಹರಿಸುತ್ತಿದ್ದರು. ಆದರೆ ಆ ಹಂದಿ ತನ್ನ ಗೊಂದಿ ಬಿಟ್ಟೇಕೆ ಹೋಗಬಾರದು ಎಂದು ಯೋಚಿಸುವ ಗೋಜಿಗೆ ಕೂಡ ಹೋಗುತ್ತಿರಲಿಲ್ಲ. ಹೀಗೆ ಮಿತವಾದ ವ್ಯಾಪ್ತಿಯಲ್ಲಿ ಸಂಚರಿಸುತ್ತಿದ್ದ ಅವರ ಮನಸ್ಸಿಗೆ ಮಗನ ಸಂಗೀತಾಸಕ್ತಿ ಖೇದವನ್ನುಂಟು ಮಾಡಿದ್ದರಲ್ಲಿ ಅಚ್ಚರಿಯಿರಲಿಲ್ಲ. ಒಂದು ದಾರಿಗೆ ಬರಬಹುದಾಗಿದ್ದ ಸಂದರ್ಭದಲ್ಲಿ ಮಗ ಅಪಮಾರ್ಗ ಹಿಡಿಯುತ್ತಿದಾನಲ್ಲಾ ಎಂದು ಕೊರಗಿದರು. ತಮ್ಮ ಛೇಡನೆಯಿಂದ ಮಗನಿಗೆ ಬೇಸರವಾಗಿದೆಯೆಂಬುದೂ ಆಕೆಗೆ ಚೆನ್ನಾಗಿ ಗೊತ್ತಿತ್ತು. ಆದರೆ ಅವನ ಹಟವನ್ನು ಬಿಡಿಸುವುದಕ್ಕೆ ಅವರಿಗೆ ಸಾಧ್ಯವಾಗಿರಲಿಲ್ಲ. ಸಾಮದಂಡಗಳಿಗೆ ಮಗ ಜಗ್ಗಿರಲಿಲ್ಲ. ಕೊನೆಗೆ ಮನೆಬಿಟ್ಟು ಹೋಗುವುದಾಗಿ ಹೆದರಿಸಿದ್ದ. ಅದು ಆಕೆಯ ಮನಸ್ಸಿನಲ್ಲಿ ತಲ್ಲಣವನ್ನುಂಟುಮಾಡಿತ್ತು. ಅಂಥ ಸಂಭವವನ್ನು ಮನಸ್ಸಿನಲ್ಲೇ ಕಲ್ಪಿಸಿಕೊಂಡು ವೆಂಕಮ್ಮ ನಡುಗಿದರು.

"ಹೇಗಾದರೂ ಕಣ್ಣೆದುರಿಗೇ ಇರಲಿ. ಅವನ ಹಣೆಯಲ್ಲಿ ಬರೆದದ್ದಾಗಲಿ"

ಎಂದು ನಿಟ್ಟುಸಿರುಬಿಟ್ಟು ಪಕ್ಕಕ್ಕೆ ತಿರುಗಿ ಮಲಗಿಕೊಂಡರು. ಯೋಚನೆಯಲ್ಲಿ ಬಳಲಿದ್ದ ದೇಹಕ್ಕೆ ಸ್ವಲ್ಪ ಜಂಪು ಹತ್ತಿತು.

ಮಧುಸೂದನನೂ ನಿದ್ದೆ ಹತ್ತದೆ ಹಾಸಿಗೆಯ ಮೇಲೆ ಸುಮ್ಮನೆ ಹೊರಳಾಡುತ್ತಿದ್ದ. ಬಲಾತ್ಕಾರದಿಂದಲಾದರೂ ತಾಯಿಯ ಮನಸ್ಸಿಗೆ ತನ್ನ ನಿರ್ಧಾರವನ್ನು ಸೂಚಿಸಿದ್ದಾಗಿತ್ತು. ಮುಂದೇನು ಎಂಬ ಪ್ರಶ್ನೆ ಎದುರಿಗೆ ಅಡ್ಡಗೋಡೆಯ ಹಾಗೆ ಎದ್ದು ನಿಂತಿತ್ತು. ಸಂಗೀತ ಕಲಿತುಕೊಳ್ಳುವುದು ಹೇಗೆ? ಕಲಿಸುವವರು ಯಾರು? ತಿನ್ನುವುದಕ್ಕೇ ಗತಿಯಿಲ್ಲದಿರುವಾಗ ಸಂಗೀತ ಪಾಠಕ್ಕೆ ಎಲ್ಲಿಂದ ತರುವುದು ದುಡ್ಡು?

ಪರಿಸ್ಥಿತಿ ಎದುರಿಗೆ ಬಾಯಿ ತೆರೆದು ನಿಂತು ತನ್ನ ನೈಜಸ್ವರೂಪ ತೋರಿಸಿ ಎದೆಗೆಡಿಸುತ್ತಿತ್ತು.

ಅಷ್ಟೇ ಬಲವತ್ತರವಾದ ಮನೋನಿರ್ಧಾರ "ಹೇಗಾದರೂ ಸಾಧಿಸು; ಬಿಡಬೇಡ" ಎಂದು ಪ್ರಚೋದಿಸುತ್ತಿತ್ತು.

ಹೇಗೆ ಸಾಧಿಸುವುದು? ಅದೇ ಪ್ರಶ್ನೆ.

ಮನಸ್ಸಿನ ಸೀಮೆಯನ್ನೆಲ್ಲ ಹುಡುಕಿ ನೋಡಿದ್ದಾಯಿತು. ಎಲ್ಲೂ ಉತ್ತರ ಸಿಕ್ಕಲಿಲ್ಲ. ನಿರಾಶೆಗೊಂಡು. ಮುಂದೆ ಯೋಚನೆ ಮಾಡಲೂ ಶಕ್ತಿಯಿಲ್ಲದೆ ಸೊರಗಿದ ಚೇತನಕ್ಕೆ ಒಂದು ಬಗೆಯ ಜಂಪು ಕವಿದ ಹಾಗಾಯಿತು. ಇತ್ತ ಎಚ್ಚರವೂ ಅಲ್ಲ, ಅತ್ತ ನಿದ್ದೆಯೂ ಅಲ್ಲದ ಸ್ಥಿತಿ. ಹೀಗೆ ಎಚ್ಚರ–ಮರೆವುಗಳ ಇಕ್ಕಟ್ಟಾದ ಜಾಡಿನಲ್ಲಿ ಜಾರುತ್ತಿದ್ದ ಪ್ರಜ್ಞೆಯ ಕಿವಿಗೆ ಹತ್ತಿರದಲ್ಲೇ ಶ್ರುತಿಮಾಡಿದ ತಂಬೂರಿಯನ್ನು ಯಾರೋ ಮೀಟಿದಂತಾಗಿ ಚೇತನ ಕ್ಷಣಮಾತ್ರದಲ್ಲಿ ಜಾಗೃತ ಸ್ಥಿತಿಗೆ ಮರಳಿತು.

"ಎಲ್ಲಿಯದು ಈ ನಾದ?"

ಬುದ್ಧಿ ಪ್ರಶ್ನಿಸಿತು.

"ನೀನು ಸಾಯಂಕಾಲ ಕೇಳಿದ್ದೇ ಅಲ್ಲವೆ?"

ಎಲ್ಲೋ ಒಳಗಿನಿಂದ ಒಂದು ಧ್ವನಿ ಉತ್ತರವಿತ್ತಿತು.

ಹೌದು, ಕೇವಲ ಕೆಲವೇ ಘಂಟೆಗಳ ಹಿಂದೆ ಲಾಲಿಸಿದ್ದ ಸಂಗೀತ, ಅದಕ್ಕೆ ಆಧಾರಭೂತವಾಗಿದ್ದ ತಂಬೂರಿಯ ನಾದವಿಲಾಸ ಅವನ ಹೃದಯವನ್ನು ತುಂಬಿ, ಆತ್ಮದ ಹೊರ ವಾತಾವರಣಕ್ಕೂ ಉಕ್ಕಿ ಸೂಸುತ್ತಿತ್ತು. ನೀರು

ಕಾಣದ ಬೆಂಗಾಡಿನಲ್ಲಿ ಚೆನ್ನಾಗಿ ಮಳೆಯಾಗಿ, ನೆಲ ತೃಪ್ತಿಯಾಗುವಷ್ಟು ನೀರು ಕುಡಿದು, ಹೆಚ್ಚಾದ ನೀರು ಸಣ್ಣ ಸಣ್ಣ ಕಾಲುವೆಗಳಾಗಿ ಸುತ್ತಲೂ ಹರಿದು ಹೋಗುವಂತೆ ಆತ್ಮವನ್ನು ತುಂಬಿದ ಗಾನಲಹರಿ ಹೊರಸೂಸುತ್ತಿತ್ತು. ತಂಬೂರಿಗೆ ಅಂಥ ನಾದಸಂಪತ್ತು, ಅದಕ್ಕಿಂತ ಹೆಚ್ಚಾದ ಆಕರ್ಷಕ ವ್ಯಕ್ತಿತ್ವ ಇರುವುದು ಸಾಧ್ಯವೆಂದು ಅವನೆಣಿಸಿರಲಿಲ್ಲ. ಅವನಿಗೆ ನಿಕಟ ಪರಿಚಯ ವಾಗಿದ್ದುದು ದಾಸರ ತಂಬೂರಿಯೊಂದೇ. ಅದು ಬಡ ಮುತ್ತೈದೆಯ ಹಾಗೆ ತಾನೆಷ್ಟೋ ತನ್ನ ಪಾಡೆಷ್ಟೋ ಎನ್ನುವ ಹಾಗಿತ್ತು. ಆದರೆ ಇಂದು ನೋಡಿದ ತಂಬೂರಿ, ಅದರಿಂದ ಹೊಮ್ಮಿದ ಶ್ರುತಿಬದ್ಧ ನಾದಕ್ಕೆ ಸಾಟಿಯಾವುದು ?

ಸಾಮ್ಯಕ್ಕಾಗಿ ಮುಂದೆ ಬಂದ ತಂಬೂರಿಯೊಡನೆ ವೃತ್ತಿವೇಷಧಾರಿ ದಾಸರೂ ಮಧುವಿನ ಮನಸ್ಸಿನ ಮುಂದೆ ಬಂದು ನಿಂತರು. ಸದಾ ಹಸನ್ಮುಖಿ ಯಾಗಿದ್ದ, ತಂದೆಗೆ ಜೀವದ ಗೆಳೆಯರಾಗಿದ್ದ, ಎಷ್ಟೋ ಸಮಯದಲ್ಲಿ ಕಷ್ಟಕ್ಕೆ ಆಗಿದ್ದ ದಾಸರು.

ಈಗ ನೆರವಿಗೆ ಬರಲಾರರೆ ?

ಪ್ರಶ್ನೆಗೆ ತಟಕ್ಕನೆ ಉತ್ತರ ಸಿಕ್ಕಿದಂತಾಯಿತು.

ಕಡಿದು ಹೋಗಿದ್ದ ಸರಪಳಿಗೆ ಕೊಂಡಿ ಹಾಕಿದಂತೆ ವ್ಯಾಜಾಂತರದಿಂದ ಸುಳಿದ ದಾಸರ ನೆನಪಿನಲ್ಲಿ, ಹತ್ತಿರದಲ್ಲೇ ಇಟ್ಟುಕೊಂಡೂ ಕಣ್ಣಿಗೆ ಕಾಣದೆ ಹುಡುಕಾಡುತ್ತಿದ್ದ ವಸ್ತು ಹಠಾತ್ತಾಗಿ ಕೈಗೇ ಸಿಕ್ಕಿದಂತಾಗಿ ಮಧು ಧಿಗ್ಗನೆ ಎದ್ದು ಕುಳಿತ.

## ೬

ದಾಸರನ್ನೊಪ್ಪಿಸುವುದು ಸುಲಭವಾಗಿರಲಿಲ್ಲ.

ಅವನ ನಿರ್ಧಾರ ಕೇಳಿ ಅವರು ಡಂಗು ಬಡಿದವರ ಹಾಗೆ ಕುಳಿತು ಬಿಟ್ಟರು.

" ಏನಪ್ಪಾ ಮಧು ನೀನು ಹೇಳುತ್ತಿರುವುದು. ಇದು ಎಲ್ಲಾದರೂ ಸಾಧ್ಯ ವೇನೊ ?"

" ಏತಕ್ಕೆ ದಾಸರೇ ಸಾಧ್ಯವಾಗಬಾರದು ?"

" ಏತಕ್ಕೆ ಎಂದರೆ ನಿನಗೆ ಬಿಡಿಸಿ ಹೇಳುವುದು ಕಷ್ಟ."

" ನನಗೆಲ್ಲಾ ಗೊತ್ತು ದಾಸರೇ. ಬಡವನಿಗೆ ಸಂಗೀತ ಯಾರು ಹೇಳಿ ಕೊಡುತ್ತಾರೆ ಅಂತ ತಾನೇ ನೀವು ಯೋಚಿಸುತ್ತಿರುವುದು ?"

" ಅದೂ ಒಂದು ಕಾರಣ ಅಂತ ಇಟ್ಟುಕೋ."

" ಒಂದೇ ಮನಸ್ಸಿನಿಂದ ಗುರುಸೇವೆ ಮಾಡಿದರೆ ಎಂಥಾ ಗುರುವಾದರೂ ಹೇಳಿಕೊಡಲೇಬೇಕು."

" ಅದೆಲ್ಲಾ ಹಿಂದಿನ ಕಾಲದ ಮಾತಾಯಿತಪ್ಪಾ. ಈಗ ಕಾಲ ಬಹು ನಾಜೂಕಾಗಿದೆ. ಎಲ್ಲಾ ಕಡೆಯೂ ಹಣಕ್ಕೇ ಬೆಲೆ. ಸಂಗೀತ ಬಡವರ ಪಾಲಿಗೆ ಬರಲಿಲ್ಲ ಕಣೋ, ಮಧು."

" ನೀವು ಮನಸ್ಸು ಮಾಡಿದರೆ ನನ್ನ ಪಾಲಿಗೆ ಅದು ಬರುತ್ತೀನಿ ಅನ್ನತ್ತೆ,

ದಾಸರೇ. ನೀವು ಸ್ವಲ್ಪ ಸಹಾಯ ಮಾಡಿದರೆ ಸಾಕು, ಅಷ್ಟು ಕಷ್ಟವಾಗೊಲ್ಲ ಅಂತ ನನಗೆ ನಂಬಿಕೆ ಇದೆ."

"ಏನು ನಂಬಿಕೆ ಇದೆಯೋಪ್ಪ, ನನಗಂತೂ ನಿನ್ನ ರೀತಿಯೇ ಅರ್ಥವಾಗುವುದಿಲ್ಲ."

"ನೀವೂ ಹೀಗೆಂದುಬಿಟ್ಟರೆ ನಾನು ಯಾರನ್ನು ಕೇಳಬೇಕು, ದಾಸರೇ?"

ಅದೊಂದು ಮಾತು ಥಟ್ಟನೆ ದಾಸರ ಅಂತಃಕರಣವನ್ನು ಮುಟ್ಟಿತು. ಅವರ ಮನಸ್ಸು ಆರ್ದ್ರವಾಯಿತು

"ಅಮ್ಮ ಸುಮ್ಮನೆ ಬಿಡುತಾರೇನೋ, ಮಧು?"

ಎಂದು ಕೇಳಿದರು.

"ಅಮ್ಮನ ವಿಷಯ ನನಗೆ ಬಿಡಿ ದಾಸರೇ, ಅವಳನ್ನೊಪ್ಪಿಸುವುದು ನನ್ನ ಭಾರ. ಈಗ ಅರ್ಧ ಒಪ್ಪೇ ಇದಾಳೆ ಅನ್ನಿ."

"ಹಾಗಾದರೆ ಅಮ್ಮನ ಕಿವಿಗೂ ಬಿದ್ದಿದೆ ಅನ್ನು, ನಿನ್ನ ಏರ್ಪಾಡು?"

"ಬೀಳೋದೇನು, ನನ್ನೆ ನಾನೇ ಹೇಳಿಬಿಟ್ಟೆ."

"ಏನೋಪ್ಪ, ಒಂದು ಎಸ್. ಎಸ್. ಎಲ್. ಸಿ. ಯನ್ನಾದರೂ ಮಾಡಿಕೊಂಡಿದ್ದರೆ ಚೆನ್ನಾಗಿತ್ತು ಅಂತೀನಿ. ನಿನಗೆ ಅದು ಬೇಕಿಲ್ಲ. ಸುಮ್ಮನೆ ಸಂಗೀತ ಸಂಗೀತ ಅಂತ ಹಟ ಹಿಡಿದು ಕುಳಿತಿದ್ದೀ."

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ದಾಸರ ಮನಸ್ಸು ಯಾವುದೋ ಯೋಚನೆಯಲ್ಲಿ ಮುಳುಗಿಹೋಗಿತ್ತು. ಮೌನವನ್ನು ಒಡೆದು ಮಧುವೇ ಮಾತಾಡಿದ:

"ಏನು ದಾಸರೇ, ನನಗೇನು ಹೇಳುತೀರಿ? ನೀವು ಕೈಹಿಡಿದರುಂಟು, ಇಲ್ಲದೆ ಇದ್ದರೆ ಇಲ್ಲ."

"ನೋಡೋಣವಪ್ಪಾ, ನಾನು ಈಗಲೇ ನಿನಗೆ ಏನೂ ಹೇಳಲಾರೆ. ಸ್ವಲ್ಪ ಯೋಚನೆ ಮಾಡೋಕೆ ಅವಕಾಶ ಕೊಡು."

"ಅವಕಾಶ ಬೇಕಾದಷ್ಟು ತೆಗೆದುಕೊಳ್ಳಿ, ದಾಸರೇ. ಆದರೆ ಭರವಸೆ ಕೊಡಿ."

"ಆಗಲಿ, ದೇವರಿದಾನೆ ನೋಡೋಣ"

ಎಂದು ಉತ್ತರವಿತ್ತರು.

ದೇವರಿದಾನೆ ನೋಡೋಣ ಎನ್ನುವುದೇನೋ ಸುಲಭವಾಗಿತ್ತು. ಆದರೆ ಮುಂದಿನ ಕೆಲಸ ಅಷ್ಟು ಸುಲಭವಾಗಿರಲಿಲ್ಲ. ಮಧುಸೂದನನೇನೋ ತನ್ನ ಸಮಸ್ಯೆಯನ್ನು ಸುಲಭವಾಗಿ ದಾಸರ ಹೆಗಲಮೇಲೇರಿಸಿ ಹೊರಟುಬಿಟ್ಟ. ಅದರ ಭಾರ ಹೊತ್ತು ಅವರು ಯೋಚನಾಮಗ್ನರಾಗಿ ಮನೆಯ ದಾರಿ ಹಿಡಿದರು.

ರಮಣಾಚಾರ್ಯರು ಸತ್ತಮೇಲೆ ದಾಸರು ಹೆಚ್ಚಾಗಿ ಅವರ ಮನೆಯ ಕಡೆಗೆ ಹೋಗುತ್ತಿರಲಿಲ್ಲ. ವಾರಕ್ಕೊಮ್ಮೆ ನಿತ್ಯಯಾತ್ರೆಗೆ ಹೋಗುತ್ತಿದ್ದವರೂ ಕೂಡ ಈಚೆಗೆ ಅತ್ತ ಸುಳಿಯುವುದನ್ನು ನಿಲ್ಲಿಸಿಬಿಟ್ಟಿದ್ದರು. ಒಂದು ಮುಷ್ಟಿ ಅಕ್ಕಿಗೆ ಜೀವವನ್ನು ಹಿಡಿಯಾಗಿ ಮಾಡಿಕೊಂಡು ಮೂಗೆತ್ತಿನ ಹಾಗೆ ದುಡಿಯುತ್ತಿದ್ದ ವೆಂಕಮ್ಮನವರನ್ನು ನೋಡಿದರೆ ದಾಸರಿಗೆ ಕರುಳುಕಿತ್ತು ಬರುತ್ತಿತ್ತು. ಆಚಾರ್ಯರು ಇಲ್ಲದಿದ್ದ ಮನೆಯಲ್ಲಿ ಕಾಲಿಡುವುದೆಂದರೆ ಅವರ ಕುತ್ತಿಗೆ ಕಿವುಚಿದ ಹಾಗಾಗುತ್ತಿತ್ತು; ಹಿಂದಿನ ಸ್ನೇಹದ ನೆನಪುಗಳು ಆವರಿಸಿ ಬಂದು ಅವರನ್ನು ದುಃಖವಿಹ್ವಲರನ್ನಾಗಿ ಮಾಡುತ್ತಿತ್ತು. ಆಚಾರ್ಯರು ಬದುಕಿದ್ದಾಗ ಪ್ರತಿ ಏಕಾದಶಿಯೂ ದಾಸರಿಗೆ ಅಕ್ಕಿ ದಕ್ಷಿಣೆ ತಾಂಬೂಲ ಸಲ್ಲುವುದು ಮಾಮೂಲಾಗಿ ಹೋಗಿತ್ತು. ಆಗಿನ ಸನ್ನಿವೇಶವೇ ಬೇರೆ, ಈಗಿನ ಸ್ಥಿತಿಯೇ ಬೇರೆ. ಯೋಗಕ್ಷೇಮ ವಿಚಾರಿಸಲು ತಾವು ಹೋದರೂ ವೆಂಕಮ್ಮ ಮಡಲಿಗೆ ಏನಾದರೂ ಹಾಕದೆ ಕಳಿಸುತ್ತಿರಲಿಲ್ಲವೆಂಬುದು ದಾಸರಿಗೆ ಚೆನ್ನಾಗಿ ಮನವರಿಕೆ ಯಾಗಿತ್ತು. ಈ ಎಲ್ಲ ಕಾರಣಗಳಿಂದಲೂ ಅವರು ಆಚಾರ್ಯರ ಮನೆಯ ಕಡೆಗೇ ಹೋಗದೆ ತಪ್ಪಿಸಿಕೊಳ್ಳುತ್ತಿದ್ದರು. ಏನು ಸಮಾಚಾರವಿದ್ದರೂ ಹೆಂಡತಿಯಿಂದ ತಿಳಿಯುತ್ತಿತ್ತು. ಮಧುಸೂದನನಂತೂ ದಿನವೂ ಭೇಟಿ ಯಾಗುತ್ತಲೇ ಇದ್ದ.

ಮಧುಸೂದನನಿಗೆ ಸಂಗೀತದ ಗೀಳು ಹತ್ತಿರುವುದನ್ನು ಕಂಡು ದಾಸರಿಗೆ ಭಯವಾಯಿತು. ಈ ಹುಡುಗ ತಿಳಿಯದೆ ಏನಾದರೂ ಅವಿವೇಕ ಮಾಡಿ ಕೊಳ್ಳುತ್ತಾನೇನೋ ಎಂದು ಭಾವಿಸಿದರು. ಈ ವಿಷಯದಲ್ಲಿ ತಾವು ಪ್ರವರ್ತಿಸುವುದು ತಪ್ಪಾದೀತೇನೋ ಎನ್ನುವ ಶಂಕೆಯೂ ಅವರಿಗೆ ಬಾರದಿರಲಿಲ್ಲ. ಹೇಗಾದರೂ ಆಗಲಿ, ಯಾವುದಕ್ಕೂ ಮೊದಲು ವೆಂಕಮ್ಮನವರ ಕಿವಿಯ ಮೇಲೆ ಒಂದು ಮಾತು ಹಾಕುವುದು ವಿಹಿತವೆಂದು ಅವರ ಬುದ್ಧಿ ಹೇಳಿತು.

ಸರ್ವತ್ರೈಕಾದಶಿಯ ದಿನ ಮಧ್ಯಾಹ್ನ ನಿತ್ಯಯಾತ್ರೆಯಿಂದ ಮನೆಗೆ ಹಿಂದಿರುಗುತ್ತ ರಮಣಾಚಾರ್ಯರ ಮನೆ ಕಡೆಯೇ ತಿರುಗಿದರು.

ವೆಂಕಮ್ಮ ಹಜಾರದಲ್ಲಿ ಅಕ್ಕಿ ಆರಿಸುತ್ತ ಕುಳಿತಿದ್ದವರು ದಾಸರನ್ನು ಕಂಡು,

" ಬರಬೇಕು, ತುಂಬ ದಿವಸವಾಯಿತು ಈ ಕಡೆ ಬಂದು "

ಎಂದು ವಿನಯವಾಗಿ ನುಡಿದು ಎದ್ದುಹೋಗಿ ದೇವರ ಮನೆಯಲ್ಲಿದ್ದ ಮಣೆ ತಂದು ಹಾಕಿದರು. ದಾಸರು ಮಣೆಯ ಮೇಲೆ ಕುಳಿತುಕೊಳ್ಳುತ್ತ,

" ಏನಮ್ಮಾ ಮನೆಯ ಕಡೆ ಎಲ್ಲಾ ಕ್ಷೇಮವೋ ? ಈ ಕಡೆ ಬರುವುದಕ್ಕೇ ಅವಕಾಶವಾಗಲಿಲ್ಲ. ಮಧು ಸಿಕ್ಕುತ್ತಲೇ ಇರುತ್ತಾನೆ ಅನ್ನಿ. ಯೋಗಕ್ಷೇಮ ವಿಚಾರಿಸುತ್ತಿರುತ್ತೇನೆ "

ಎಂದರು.

" ಹೌದು, ನರಸಕ್ಕ ಹೇಳುತಾ ಇರುತಾರೆ. ಆದರೂ ತಾವು ಈ ಕಡೆ ತಿಂಗಳಿಗೊಂದು ಸಲವಾದರೂ ಬಂದು ಹೋಗುತ್ತಿದ್ದರೆ ಎಷ್ಟೋ ಧೈರ್ಯ. ನಮಗೆ ತಾನೇ ಬುದ್ಧಿ ಹೇಳುವುದಕ್ಕೆ ಹಿರಿಯರು ಇನ್ನಾರಿದ್ದಾರೆ ?"

" ನನ್ನ ಹಿರಿಯತನ ಅಷ್ಟರಲ್ಲೇ ಇದೆ. ನಾನೂ ಹೊರಿಸಿರುವ ಪಡಗೋಪುರ ವಾದರೂ ಏನು ?"

"-ಹಾಗೆಂದರೇನು ? ಕಷ್ಟಕಾಲದಲ್ಲಿ ನಮ್ಮನ್ನು ಕಾಪಾಡಿದವರೇ ನೀವು. ನೀವೂ ನರಸಕ್ಕ ಜೊತೆಗಿದ್ದು ಧೈರ್ಯ ಕೊಡದಿದ್ದರೆ ನಾನು ಯಾವ ಕೆರೆಯೋ ಬಾವಿಯೋ ಹುಡುಕಿಕೊಳ್ಳಬೇಕಾಗಿತ್ತು."

" ಛೀ ಛೀ ಅಂಥಾ ಮಾತು ಯಾಕೆ ? ಏನೋ, ದೇವರು ಕಷ್ಟ ಕೊಡ ಬಾರದಾಗಿತ್ತು, ಕೊಟ್ಟ. ಪ್ರಾರಬ್ಧ ಕರ್ಮಕ್ಕೆ ಯಾರು ಹೊಣೆ, ಹೇಳಿ ? ಮುಖ್ಯ ಆ ಹುಡುಗ ಒಂದು ಮುಂದಕ್ಕೆ ಬಂದರೆ ಹೇಗಾದರೂ ತೆಪ್ಪೆತ್ತಿಕೊಳ್ಳ ಬಹುದು."

" ನಾನೂ ಅದೇ ಹೇಳೋಣ ಅಂತಿದ್ದೆ. ನನಗಂತೂ ಅವನದೇ ಯೋಚನೆಯಾಗಿದೆ. ಈ ಸಲ ಫೇಲಾದ ಮೇಲಂತೂ ಅವನಿಗೆ ಓದಿನ ಮೇಲೆ ಸ್ವಲ್ಪವೂ ಮನಸ್ಸಿಲ್ಲ. ಹಾಳು ಸಂಗೀತ ಸಂಗೀತ ಅಂತ ಹಿಡಿದುಬಿಟ್ಟಿದಾನೆ. ಅವನ ಬುದ್ಧಿಯೇಕೆ ಹೀಗಾಗಿದೆಯೋ ಕಾಣೆ. ದೇವರು ಹಣೆಯಲ್ಲಿ ಏನು

ಬರೆದಿದ್ದಾನೆಯೋ, ಅವನಿಗೆ ಏತಕ್ಕೆ ಈ ಬುದ್ಧಿ ಬಂದಿದೆಯೋ ನನಗೊಂದೂ ಅರ್ಥವಾಗುವುದಿಲ್ಲ. ನೀವಾದರೂ ಒಂದು ಮಾತು ಹೇಳಿದರೆ ವಾಸಿ ಅಂತ ಕಾಣತ್ತೆ."

"ಹೇಳಿದೆನಮ್ಮಾ, ಹೇಳಿದೆ. ನನ್ನ ಹತ್ತಿರವೂ ಪ್ರಸ್ತಾಪ ಮಾಡಿದ. ಎಲಪ್ಪಾ, ನಮ್ಮಂಥಾವರಿಗೆ ಇದು ತರವಲ್ಲ ಕಣೋ ಎಂದೆ. ಆದರೆ ಅದೇನೋ ಅವನ ಮನಸ್ಸಿಗೆ ಅದೇ ಬಲವಾಗಿ ಹಿಡಿದುಬಿಟ್ಟಿರುವ ಹಾಗಿದೆ. ನನ್ನ ಏನಾದರೂ ಮಾಡಿ ಅಂತ ಕೂತಿದ್ದಾನೆ."

"ಹಾಗಾದರೆ ನಿಮ್ಮ ಹತ್ತಿರವೂ ಬಂತು ಅನ್ನಿ ವಿಷಯ ?"

"ಬಂತಮ್ಮಾ ಬಂತು. ನನಗೆ ಆಗಿನಿಂದ ಅದೇ ಯೋಚನೆಯಾಗಿದೆ. ಏನು ಮಾಡಬೇಕೋ ಒಂದೂ ತೋರುತ್ತಿಲ್ಲ."

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು. ಇಬ್ಬರ ಮನಸ್ಸನ್ನೂ ಈ ಹೊಸ ಸಮಸ್ಯೆ ಆವರಿಸಿಬಿಟ್ಟಿತ್ತು. ಒಂದು ಕ್ಷಣ ಬಿಟ್ಟು ದಾಸರು,

"ಹುಡುಗ ಹಟ ಹಿಡಿದ ಅನ್ನಿ. ಆಗ ನಾವೇನು ಮಾಡುವುದಕ್ಕಾಗತ್ತೆ ?"

"ನನಗೊಂದೂ ತೋರುವುದಿಲ್ಲ. ನೀವೇ ಯಾವುದಾದರೂ ಮಾರ್ಗ ಸೂಚಿಸಿ."

"ಇದು ಬಹಳ ಕಷ್ಟದ ಪ್ರಶ್ನೆ. ಏನೋ ತೋರಿತೆಂದು ಈಗ ಒಂದು ಹಾದಿ ಹಿಡಿದರೆ ಮುಂದೆ ಅವನ ಜೀವನಕ್ಕೇ ತೊಂದರೆಯಾಗಬಹುದು; ಅಥವಾ ಅನುಕೂಲವಾದರೂ ಆಗಬಹುದು. ಹೀಗೇ ಅಂತ ಹೇಳುವುದಕ್ಕಾಗುವುದಿಲ್ಲ"

ಎಂದರು ದಾಸರು ತಮ್ಮ ನರೆತ ಗಡ್ಡವನ್ನು ಕೆರೆದುಕೊಳ್ಳುತ್ತ.

"ನೀವು ನಮ್ಮ ಹಿತವನ್ನೇ ಯೋಚಿಸುತ್ತೀರಿ ಎನ್ನುವ ಧೈರ್ಯ ನನಗಿದೆ. ನೀವು ಯಾವುದನ್ನೂ ಯೋಚಿಸಿ ಹೇಳಿ. ಹಾಗೇ ಮಾಡೋಣ. ಮುಖ್ಯ ಅವನಿಗೊಂದು ದಾರಿಯಾಗಬೇಕು."

ವೆಂಕಮ್ಮನವರು ಜವಾಬ್ದಾರಿಯನ್ನು ತಮ್ಮ ಮೇಲೆಯೇ ಹಾಕುತ್ತಿದ್ದಾರೆಂಬುದು ದಾಸರಿಗೆ ಭಾಸವಾಗದೆ ಇರಲಿಲ್ಲ. ರಮಣಾಚಾರ್ಯರೇ ಬದುಕಿದ್ದು ಅವರೇ ಈ ಪ್ರಶ್ನೆಯನ್ನು ಎದುರಿಸುವಹಾಗಿದ್ದಿದ್ದರೆ ಹೇಗೆ ಪರಿಹರಿಸುತ್ತಿದ್ದರೆಂದು

ದಾಸರು ಯೋಚಿಸಿದರು. ತಂದೆಯಿಲ್ಲದ ಹುಡುಗನಿಗೆ ತಂದೆಯಂತೆ ಹಿರಿಯ ಸ್ಥಾನದಲ್ಲಿರುವ ತಾವು ಅವನ ಭವಿಷ್ಯವನ್ನು ಕುರಿತು ಚಿಂತಿಸಬೇಕಾಗಿತ್ತು. ಅಷ್ಟೇ ಜಾಗರೂಕತೆಯಿಂದ ತಿಳಿವಳಿಕೆಯನ್ನೂ ಕೊಡಬೇಕಾಗಿತ್ತು. 'ದೇವರೇ ನನ್ನನ್ನು ಎಂಥಾ ಸಂದಿಗ್ಧಕ್ಕೆ ಸಿಕ್ಕಿಸಿದೆ' ಎಂದು ಒಂದು ಗಳಿಗೆ ಅವರ ಮನಸ್ಸು ವ್ಯಾಕುಲಗೊಂಡಿತು. ಆಚಾರ್ಯರ ಜೀವಕ್ಕೆ ತಾವು ತೀರಿಸಬೇಕಾದ ಋಣ ಇನ್ನೂ ಇದೆಯೆಂಬುದನ್ನು ಅವರು ಮರೆತಿರಲಿಲ್ಲ.

"ಆಗಲಮ್ಮಾ ನೋಡೋಣ. ಹರಿಚಿತ್ತ ಹೇಗಿದೆಯೋ"

ಎಂದುಕೊಂಡು ಅಲ್ಲಿಂದ ಹೊರಡಲು ಎದ್ದರು.

"ಸ್ವಲ್ಪ ಕುಳಿತುಕೊಳ್ಳಿ"

ಎಂದು ವೆಂಕಮ್ಮ ಎದ್ದು ಒಳಗೆ ಹೋಗಿ ಒಂದು ತಟ್ಟೆಯಲ್ಲಿ ಒಂದು ಪಾವು ಅಕ್ಕಿ, ತಾಂಬೂಲ, ಒಂದಾಣೆ ಪಕ್ಷಿಣೆ ತಂದು ದಾಸರ ಮುಂದಿಟ್ಟು ನಮಸ್ಕಾರ ಮಾಡಿದರು. ಅದನ್ನು ನೋಡಿ ದಾಸರ ಮನಸ್ಸು ಖಿನ್ನವಾಯಿತು.

"ಅಯ್ಯೋ ಇದೆಲ್ಲಾ ಯಾಕೆ ತಾಯಿ? ನೀವು ಹೀಗೆಲ್ಲಾ ಮಾಡಿದರೆ ನನ್ನ ಮನಸ್ಸಿಗೆ ತುಂಬಾ ಪೇಚಾಟವಾಗತ್ತೆ"

"ಇವೊತ್ತು ಸರ್ವತ್ರೈಕಾದಶಿ. ಮನೆಗೆ ಬಂದ ಹಿರಿಯರನ್ನು ಬರಿಗೈಯಲ್ಲಿ ಕಳಿಸುವುದೇ?"

"ಕೊಡುವಾಗ ಎರಡು ಕೈಯಲ್ಲೂ ಕೊಟ್ಟಿರಿ. ಹೆರರಿಂದ ಕೊಡಿಸಿದಿರಿ. ಆಚಾರ್ಯರ ಉಪಕಾರದಿಂದ ಬೆಳೆದದ್ದು ಈ ದೇಹ. ಈಗ ಕೈ ನಡೆಯದಿರುವಾಗ ಈ ಉಪಚಾರವೆಲ್ಲಾ ಬೇಡಮ್ಮಾ. ಹೀಗೆ ಹೇಳಿದೆ ಎಂದು ಏನೂ ತಿಳಿದುಕೊಳ್ಳಬೇಡಿ."

ದಾಸರ ಕಂಠ ಗದ್ಗದವಾಯಿತು.

ವೆಂಕಮ್ಮನವರ ಕಣ್ಣು ಹಸಿಗೂಡಿತು.

ದಾಸರು ಅದನ್ನು ನೋಡಿ,

"ಮನಸ್ಸು ಚಿಕ್ಕದು ಮಾಡಿಕೊಳ್ಳಬೇಡಿ, ಕೊಟ್ಟದ್ದನ್ನು ತಿರಸ್ಕರಿಸುವುದಿಲ್ಲ. ಹೀಗೆ ಮುಂದೆ ತೊಂದರೆ ತೆಗೆದುಕೊಳ್ಳಬಾರದು. ಕೊಡುವ ಕಾಲ ಬರಲಿ ಆಗ ನಾನೇ ಕೇಳಿ ತೆಗೆದುಕೊಳ್ಳುತ್ತೇನೆ."

"ಆ ಕಾಲ ನಿಜವಾಗಿ ಬರುವುದೆ?"

"ದೈವಚಿತ್ತವಿದ್ದರೆ ಏಕಾಗಬಾರದು ?"

ಎಂದು ನುಡಿದು ದಕ್ಷಿಣೆ ತಾಂಬೂಲ ತೆಗೆದುಕೊಂಡು ಅಕ್ಕಿಯನ್ನು ಜೋಳಿಗೆಗೆ ಹಾಕಿಕೊಂಡರು. ವೆಂಕಮ್ಮನವರಿಂದ ಬೀಳ್ಕೊಂಡು ಹೊರಟ ದಾಸರ ತಲೆಯಲ್ಲಿ ಆಲೋಚನೆಯ ಸುಳಿ ವೇಗವಾಗಿ ಸುತ್ತುತ್ತಿತ್ತು.

"ಹೌದು, ದೈವಚಿತ್ತವಿದ್ದರೆ ಏಕಾಗಬಾರದು ?"

ಎಂದು ಅವರ ಮಾತಿಗೆ ಮನಸ್ಸಿನಿಂದಲೇ ಮಾರ್ದನಿ ಬಂದಿತು.

ಆಗಲೇ ಅವರಿಗೊಂದು ಉಪಾಯ ಹೊಳೆಯಿತು.

## ೭

ಆಸ್ಥಾನ ವಿದ್ವಾನ್ ಚಿಕ್ಕರಾಮರಾಯರು ಪ್ರತಿ ಗುರುವಾರ ಸಂಜೆಯೂ ಮನೆಯಲ್ಲಿ ಭಜನೆ ಮಾಡುತ್ತಿದ್ದರು. ಅವರಿಗೆ ಮಂತ್ರಾಲಯದ ಗುರುಗಳಲ್ಲಿ ತುಂಬ ಭಕ್ತಿ. ಗುರುಗಳ ಪಟಕ್ಕೆ ಪುಷ್ಪಾಲಂಕಾರ ಮಾಡಿ, ತುಪ್ಪದ ನಂದಾದೀಪ ಹೊತ್ತಿಸಿಟ್ಟು, ಮುಂದೆ ಕುಳಿತು ತಂಬೂರಿ ಹಿಡಿದು ಭಕ್ತಿಯಿಂದ ನಾಲ್ಕು ದೇವರ ನಾಮ ಹಾಡುತ್ತಿದ್ದರು. ಶಿಷ್ಯರು ಯಾರಾದರೂ ಹತ್ತಿರ ಇದ್ದರೆ ಪಕ್ಕವಾದ್ಯ ನುಡಿಸುತ್ತಿದ್ದರು; ಇಲ್ಲದಿದ್ದರೆ ಬರಿಯ ತಂಬೂರಿ ಶ್ರುತಿಯಲ್ಲೇ ಒಂದು ಒಂದೂವರೆ ಗಂಟೆಗಳ ಹೊತ್ತು ರಾಯರ ಹಾಡಿಕೆ ನಡೆಯುತ್ತಿತ್ತು. ಶಿಷ್ಯರೂ ಯಾರಾದರೂ ಹಾಡುವವರಿದ್ದರೆ ಹಾಡುತ್ತಿದ್ದರು. ಆಮೇಲೆ ಗುರುಗಳಿಗೆ ಮಂಗಳಾರತಿಯಾಗಿ, ಬಂದಿದ್ದವರಿಗೆ ಚರಪು ಹಂಚುತ್ತಿದ್ದರು.

ಮೈಸೂರಿನ ಸಂಗೀತ ಭಕ್ತರಿಗೆ ರಾಯರ ಮನೆಯ ಬಾಗಿಲು ಸದಾ ತೆರೆದಿರುತ್ತಿತ್ತು. ರಾಯರ ನಿರಾಡಂಬರ ಜೀವನ, ನಿಸ್ಸೀಮವಾದ ಪಾಂಡಿತ್ಯ ವಿದ್ದರೂ ಹಸುಗೂಸಿನಂತೆ ಹೆಮ್ಮೆ ಕಾಣದ ಮನಸ್ಸು, ತಿಳಿದವರು ತಿಳಿಯದವರು ಎಂದು ಭೇದವೆಣಿಸದೆ ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡಿ ಆದರಿಸುವ ಸೌಜನ್ಯ – ಅವರಿಗೆ ಅಪಾರ ಕೀರ್ತಿಯನ್ನು ಸಂಪಾದಿಸಿ ಕೊಟ್ಟಿದ್ದವು. ಅಂತೆಯೆ ಮೈಸೂರಿನ ಜನಕ್ಕೆ ಚಿಕ್ಕರಾಮರಾಯರು ಎಂದರೆ ತುಂಬ ಅಕ್ಕರೆ. ಜೇನಿಗೆ ನೊಣ ಮುತ್ತುವಂತೆ ಸಹಜವಾಗಿಯೇ ಅವರಲ್ಲಿಗೆ ಜನ ಬರುತ್ತಿದ್ದರು. ಮನೆ ಒಂದು ಸಂದಿಯಲ್ಲಿದ್ದು ಚಿಕ್ಕದಾಗಿದ್ದರೂ ಸ್ಥಳಸಂಕೋಚವನ್ನು ಲೆಕ್ಕಿಸದೆ

ವಿದ್ವದ್ರಸಿಕರು, ಸಂಗೀತ ಭಕ್ತರು ಗುರುವಾರ ಸಂಜೆ ತಪ್ಪದೆ ಬಂದು ಸೇರುತ್ತಿದ್ದರು. ರಾಯರ ದೇವರನಾಮಗಳ ಹಾಡಿಕೆ ಕೇಳುವುದೂ ಒಂದು ಸೌಭಾಗ್ಯವಾಗಿತ್ತು. ಜನ ಅದಕ್ಕೆ ಹಾತೊರೆಯುತ್ತಿದ್ದುದರಲ್ಲಿ ಅಚ್ಚರಿಯಿರಲಿಲ್ಲ.

ಒಂದು ಗುರುವಾರ ಸಂಜೆ ರಾಯರ ಮನೆಯಲ್ಲಿ ಭಜನೆ ನಡೆಯುತ್ತಿತ್ತು. ಜನ ಮಾಮೂಲಿನಂತೆ ಸೇರಿದ್ದರು. ರಾಯರು ತಾವೇ ತಂಬೂರಿ ಹಿಡಿದು ಕುಳಿತಿದ್ದರು. 'ತನು ನಿನ್ನದು ಜೀವನ ನಿನ್ನದು' 'ಅನುಗಾಲವು ಚಿಂತೆ ದೇಹಕ್ಕೆ' 'ಮಂಚ ಬಾರದು, ಮಡದಿ ಬಾರಳು' 'ಕರೆದರೆ ಬರಬಾರದೆ' ಮೊದಲಾಗಿ ನಾಲ್ಕಾರು ಕೀರ್ತನೆಗಳನ್ನು ಹಾಡಿದರು.

ಹಾಡುತ್ತ ಹಾಡುತ್ತ ಉದ್ವೇಗ ಹೆಚ್ಚಿ ಅವರ ಮುಖ ಕೆಂಪಗಾಗುತ್ತ ಬಂದಿತು. ಕಣ್ಣು ಅರ್ಧ ನಿಮೀಲಿತವಾಯಿತು. ತೆರೆಯ ಮೇಲೆ ತೆರೆಯೆದ್ದು ಬರುವಂತೆ ಆವರಿಸಿ ಬರುತ್ತಿದ್ದ ಭಕ್ತಿಪ್ರವಾಹದಲ್ಲಿ ಅವರ ದೇಹಾದ್ಯಂತವೂ ಮಿಂದು ಪುಲಕಿತವಾಗಿ, ಮನಸ್ಸು ಪರವಶತೆಗೆ ಸಂದು ಬಾಹ್ಯ ಪ್ರಪಂಚವನ್ನೇ ಮರೆತಿತು. ಸದ್ದಿಲ್ಲದೆ ಆಲಿಸುತ್ತ ಕುಳಿತಿದ್ದ ಶ್ರೋತೃವೃಂದಕ್ಕೂ ಆ ವಾತಾವರಣದ ಕಾವು ತಾಕಿತು. ಪಿಟೀಲು ನುಡಿಸುತ್ತಿದ್ದ ಶಿಷ್ಯ ರಾಜಣ್ಣ, ಮೃದಂಗ ಬಾರಿಸುತ್ತಿದ್ದ ಶೇಷಗಿರಿ ಎಲ್ಲಿ ಎಚ್ಚರ ತಪ್ಪಿ ಅಪಚಾರವೆಸಗುವೆವೋ ಎಂದು ಭೀತರಾದರು.

ಹೀಗೆ ಅವಿಚ್ಛಿನ್ನವಾಗಿ ಒಂದೂವರೆ ಗಂಟೆಯ ಹೊತ್ತು ಹಾಡಿದ ಬಳಿಕ ರಾಯರು ತಂಬೂರಿಯನ್ನು ಮೆಲ್ಲನೆ ಪಕ್ಕದಲ್ಲಿಟ್ಟು, ದೀರ್ಘವಾಗಿ ನಿಟ್ಟುಸಿರು ಬಿಟ್ಟು ಕಣ್ಣೊರಸಿಕೊಂಡರು.

"ಇನ್ನು ಮಂಗಳಾರತಿ ಆಗಬಹುದು."

ಆಗಲೇ ಜನಕ್ಕೆ ಎಚ್ಚರ. ತಮ್ಮ ಅಸ್ತಿತ್ವವನ್ನೇ ಮರೆತು, ಅಲ್ಲಾಡದಂತೆ ಶ್ರೋತೃಮಾತ್ರೇಂದ್ರಿಯರಾಗಿ ಕುಳಿತು ಯಾವುದೋ ಲೋಕದಲ್ಲಿ ತೇಲಿಹೋಗುತ್ತಿದ್ದಂತಿದ್ದ ಶ್ರಾವಕರು ಸುತ್ತಮುತ್ತ ನೋಡಿ ಜಾಗೃತರಾಗಿ ತಾವೆಲ್ಲಿದ್ದೇವೆಂಬುದನ್ನು ಮನಸ್ಸಿಗೆ ಮತ್ತೆ ದೃಢಪಡಿಸಿಕೊಂಡರು.

ಮಂಗಳಾರತಿ ಆದಮೇಲೆ ಎಲ್ಲರಿಗೂ ಪ್ರಸಾದವಿನಿಯೋಗವಾಗಿ ಒಬ್ಬೊಬ್ಬರಾಗಿ ರಾಯರ ಅಪ್ಪಣೆ ಪಡೆದು ಬೀಳ್ಕೊಂಡರು.

ಗೋಡೆ ಒರಗಿಕೊಂಡು ಕುಳಿತು ಕರವಸ್ತ್ರದಿಂದ ಗಾಳಿಹಾಕಿಕೊಳ್ಳುತ್ತಿದ್ದ ರಾಯರ ದೃಷ್ಟಿಗೆ ದಾಸರು ಬಿದ್ದದ್ದು ಆಗಲೇ.

"ಓಹೋ, ಏನು ದಾಸರೇ ಇಷ್ಟು ಅಪರೂಪ ?"

"ಅಪರೂಪವೇನು ಬಂತು ಸ್ವಾಮಿ, ಏನೋ ಹೀಗೇ ಬಂದೆ. ಅಮೃತ ವನ್ನೇ ಉಣಬಡಿಸಿ ತೃಪ್ತಿಪಡಿಸಿಬಿಟ್ಟಿರಿ. ಸಾಕ್ಷಾತ್ ಪುರಂದರದಾಸರೇ ಬಂದಿದ್ದರೋ ಎನ್ನುವ ಹಾಗಿತ್ತು."

"ಅಷ್ಟು ದೊಡ್ಡ ಮಾತು ನನಗಲ್ಲ. ಏನೋ ಅಲ್ಪಸೇವೆ. ದೇವರು- ರಾಯರು ನಡೆಸುತ್ತಾ ಇದಾರೆ"

ಎಂದು ರಾಯರು ವಿನಯದಿಂದ ನುಡಿದು ಆ ಮಾತು ತಿರುಗಿಸಲು,

"ನೀವು ಬಂದದ್ದು ತುಂಬ ಸಂತೋಷ. ಈ ಹುಡುಗ ಯಾರು ?"

ದಾಸರು ಹೆದರುತ್ತಲೇ ಮಧುಸೂದನನ ಪೂರ್ವೋತ್ತರ ತಿಳಿಸಿ ಅವನು ಸಂಗೀತ ಕಲಿಯಬೇಕೆಂದು ಹಟಹಿಡಿದಿದರುವ ಸಂಗತಿಯನ್ನು ವಿಜ್ಞಾಪಿಸಿ ಕೊಂಡು ರಾಯರ ನೆರವು ಬೇಡಿದರು.

"ಹುಡುಗನಿಗೇನಾದರೂ ಬಾಲ್ಯಪಾಠ ಆಗಿದೆಯೆ, ದಾಸರೇ ?"

"ಕ್ರಮವಾಗಿ ಪಾಠವೇನೂ ಆಗಿಲ್ಲ. ಆದರೆ ಕಚೇರಿ ಮುಂತಾದುವನ್ನು ಕೇಳಿ ಅಲ್ಪ ಸ್ವಲ್ಪ ಕುರುಡುಜ್ಞಾನ ಸಂಪಾದಿಸಿಕೊಂಡಿದಾನೆ, ಅಷ್ಟೆ. ಕಲಿಯ ಬೇಕೆಂಬ ಆಸೆಯೇನೋ ಅಪಾರವಾಗಿದೆ. ಆದರೆ ಬಡತನ...."

ಎಂದು ದಾಸರು ಅರ್ಧೋಕ್ತಿಯಲ್ಲಿ ನಿಲ್ಲಿಸಿದರು.

ರಾಯರ ಮುಖದಲ್ಲಿ ಯಾವುದೋ ಭಾವ ಮೂಡಿ ಹಣೆಯ ಮೇಲೆ ಗೆರೆಗಳು ಕಾಣಿಸಿಕೊಂಡವು. ಅವರ ಬಾಯಿಂದ ಮುಂದೇನು ಬರುವುದೋ ಎಂದು ದಾಸರು ಬಾಯಲ್ಲಿ ಅಕ್ಕಿ ಕಾಳು ಹಾಕಿಕೊಂಡು ನಿರೀಕ್ಷಿಸುತ್ತ ಕುಳಿತರು. ಮಧುಸೂದನನ ಜೀವ ಬಾಯಿಗೇ ಬಂದು ತುಕತುಕ ಎನ್ನುತ್ತಿತ್ತು.

"ಬಾಲ್ಯಪಾಠ ಆಗಿದ್ದರೆ ಚೆನ್ನಾಗಿತ್ತು, ಚಿಂತೆಯಿಲ್ಲ. ನಾಳೆ ನನ್ನ ಹತ್ತಿರ ಕಳಿಸಿಕೊಡಿ. ನಮ್ಮ ಹುಡುಗ ಸಂಜೀವನ ಹತ್ತಿರ ಪಾಠಕ್ಕೆ ಗೊತ್ತುಮಾಡಿ ಕೊಡುತ್ತೇನೆ. ಯಾವುದಕ್ಕೂ ಯೋಚಿಸಬೇಕಾದದ್ದಿಲ್ಲ. ಹುಡುಗನ ಭವಿಷ್ಯ ನನ್ನ ಕೈಗೆ ಬಿಡಿ"

ಎಂದು ರಾಯರು ನುಡಿದರು.

ದಾಸರು ಕೃತಜ್ಞತೆಯಿಂದ ಕೈಮುಗಿದು,

"ಸದ್ಯ ಅಷ್ಟು ಅಪ್ಪಣೆ ಕೊಡಿಸಿದರೆ ಧನ್ಯನಾದೆ. ನಾಳೆಯೇ ಕಳಿಸಿ ಕೊಡುತ್ತೇನೆ"

ಎಂದು ಎದ್ದು ನಿಂತು ಮಧುಸೂದನನಿಗೆ ಕಣ್ಣುಸನ್ನೆ ಮಾಡಿದರು. ಅವನು ರಾಯರಿಗೆ ದೀರ್ಘದಂಡ ಪ್ರಣಾಮ ಮಾಡಿದ.

"ಒಳ್ಳೆಯದು, ಹೋಗಿಬಿಟ್ಟು ಬಾಪ್ಪ"

ಎಂದು ರಾಯರು ಅಂತಃಕರಣಪೂರ್ವಕವಾಗಿ ತಲೆ ಸವರಿ ಹರಸಿ ಕಳಿಸಿ ಕೊಟ್ಟರು.

ಚಿಕ್ಕರಾಮರಾಯರು ಮಾತುಕೊಟ್ಟಿದ್ದಂತೆ ಒಂದು ಶುಭ ದಿನ ಸಂಜೀವಯ್ಯನ ಬಳಿ ಮಧುಸೂದನನ ಬಾಲ್ಯಪಾಠ ಅರಂಭವಾಯಿತು. ಜೊತೆಗೆ ರಾಮರಾಯರು ಹುಡುಗನಿಗೆ ನಿತ್ಯವೂ ಒಂದು ಹೊತ್ತಿನ ಊಟವನ್ನು ತಮ್ಮ ಮನೆಯಲ್ಲಿ ದಯಪಾಲಿಸಿ ತಮ್ಮ ಔದಾರ್ಯವನ್ನು ತೋರಿಸಿದರು. ಮಧು ಸೂದನ ರಾತ್ರಿಯ ಹೊತ್ತು ಹಳ್ಳದಕೇರಿಯಲ್ಲಿದ್ದ ಸಂಜೀವಯ್ಯನ ಮನೆಗೇ ಹೋಗಿ ಮಲಗಿಕೊಳ್ಳುವುದು, ಬೆಳಗಿನ ಜಾವ ಎದ್ದು ಸರಳೆ ಕೂಗುವುದು ನಿತ್ಯವಿಧಿಯಾಯಿತು. ಬೆಳಗಿನ ಜಾವ ಅಷ್ಟು ಹೊತ್ತಿಗೆ ಎದ್ದು ಅಭ್ಯಾಸ ವಿಲ್ಲದ್ದರಿಂದ ಬೇಗ ಎಚ್ಚರವಾಗದೆ ನಾಲ್ಕು ದಿನ ಕಷ್ಟವಾಯಿತು. ಆದರೆ ಸಂಜೀವಯ್ಯ ಅವನನ್ನು ಹದಕ್ಕೆ ತರುವುದರಲ್ಲಿ ಶ್ರದ್ಧೆವಹಿಸಲಾರಂಭಿಸಿದ.

ಸಂಜೀವಯ್ಯನ ಮೇಲೆ ಗುರುಗಳು ದೊಡ್ಡ ಜವಾಬ್ದಾರಿ ಹೊರಿಸಿದ್ದರು. ಶಿಷ್ಯನನ್ನು ಬೇಗ ಮುಂದಕ್ಕೆ ತರುವುದು ಅವನ ಕರ್ತವ್ಯವಾಗಿತ್ತು. ತಮ್ಮ ಶಿಷ್ಯವರ್ಗದಲ್ಲಿ ಎಲ್ಲರನ್ನೂ ಬಿಟ್ಟು ಗುರುಗಳು ತನ್ನೊಬ್ಬನನ್ನೇ ಈ ಕೆಲಸಕ್ಕೆ ಆರಿಸಿಕೊಂಡದ್ದರಲ್ಲಿ ಏನೋ ವಿಶೇಷಾರ್ಥವಿರಬೇಕೆಂದು ಸಂಜೀವಯ್ಯ ಭಾವಿಸಿದ. ಅವನದು ಏನೋ ಬೇಕಾಬಿಟ್ಟಿ ಪಾಠ ಹೇಳುವ ವಿಧಾನವಾಗಿರಲಿಲ್ಲ. ಗುರುಗಳು ತನಗೆ ಕಲಿಸಿಕೊಟ್ಟಿದ್ದನ್ನು ತನ್ನ ಶಿಷ್ಯನಿಗೆ ನಿರ್ವಂಚನೆಯಿಂದ ಹೇಳಿಕೊಟ್ಟು ಗುರುಗಳಿಂದ ಶಹಭಾಸ್‌ಗಿರಿ ಪಡೆಯಬೇಕೆಂಬ ಹುರುಡು ಸಂಜೀವಯ್ಯನಿಗೆ ಹತ್ತಿತು.

ಅವನೂ ಬಡತನದಲ್ಲೇ ಬೆಳೆದವನು. ಅವನ ತಂದೆ ರಂಗಪ್ಪನವರು ಮಾಗಡಿಯಲ್ಲಿ ತಾಲ್ಲೂಕು ಕಚೇರಿಯ ಗುಮಾಸ್ತರಾಗಿದ್ದರು. ಮನೆತುಂಬ

ಮಕ್ಕಳು. ಸಾಲದ್ದಕ್ಕೆ ಎರಡನೆಯ ಮದುವೆ. ಬಡತನಕ್ಕೆ ಹೇಳಿ ಮಾಡಿಸಿದ ಹಾಗಿದ್ದ ಸಂಸಾರ. ಮೊದಲನೆಯ ಹೆಂಡತಿಯ ಮಕ್ಕಳಲ್ಲಿ ಮೊದಲನೆಯವನೇ ಸಂಜೀವ. ಅಪ್ಪನಿಗೆ ಎರಡನೆಯ ಮದುವೆಯಾದಾಗಿನಿಂದ ಅವನಿಗೂ ಮಲ ತಾಯಿಗೂ ಎಣ್ಣೆ ಸೀಗೇಕಾಯಿ ಆಗಿತ್ತು. ತಂದೆಯ ಬಡತನಕ್ಕಿಂತ ಮಲ ತಾಯಿಯ ಉಪಟಳ ಸಹಿಸುವುದಕ್ಕೆ ಕಷ್ಟವಾಗಿತ್ತು.

ಸಂಜೀವನಿಗೆ ಮೊದಲಿನಿಂದಲೂ ಸಂಗೀತದ ಖಯಾಲಿ. ಆದರೆ ಅದಕ್ಕೆ ಸರಿಯಾದ ಅವಕಾಶವಿಲ್ಲದೆ ಆ ಪ್ರವೃತ್ತಿ ನಾಟಕದ ಕಡೆ ತಿರುಗಿತ್ತು. ಅದಕ್ಕೂ ಯಥಾಶಕ್ತಿ ಮಣ್ಣುಹೊತ್ತು ಅಪ್ಪನ ಕೈಯಲ್ಲಿ ಒದೆ ತಿಂದಿದ್ದ. ಸರ್ಕೀಟ್ ನಾಟಕದ ಕಂಪೆನಿಗಳು ಮಾಗಡಿಯ ಸುತ್ತಮುತ್ತ ಎಲ್ಲಿ ಬಂದು ತಳವೂರಿದರೂ ಅಲ್ಲಿ ಸಂಜೀವ ಸಿದ್ಧನಾಗುತ್ತಿದ್ದ. ನಾಟಕದ ಕಂಪೆನಿಗಳಿಗೆ ಬೇಕಾದ ಅಜೂಜುವಾರಿ ಮಾಡುವುದು, ಏನಾದರೂ ಚಿಲ್ಲರೆ ಪಾರ್ಟುಗಳು ಖಾಲಿಬಿದ್ದರೆ ಮಾಡುವುದು - ಸಂಜೀವನಿಗೆ ತುಂಬ ಪ್ರಿಯವಾದ ಕೆಲಸವಾಗಿತ್ತು. ಜೊತೆಗೆ, ಮಾಗಡಿಯಲ್ಲೇ ಹುಟ್ಟಿ ಬೆಳೆದು ಒಂದೇ ವರ್ಷದಲ್ಲಿ ಉಜಾಡೆದ್ದು ಹೋಗಿದ್ದ 'ಮನೋರಮಾ ನಾಟಕ ಸಭೆ'ಯಲ್ಲೂ ಅವನ ಕೈವಾಡವಿಲ್ಲದೆ ಇರಲಿಲ್ಲ. ಅಪ್ಪನ ಕಣ್ಣು ತಪ್ಪಿಸಿ, ಸ್ಕೂಲಿಗೆ ಚಕ್ಕರ್ ಹಾಕಿ ನಾಟಕಕ್ಕೆ ಹಾತೊರೆಯುತ್ತಿದ್ದ ಸಂಜೀವನಿಗೆ ಒಂದು ದಿನ ಗ್ರಹಚಾರ ಕ್ರೂರವಾಯಿತು.

ಜಾತ್ರೆಯ ಸಮಯಕ್ಕೆ ಊರಿಗೆ ಬಂದು ಕ್ಯಾಂಪು ಮಾಡಿ 'ಗುಲೇ ಬಕಾವಲಿ' ನಾಟಕ ಆಡುವುದಾಗಿ ನೋಟೀಸ್ ಹಂಚಿದ್ದ 'ರಾಧಾರಮಣ ನಾಟಕ ಕಂಪೆನಿ'ಯೊಡನೆ ಸಂಜೀವ ಸಂಬಂಧ ಬೆಳಸಿದ್ದಾನೆಂದು ರಂಗಪ್ಪ ನವರಿಗೆ ಹೇಗೋ ತಿಳಿಯಿತು. 'ಗುಲೇಬಕಾವಲಿ'ಯಲ್ಲಿ ಅವನದೊಂದು ಪಾರ್ಟು ಇದೆಯೆಂದು ಕೇಳಿ ಆ ರಾತ್ರಿ ರಂಗಪ್ಪನವರು ನಾಟಕ ನೋಡಲು ಹೋಗಿ ಕುಳಿತರು.

ಸೂತ್ರಧಾರನ ಪಾರ್ಟು ಹಾಕಿಕೊಂಡು ಠೀವಿಯಿಂದ ರಂಗದ ಮೇಲೆ ಅವತರಿಸಿದ ಸಂಜೀವನಿಗೆ ಕುರ್ಚಿಗುಂಡಿಯಲ್ಲಿ ಕುಳಿತು ಕಣ್ಣು ಕೆಕ್ಕರಿಸಿಕೊಂಡು ತನ್ನ ಕಡೆಗೇ ನೋಡುತ್ತಿದ್ದ ತಂದೆಯನ್ನು ಕಂಡು ಜಂಘಾಬಲವೇ ಬಿದ್ದು ಹೋಯಿತು. ಮಧ್ಯಾಹ್ನವೆಲ್ಲಾ ಉರುಹೊಡೆದಿದ್ದ ವೃತ್ತವೇ ಮರೆತುಹೋಗಿ ತಬ್ಬಿಬ್ಬಾದ. ವಾದ್ಯಗಾರರು ಎಷ್ಟು ಎತ್ತಿಕೊಡುತ್ತಿದ್ದರೂ ಗಂಟಲಿನಿಂದ

ಸ್ವರವೇ ಹೊರಡಲಿಲ್ಲ. ಪಕ್ಕದಿಂದ ಯಾರೋ ಧೈರ್ಯಕೊಟ್ಟು ವೃತ್ತದ ಸಾಹಿತ್ಯವನ್ನು ಜ್ಞಾಪಿಸಿದ ಮೇಲೆ, ಹೇಗೋ ಆಯಿತು ಎಂದು ಮುಗಿಸಿ ಒಳಗೆ ಓಡಿದ. ಬಣ್ಣ ಅಳಿಸಿಕೊಂಡವನೇ ಯಾರಿಗೂ ಹೇಳದೆ ಕೇಳದೆ ದುರ್ದಾನ ತೆಗೆದುಕೊಂಡವನ ಹಾಗೆ ಮನೆಯ ಕಡೆ ಹೊರಟುಬಿಟ್ಟ.

ರಂಗಪ್ಪನವರೂ ಅಷ್ಟು ಹೊತ್ತಿಗೆ ಮನೆಗೆ ಬಂದಿದ್ದರು. ಕಳ್ಳನ ಹಾಗೆ ಮನೆ ಪ್ರವೇಶಿಸುತ್ತಿರುವ ಮಗನನ್ನು ದುರದುರನೆ ನೋಡಿ,

"ಹಾಳಾಗಿ ಹೋಗುತೀಯಲ್ಲೋ, ಸಂಜೀವ?"

ಸಂಜೀವ ಉತ್ತರ ಕೊಡದೆ ಸುಮ್ಮನೆ ನಿಂತಿದ್ದ. ರಂಗಪ್ಪನವರಿಗೆ ರೇಗಿತು.

"ದೆವ್ವ ಬಡಿದ ಹಾಗೆ ನಿಂತಿದ್ದಿಯಲ್ಲೋ. ಈ ಹಾಳು ನಾಟಕಕ್ಕೆ ಬಡ ಕೊಳ್ಳಬೇಡವೋ ಅಂದರೆ ಕೇಳೊಲ್ಲವಲ್ಲೋ."

"ಇಲ್ಲಪ್ಪಾ"

ಎಂದು ಸಂಜೀವ ಕಳ್ಳಧ್ವನಿಯಲ್ಲಿ ಉತ್ತರಕೊಟ್ಟ.

"ಏನಿಲ್ಲ ನಿನ್ನ ಪಿಂಡ. ಇಲ್ಲ ಇಲ್ಲ ಅಂತಾನೇ ಇರೋದು; ಪುನಃ ಹೋಗುತಾನೇ ಇರೋದು. ಇವೊತ್ತು ಬಣ್ಣ ಬಳಿದುಕೊಂಡು ಸಾಯುತಾ ಇದ್ದೋರು ಯಾರೋ?"

"ನಾನು ಹೋಗಿರಲಿಲ್ಲಪ್ಪಾ."

ಈ ಸುಳ್ಳು ಕೇಳಿ ರಂಗಪ್ಪನವರ ಕೋಪ ಮೇರೆ ಮೀರಿತು.

"ನನ್ನ ಎದುರಿಗೇ ಸುಳ್ಳು ಹೇಳುತೀಯಾ, ಭಡವಾ?"

ಎಂದು ಮೂಲೆಯಲ್ಲಿದ್ದ ಮುರುಕು ಛತ್ರಿಯನ್ನೇ ಎತ್ತಿಕೊಂಡು ಮುಖ ಮೂತಿ ನೋಡದೆ ಚೆನ್ನಾಗಿ ಹೊಡೆದು ಹೊರಗೆ ಹಾಕಿದ್ದರು. ಮೈಮೇಲಿನ ಬಾಸುಂಡೆಗಳು ಆರುವುದಕ್ಕೇ ಒಂದು ವಾರವಾಗಿತ್ತು. ಏಟು ತಿಂದಮೇಲೆ ರಾತ್ರಿಯ ಹೊತ್ತು ನಿದ್ದೆಯ ಕನವರಿಕೆಯಲ್ಲೂ ಅದರ ಬಿಸಿ ಮರೆಯದೆ ಬೆಚ್ಚುತ್ತಿದ್ದ ಸಂಜೀವನಿಗೆ ನಾಟಕದ ಹುಚ್ಚು ಬಿಟ್ಟುಹೋಗಿತ್ತು.

ಮಗ ಏನೋ ದಾರಿಗೆ ಬಂದನೆಂದುಕೊಳ್ಳುವಷ್ಟರಲ್ಲಿ ಅವನಲ್ಲಿ ಆಗಿದ್ದ ಬದಲಾವಣೆಯನ್ನು ಕಂಡು ರಂಗಪ್ಪನವರು ಚಕಿತರಾದರು. ಸಂಜೀವನಿಗೆ ಓದೂ ಬೇಕಾಗಿರಲಿಲ್ಲ; ನಾಟಕವೂ ಬೇಕಾಗಿರಲಿಲ್ಲ. ಅವನಿಗೆ ಬೇಕಾಗಿದ್ದುದು

ಗುಡಿ ಶ್ರೀನಿವಾಸಯ್ಯಂಗಾರಿಯ ಸಹವಾಸ. ಊರಿಗೆಲ್ಲಾ ತಾನೇ ದೊಡ್ಡ ವಿದ್ವಾಂಸನೆಂದು ಬೀಗುತ್ತಿದ್ದ ಶ್ರೀನಿವಾಸಯ್ಯಂಗಾರಿ ಸಣ್ಣದೊಂದು ಶಿಷ್ಯ ಪರಿವಾರವನ್ನು ಕಟ್ಟಿಕೊಂಡು ತಿರುಗುತ್ತಿದ್ದ. ಸಂಗೀತಕ್ಕೆ ಸಂಬಂಧಿಸಿದ ಯಾವ ವಿಚಾರವೇ ಬಂದರೂ ಅದರ ಮೇಲೆ ಮಾತಾಡಲು ತಾನೊಬ್ಬನೇ ಅಧಿಕಾರಿ ಎಂಬ ಠೇಂಕಾರ ಅಯ್ಯಂಗಾರಿಯಲ್ಲಿ ಮನೆಮಾಡಿತ್ತು. ವಿದ್ಯೆ ಅಲ್ಪ ವಾಗಿದ್ದರೂ ಗರ್ವದಲ್ಲಿ ನಿಸ್ಸೀಮನಾಗಿದ್ದ ಅವನಿಂದ ತಾನೇನೋ ಸಂಗೀತ ಕಲಿಯಬಹುದೆಂಬ ಭ್ರಾಂತಿಯಿಂದ ಸಂಜೀವ ಅವನ ಬೆನ್ನಿಗೆ ಬಿದ್ದು ತಿರುಗು ತ್ತಿದ್ದ. ಆದರೆ ಅಯ್ಯಂಗಾರಿಯಿಂದ ಸಂಗೀತ ಕಲಿಯುವುದರ ಬದಲು ಅವನ ಚಾಕರಿ ಮಾಡಿ ಮಾಡಿ ಸಂಜೀವನಿಗೆ ಸಾಕಾಗಿತ್ತು

ಅವನಿಗೆ ಸಂಗೀತದ ಮೋಹ ಬಲವಾಯಿತು.

ಇವರಿಬ್ಬರ ಮೈತ್ರಿ ನೋಡಿ ರಂಗಪ್ಪನವರ ಕೋಪ ಬಲವಾಯಿತು.

ಮನೆಯಲ್ಲಿ ಮಲತಾಯಿ ಈ ಕೋಪದ ಬೆಂಕಿಗೆ ಆಜ್ಯ ಹೊಯ್ಯು ತ್ತಿದ್ದಳು.

ದಿನ ಬೆಳಗೆದ್ದರೆ ಮನೆಯಲ್ಲಿ ರಗಳೆಯಾಗದೆ ಇರುತ್ತಿರಲಿಲ್ಲ.

ಮಾಗಡಿಯ ಈ ಅರ್ಥವಿಲ್ಲದ ಬಾಳು ಬೇಸರವನ್ನುಂಟುಮಾಡಿತ್ತು. ವಯಸ್ಸಿಗೆ ಬಂದಿದ್ದ ಸಂಜೀವ ಮುಂದೆ ತನ್ನ ದಾರಿ ತಾನು ಹುಡುಕಿಕೊಳ್ಳದೆ ಇದ್ದರೆ ಬದುಕುವುದಕ್ಕೆ ಸಾಧ್ಯವಿಲ್ಲವೆಂದು ಎಣಿಸಿ ಹೇಳದೆ ಕೇಳದೆ ಮೈಸೂರಿಗೆ ಹೊರಟುಬಿಟ್ಟ.

ಮೈಸೂರಲ್ಲಿ ಗೊತ್ತುಗುರಿಯಿಲ್ಲದೆ ಅಲೆಯುತ್ತಿದ್ದ ಸಂಜೀವ 'ಶಾಕುಂತಲ ನಾಟಕ ಸಭೆ'ಯವರು ಆಡುತ್ತಿದ್ದ ನಾಟಕಗಳಲ್ಲಿ ಚಿಕ್ಕರಾಮರಾಯರು ಮಾಡುತ್ತಿದ್ದ ರಾಜಾಪಾರ್ಟುಗಳನ್ನು ನೋಡಿ ಮೆಚ್ಚಿಕೊಂಡು ಹೇಗಾದರೂ ಮಾಡಿ ಅವರ ಶಿಷ್ಯನಾಗಬೇಕೆಂದು ಸಂಕಲ್ಪಿಸಿಬಿಟ್ಟ.

ರಾಯರ ಶಿಷ್ಯತ್ವ ಸಂಜೀವ ಭಾವಿಸಿದ್ದುದಕ್ಕಿಂತಲೂ ಸುಲಭವಾಗಿ ಅವನಿಗೆ ಲಭಿಸಿತ್ತು.

ಒಂದು ದಿನ 'ಬಭ್ರುವಾಹನ' ನಾಟಕ ಮುಗಿಸಿಕೊಂಡು ರಾಮರಾಯರು ಮನೆಗೆ ಹಿಂತಿರುಗುತ್ತಿದ್ದರು. ಟೌನ್‌ಹಾಲಿಗೂ ಅವರ ಮನೆಗೂ ಒಂದೇ ಫರ್ಲಾಂಗ್ ದೂರ. ಬೀದಿಯಲ್ಲಿ ಹೋಗುವಾಗಲೂ ಕೂಡ ಏನಾದರೂ

ಕುರುಕಿಕೊಂಡು ಹೋಗುವುದು ರಾಯರ ಅಭ್ಯಾಸವಾಗಿತ್ತು. ಆಗತಾನೇ ತಾವು ಮಾಡಿದ ಬಭ್ರುವಾಹನನ ಪಾರ್ಟಿನ ಕಂದಗಳೂ ಮಟ್ಟಗಳೂ ತಲೆಯಲ್ಲಿ ಇನ್ನೂ ಸುತ್ತುತ್ತಿದ್ದುವು.

ಅವರು ಆ ಧ್ಯಾನವಲ್ಲಿ ಹೆಜ್ಜೆ ಹಾಕುತ್ತಿದ್ದಾಗಲೇ ಹಿಂದಿನಿಂದ ಯಾರೋ ಕೂಗಿದ ಹಾಗಾಯಿತು.

" ಸಾರ್."

ರಾಯರು ನಿಂತು ತಿರುಗಿ ನೋಡಿದರು. ಹದಿನೆಂಟು ಇಪ್ಪತ್ತು ವರ್ಷದ ಒಬ್ಬ ತರುಣ ಹಿಂಬಾಲಿಸಿದ್ದ.

" ಯಾರಪ್ಪಾ, ಏನು ಬೇಕು ?"

ಹುಡುಗ ಮಾತಾಡಲಿಲ್ಲ. ಎರಡು ಕೈಗಳನ್ನೂ ಜೋಡಿಸಿದ.

" ಯಾರಪ್ಪಾ, ನನ್ನಿಂದೇನಾದರೂ ಆಗಬೇಕಾಗಿತ್ತೆ ?"

" ತಾವು ಮಾತುಕೊಟ್ಟರೆ ಹೇಳುತ್ತೇನೆ."

ಬಡ ಹುಡುಗ ಏನಾದರೂ ದುಡ್ಡು ಕೇಳಲು ಪೀಠಿಕೆ ಹಾಕುತ್ತಿರಬಹು ದೆಂದು ರಾಯರು ಭಾವಿಸಿದರು.

" ಇರಲಿ ಹೇಳಪ್ಪಾ, ಸಂಕೋಚಪಟ್ಟುಕೊಳ್ಳಬೇಡ."

" ನನ್ನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳಬೇಕು."

ರಾಯರು ಬೆರಗಾದರು. ಮಾತಾಡದೆ ಹಾಗೆಯೇ ಹುಡುಗನನ್ನು ದಿಟ್ಟಿಸಿ ನೋಡುತ್ತಾ ನಿಂತರು.

" ಈಗತಾನೇ ನಾಟಕದಲ್ಲಿ ತಮ್ಮ ಪಾರ್ಟು ನೋಡಿಬಂದೆ ಸಾರ್. ಬಹಳ ಚೆನ್ನಾಗಿ ಮಾಡುತೀರಿ ಸಾರ್. ನನಗೆ ಸಂಗೀತ ಕಲಿತುಕೊಳ್ಳಬೇಕು ಅಂತ ತುಂಬ ಇಷ್ಟ ಸಾರ್. ತಾವು ದೊಡ್ಡ ಮನಸ್ಸು ಮಾಡಬೇಕು."

ರಾಯರು ದೊಡ್ಡದಾಗಿ ನಕ್ಕರು.

" ನಾನು ಸಂಗೀತಗಾರನಲ್ಲವಲ್ಲಯ್ಯಾ, ಬರೀ ನಾಟಕದೋನು."

" ನನಗೆಲ್ಲಾ ಗೊತ್ತು ಸಾರ್, ನೀವು ದೊಡ್ಡ ಸಂಗೀತಗಾರರು ಅಂತ. ನೀವೇನೂ ಬಚ್ಚಿಟ್ಟುಕೊಳ್ಳುವಹಾಗಿಲ್ಲ."

ಹುಡುಗನ ದಾಷ್ಟಿಕಕ್ಕೆ ರಾಯರು ವಿಸ್ಮಿತರಾದರು.

" ಬೆಳಗ್ಗೆ ಮನೆ ಹತ್ತರ ಬಾ. ಮಾತಾಡೋಣ. ನಿನಗೆ ನಮ್ಮ ಮನೆ ಗೊತ್ತೋ ?"

" ಗೊತ್ತು ಸಾರ್ "

ಎಂದು ಹೇಳಿ ಸಂಜೀವ ತುಂಬು ಸಂತೋಷದಿಂದ ಹೊರಟಿದ್ದ.

ದೇಹಿ ಎಂದವರಿಗೆ ನಾಸ್ತಿ ಎನ್ನಲರಿಯದಿದ್ದ ಚಿಕ್ಕರಾಮರಾಯರು ಸಂಜೀವನ ಕುಲಗೋತ್ರ ವಿಚಾರಿಸಿ ಮಾರನೆಯ ದಿನವೇ ಅವನನ್ನು ತಮ್ಮ ಶಿಷ್ಯನನ್ನಾಗಿ ಪರಿಗ್ರಹಿಸಿದ್ದರು. ಅವನಿಗೆ ಅಕ್ಕರೆಯಿಂದ ಪಾಠ ಹೇಳಿ ಬಹು ಬೇಗ ಮುಂದಕ್ಕೆ ತಂದಿದ್ದರು. ರಾಯರ ಕಚೇರಿಗಳಲ್ಲಿ ಅವರ ಹಿಂದೆ ಕುಳಿತು ಹಾಡುತ್ತಿದ್ದವರಲ್ಲಿ ಸಂಜೀವನ ಹೆಸರು ಮುಂದೆ ಬಂದಿತ್ತು. ಎಲೆಮರೆಯ ಕಾಯಿಯಂತೆ ಗುರುವಿನ ಕೃಪಾಶ್ರಯದಲ್ಲಿ ಬೆಳೆಯುತ್ತಿದ್ದ ಸಂಜೀವಯ್ಯ ನಾಲ್ಕು ಜನಕ್ಕೆ ಪಾಠ ಹೇಳಿಕೊಂಡು ಸ್ವತಂತ್ರವಾಗಿ ಜೀವನ ಮಾಡಲು ಬಹಳ ಕಾಲ ಬೇಕಾಗಲಿಲ್ಲ.

ಅಂತೆಯೆ ಅವನಿಗೆ, ಗುರುಗಳು ತನ್ನ ಬಳಿಗೆ ಮಧುಸೂದನನನ್ನು ಪಾಠಕ್ಕೆ ಕಳುಹಿಸಿದಾಗ, ತನ್ನ ಹಿಂದಿನ ದಿನಗಳ ನೆನಪಾಯಿತು. ಗುರುಗಳು ತನ್ನ ವಿಷಯದಲ್ಲಿ ತೋರಿಸಿದ ಔದಾರ್ಯವನ್ನೇ ಈ ಬಡಹುಡುಗನ ವಿಷಯ ದಲ್ಲಿ ತಾನೂ ತೋರಿ ಅವನನ್ನು ಮುಂದಕ್ಕೆ ತಂದರೆ ಅದೇ ಗುರುವಿಗೆ ಸಲ್ಲಿಸ ಬಹುದಾದ ಯೋಗ್ಯ ದಕ್ಷಿಣೆ ಎಂದು ಅವನಿಗೆ ತೋರಿತು.

## ೮

ಉಗಾದಿ ಹಬ್ಬ ಬಂದಿತು.

ವೆಂಕಮ್ಮನವರ ಮನಸ್ಸು ತುಂಬ ಖಿನ್ನವಾಯಿತು. ರಮಣಾಚಾರ್ಯರು ಕಾಲವಾದ ಮೇಲೆ ಮಗನನ್ನು ಕಟ್ಟಿಕೊಂಡು ಆಕೆ ಇಂಥ ಎರಡು ಮೂರು ಉಗಾದಿಗಳನ್ನು ಕಳೆದಿದ್ದರು. ತಮ್ಮ ಭಾಗಕ್ಕೆ ಉಗಾದಿ ಒಂದು ಹಬ್ಬವೇ ಎಂದು ಅವರಿಗನ್ನಿಸಿತು. ಯಜಮಾನರಿದ್ದಾಗ ಹಬ್ಬದ ದಿವಸ ಬೆಳಗ್ಗೆ ಎದ್ದು ಸ್ನಾನ, ಆಹ್ನೀಕ, ದೇವರ ಪೂಜೆಗಳನ್ನು ಮುಗಿಸಿಕೊಂಡು ತಮ್ಮ ಪರಿಚಯದ ನಾಲ್ಕಾರು ಗೃಹಸ್ಥರ ಮನೆಗಳಿಗೆ ಭೇಟಿ ಕೊಟ್ಟು ಬರುತ್ತಿದ್ದುದು ಅವರ ಸಂಪ್ರದಾಯವಾಗಿತ್ತು. ಹೋದಕಡೆಗಳಲ್ಲೆಲ್ಲಾ ಜನ ಆಚಾರ್ಯರನ್ನು ಗೌರವ ದಿಂದ ಬರಮಾಡಿಕೊಂಡು ಅವರ ಆಶೀರ್ವಾದ ಪಡೆದು ಫಲ ತಾಂಬೂಲ ದಕ್ಷಿಣೆ ಕೊಟ್ಟು ಕಳಿಸುತ್ತಿದ್ದರು. ಅವೊತ್ತು ಆಚಾರ್ಯರು ಬೇರೆ ಎಲ್ಲಿಗೂ ಊಟಕ್ಕೆ ಹೋಗುತ್ತಿರಲಿಲ್ಲ. ವೆಂಕಮ್ಮ ಮನೆಯಲ್ಲೇ ಹಬ್ಬದ ಅಡುಗೆ ಮಾಡುತ್ತಿದ್ದರು. ಆಚಾರ್ಯರು ಹನ್ನೆರಡು ಘಂಟೆಯೊಳಗೆ ಮನೆಗೆ ಬಂದು ಮಡಿವುಟ್ಟು ಊಟ ಕ್ಕೇಳುತ್ತಿದ್ದರು. ವೆಂಕಮ್ಮ ತಂದೆ–ಮಗನಿಗೆ ಬಡಿಸಿ ತಾವೂ ಊಟಕ್ಕೆ ಕೂಡು ತ್ತಿದ್ದರು. ಅನುಕೂಲವಿದ್ದ ಸಂದರ್ಭದಲ್ಲಿ ಎಲ್ಲರಿಗೂ ಹೊಸಬಟ್ಟೆ ಬರುತ್ತಿತ್ತು. ಹಬ್ಬ ಮನಸ್ಸಿಗೆ ಎಷ್ಟೋ ನೆಮ್ಮದಿಯುಂಟುಮಾಡುತ್ತಿತ್ತು.

ವೆಂಕಮ್ಮನವರಿಗೆ ಪತಿಯೊಡನೆ ಕಳೆದ ಉಗಾದಿಗಳ ನೆನಪಾಗಿ ಕುತ್ತಿಗೆಯ ಸೆಲೆ ಬಿಗಿದು ಬಂದಿತು. ಆ ಸೌಭಾಗ್ಯವನ್ನೆಲ್ಲಾ ನೆನಸಿಕೊಂಡು ಅತ್ತರೆ

ಬರುವ ಭಾಗ್ಯವೇನು ಎಂದು ಅವರಿಗನ್ನಿಸಿತು. ಆದರೆ ಮನಸ್ಸು ಕೇಳದೆ ಹೇಗೆ ಮರೆಸಿದರೂ ತಿರುಗಿಕೊಂಡು ಅಲ್ಲಿಗೇ ಹೋಗುತ್ತಿತ್ತು. ವರ್ಷಾವಧಿ ಹಬ್ಬದ ದಿನ. ಮಗನ ತಲೆಯ ಮೇಲೆ ಒಂದು ಬಟ್ಟು ಎಣ್ಣೆಯಿಟ್ಟು ನೀರು ಹಾಕಿ, ಒಂದು ಪಾಯಸದ ಅಡುಗೆ ಮಾಡಿ ಬಡಿಸುವ ಯೋಗ್ಯತೆಯೂ ಇಲ್ಲವಾಗಿತ್ತು. ಮಧುಸೂದನನಿಗೆ ಮೈಮೇಲಿದ್ದ ಒಂದು ಹರಕು ಪರಟು ಬಿಟ್ಟರೆ ಬೇರೆ ಇರಲಿಲ್ಲ. ವೆಂಕಮ್ಮನವರ ಭಾಗಕ್ಕೆ ತುಂಡು ಸೇರಿಸಿ ಹೊಲಿದುಕೊಂಡ ಕೋರಿಯೇ ಪೀತಾಂಬರವಾಗಿತ್ತು. ಕಂಡವರ ಮನೆಯ ಬಾಗಿಲು ಹತ್ತಿ ತ್ರಾಹಿ ತ್ರಾಹಿ ಎಂದು ಹಾಳು ಹೊಟ್ಟೆ ತುಂಬಿಸಿಕೊಳ್ಳಬೇಕಾದ ಗತಿ ಕೊಟ್ಟ ದೇವರ ಮೇಲೆ ಅವರಿಗೆ ಎಲ್ಲೂ ಇಲ್ಲದ ಸಿಟ್ಟು ಬಂದಿತು. ಇಷ್ಟೆಲ್ಲ ಕಷ್ಟವನ್ನು ಕೊಟ್ಟು ಅವನು ಹೀಗೇಕೆ ಪರೀಕ್ಷೆ ಮಾಡುತ್ತಿರುವನೋ, ಒಂದೇ ಸಲ ಈ ಹಾಳು ಬಾಳನ್ನು ಮುಗಿಸಿಬಿಡಬಾರದೆ ಎಂದು ಹಲುಬಿದರು. ಉಗಾದಿ ಅವರಿಗೆ ಎಲ್ಲೂ ಇಲ್ಲದ ಸಂಕಟವನ್ನು ತಂದು ಹಳೆಯ ದುಃಖವನ್ನೆಲ್ಲ ಮರು ಕೊಳಿಸಿತ್ತು.

ಅವರ ಮನಸ್ಸು ಖಿನ್ನವಾಗುವುದಕ್ಕೆ ಇನ್ನೂ ಒಂದು ಕಾರಣವಿತ್ತು.

ಚಿಕ್ಕತನವಲ್ಲಿ ತಾಯಿಸತ್ತ ಹುಡುಗಿಯನ್ನು ಸಾಕಿ ದೊಡ್ಡವಳನ್ನಾಗಿ ಮಾಡಿ, ಅವಳಿಗೆ ಒಂದು ಮದುವೆ ಎಂದು ಮಾಡಿ ಗಂಡನ ಮನೆಯಲ್ಲಿ ನೆಲೆ ನಿಲ್ಲಿಸಲು ನಾಗೇಶರಾಯರು ಪಟ್ಟಕಷ್ಟ ಅಷ್ಟಿಷ್ಟಲ್ಲ. ಬೆಳೆದ ಹುಡುಗಿಯನ್ನು ಮನೆಯಲ್ಲಿಟ್ಟುಕೊಂಡಿರಲಾರದೆ ಅವರು ಊರೂರು ಕೇರಿಕೇರಿ ಅಲೆದಿದ್ದರು. ತಮಗಾಗಿ ಹಗಲಿರುಳೂ ಒದ್ದುಕೊಳ್ಳುತ್ತಿದ್ದ ಈ ಜೀವವನ್ನು ಕಂಡು ಹೆಣ್ಣಿ ಕರುಳು ಕಿತ್ತುಬರುತ್ತಿತ್ತು. ತಾಯಿಯಿಲ್ಲದಿದ್ದ ಜೀವಕ್ಕೆ ತಂದೆಯೇ ತಾಯಿ ಯಾಗಿ ಲಾಲನೆಪಾಲನೆ ಮಾಡಿದ್ದರು. ವೆಂಕಮ್ಮನೇ ಅವರಿಗೆ ಹೆಣ್ಣು, ಗಂಡು ಸಕಲ ಸರ್ವಸ್ವವೂ ಆಗಿದ್ದರು. ಆಕೆ ಮದುವೆಯಾಗಿ ಗಂಡನ ಮನೆಗೆ ಬಂದ ಮೇಲೆ ತಂದೆ ಒಬ್ಬಂಟಿಗರಾಗಿ ಉಳಿದರು. ಅವರ ಯೋಗಕ್ಷೇಮವನ್ನು ನೋಡುವವರು ಇಲ್ಲವಾಗಿತ್ತು.

"ಎರಡನೆಯ ಮದುವೆ ಮಾಡಿಕೊಳ್ಳಿ. ಮನೆಗೊಂದು ಗೃಹಿಣಿ ಎಂಬ ವಸ್ತು ಬೇಡವೆ?"

ಎಂದು ಯಾರಾದರೂ ಹೇಳಿದರೆ,

" ಯಾವ ಸೌಭಾಗ್ಯಕ್ಕೆ ಮಾಡಿಕೊಳ್ಳಲಿ? ನಾನೊಬ್ಬ ಹೇಗೋ ಇದ್ದರೆ ಆಗಿಹೋಯಿತು. ಆ ಹೆಣ್ಣು ಒಂದು ಸರಿಯಾದ ನೆಲೆ ಸೇರಿತಲ್ಲಾ ಅಷ್ಟೇ ಸಾಕು "

ಎಂದು ನುಡಿದು ನಾಗೇಶರಾಯರು ಸುಮ್ಮನಾಗುತ್ತಿದ್ದರು.

ಆದರೆ ಪರಿಸ್ಥಿತಿ ಅವರು ಬಗೆದಷ್ಟು ಸುಲಭವಾಗಿರಲಿಲ್ಲ. ನೀನೇ ಎನ್ನುವರಿಲ್ಲದೆ ಒಂಟಿಯಾದ ಬಾಳನ್ನು ನೂಕುತ್ತ ಕಷ್ಟಕಾರ್ಪಣ್ಯಗಳಲ್ಲಿ ತೊಳಲುತ್ತಿದ್ದ ನಾಗೇಶರಾಯರು ಒಮ್ಮೆ ಕಾಹಿಲೆ ಬಿದ್ದರು. ಅಕ್ಕಪಕ್ಕದ ಮನೆಯವರು ಗಂಜಿ ಹೊಯ್ಯಬೇಕಾದ ಪ್ರಸಂಗ ಬಂದಿತು. ಮನೆಯಲ್ಲಿ ಹೆಣ್ಣು ದಿಕ್ಕಿಲ್ಲದಿದ್ದರೆ ಆಗುವ ಪಡಿಪಾಟಲಿನ ಪರಿಚಯ ಆಗ ಆತನಿಗಾಯಿತು. ಯಾವ ಸುಖಕ್ಕಿಲ್ಲದಿದ್ದರೂ ಯೋಗಕ್ಷೇಮ ನೋಡುವುದಕ್ಕಾದರೂ ಮನೆಯಲ್ಲಿ ಮಡದಿ ಎನ್ನುವ ಒಂದು ವಸ್ತುವಿರಬೇಕೆಂಬ ತಥ್ಯ ಅವರಿಗೆ ಆಗ ಗೋಚರವಾಯಿತು. ಆ ಬಡವನ ಕೈಹಿಡಿಯುವುದಕ್ಕೂ ಒಂದು ಹೆಣ್ಣು ಸಿದ್ಧವಾಗಿತ್ತು.

ಮಗಳ ಮದುವೆಯಾದ ಒಂದು ವರ್ಷಕ್ಕೆ ನಿರ್ವಾಹವಿಲ್ಲದೆ ನಾಗೇಶ ರಾಯರು ಎರಡನೆಯ ಮದುವೆ ಮಾಡಿಕೊಂಡಿದ್ದರು. ಆದರೆ ಮನೆಗೆ ಬಂದ ಹೆಣ್ಣು ಗಂಡನ ಸುಖದುಃಖಗಳನ್ನಾಗಲಿ ಕಷ್ಟ ಕಾರ್ಪಣ್ಯಗಳನ್ನಾಗಲಿ ಗಮನಿಸಿ ಸಿರಲಿಲ್ಲ. ಅವಳ ದೃಷ್ಟಿ ಹೆಣ್ಣುತನದ ತನ್ನ ಬಯಕೆ ಭರವಸೆಗಳನ್ನು ತೀರಿಸಿ ಕೊಳ್ಳುವುದರ ಕಡೆಗೇ ಇತ್ತು. ಆದರೆ ಜೀವನದ ಸಂಜೆಯಲ್ಲಿದ್ದ ನಾಗೇಶ ರಾಯರಿಗೆ ಹೆಂಡತಿಯ ಹುಚ್ಚು ಕುಣಿತಕ್ಕೆ ಕುಣಿಯುವ ಉತ್ಸಾಹವಾಗಲಿ, ಅವಳ ಒಡವೆವಸ್ತುಗಳ ಚಪಲವನ್ನು ತೀರಿಸುವ ಅನುಕೂಲವಾಗಲಿ ಇರಲಿಲ್ಲ. ತಾವು ಮದುವೆಯಾದದ್ದು ಮನೆಗೆ ಮಂಗಳಕಾರಿಣಿಯಾದ ಮಡದಿಯನ್ನಲ್ಲ, ಯಾವ ವಿಧದಲ್ಲೂ ತಣಿಸಲಾಗದ ರಕ್ಕಸಿಯನ್ನು ಎಂಬ ಅನುಭವ ಆಗಲು ಬಹುಕಾಲ ಬೇಕಾಗಲಿಲ್ಲ. ಹೆಂಡತಿಯ ಸ್ವಭಾವ ಅವರಿಗೆ ಹುಚ್ಚು ಹಿಡಿಸುವಂತಿತ್ತು. ಈ ವಯಸ್ಸಿನಲ್ಲಿ ಎರಡನೆಯ ಮದುವೆಯಾಗಿ ಅವಿವೇಕದ ಕೆಲಸಮಾಡಿಕೊಂಡೆನಲ್ಲಾ ಎಂದು ಅವರು ಪರಿತಪಿಸಿದರು.

ಮಗಳನ್ನು ಹೆರಿಗೆಗೆ ಕರೆಸಿದಾಗ ಆದ ರಾದ್ಧಾಂತ ಅಷ್ಟಿಷ್ಟಲ್ಲ. ವೆಂಕಮ್ಮ ಬಾಣಂತನಕ್ಕೆ ಬರುವುದು ಕಮಲಮ್ಮನಿಗೆ ಸುತರಾಂ ಇಷ್ಟವಿರಲಿಲ್ಲ. ಆದರೆ ನೋಡಿದವರಿಗೋಸ್ಕರವಾದರೂ ಮಗಳನ್ನು ಕರೆಸುವುದು ನಾಗೇಶರಾಯರಿಗೆ

ಅನಿವಾರ್ಯವಾಗಿತ್ತು. ಚಿಕ್ಕಮ್ಮ ಸದಾ ಮುಖದಲ್ಲಿ ಬೆಂಕಿಕಟ್ಟಿಕೊಂಡೇ ಇರುತ್ತಿದ್ದಳು. ತನಗಿರುವ ಅಲ್ಪಸ್ವಲ್ಪ ಸುಖಕ್ಕೂ ಮುಳ್ಳಾಗಲು ಮಲಮಗಳು ಬಂದಳಲ್ಲಾ ಎಂದು ಕುದಿದಳು. ಅವಳ ನೆರೆಯಲ್ಲಿ ಬಾಳಿ ಮೂರು ತಿಂಗಳ ಬಾಣಂತನ ಮುಗಿಸಿಕೊಳ್ಳುವ ಹೊತ್ತಿಗೆ ವೆಂಕಮ್ಮನಿಗೆ ಸಾಕುಸಾಕಾಗಿ ಹೋಗಿತ್ತು. ಬಾಣಂತನದ ಶಾಸ್ತ್ರ ಮುಗಿದು ಗಂಡನ ಮನೆಗೆ ಹಿಂದಿರುಗುವಾಗ ಆಕೆಯ ಮನಸ್ಸಿಗೆ ಎಷ್ಟೋ ಸಮಾಧಾನವಾಗಿತ್ತು.

ಮಲತಾಯಿಯಿಂದ ತಂದೆಗೆ ಸುಖವಿರಲಿಲ್ಲವೆಂದು ವೆಂಕಮ್ಮನವರಿಗೆ ಗೊತ್ತಿತ್ತು. ತಂದೆ ಎರಡನೆಯ ಮದುವೆಯಾದದ್ದು ತಪ್ಪಾಯಿತೆ ಎಂದು ಯೋಚಿಸುತ್ತಿದ್ದರು. ಮನೆಗೆ ಬಂದ ಹೆಣ್ಣು ಹೀಗೆ ರಕ್ಕಸಿಯಾಗಬೇಕೆ ಎಂದು ಮರುಗುತ್ತಿದ್ದರು. ಆದರೆ ಕೈಮೀರಿದ ಕೆಲಸಕ್ಕೆ ಏನೂ ಮಾಡುವ ಹಾಗಿರಲಿಲ್ಲ. ತಂದೆಯ ಕಷ್ಟವನ್ನು ತಪ್ಪಿಸುವ ಶಕ್ತಿ ಅವರಿಗಿರಲಿಲ್ಲ.

ಆದರೆ ಅಂಥ ಕಷ್ಟದಿಂದ ವಿಧಿಯೇ ನಾಗೇಶರಾಯರನ್ನು ಪಾರುಮಾಡಿತ್ತು.

ಅಳಿಯ ಸತ್ತಾಗ ಮಗಳನ್ನು ನೋಡಿ ಮಾತಾಡಿಸಿಕೊಂಡು ಹೋಗಲು ನಾಗೇಶರಾಯರು ಹೆಂಡತಿಯನ್ನು ಕರೆದುಕೊಂಡು ಬಂದಿದ್ದರು. ಮಲಮಗಳು ತನ್ನ ಎದೆಯ ಮೇಲೆ ಬಂದು ಎಲ್ಲಿ ಬೀಳುತ್ತಾಳೋ ಎಂದು ಕಮಲಮ್ಮನಿಗೆ ಭಯವಾಗಿತ್ತು. ಅಂಥ ಸನ್ನಿವೇಶ ಬಂದೀತೆಂದು ಬಗೆದು, ಅದು ಬಂದರೆ ಹೇಗೆ ಎದುರಿಸಬೇಕೆಂಬುವಕ್ಕೆ ಅವಳು ಸಿದ್ಧವಾಗಿಯೇ ಇದ್ದಳು. ಆದರೆ ಮಲತಾಯಿಯ ಸ್ವಭಾವದ ರುಚಿಯನ್ನು ಮೂರು ತಿಂಗಳು ನೋಡಿದ್ದ ವೆಂಕಮ್ಮ ಕರೆದರೂ ತವರುಮನೆಗೆ ಹೋಗಬಾರದೆಂದು ಸಂಕಲ್ಪಿಸಿದ್ದರು. ಎಲ್ಲವೂ ಬರಿಯ ಬಾಯಿ ಉಪಚಾರವಲ್ಲೇ ಮುಕ್ತಾಯವಾಗಿತ್ತು. ತವರುಮನೆಯ ಸುಖಕ್ಕಿಂತ ಕೂಲಿಯ ಬಾಳು ಎಷ್ಟೋ ಸುಖಕರವಾಗಿತ್ತು. ನಾಗೇಶರಾಯರು ಹೆಂಡತಿಯೊಡನೆ ಊರಿಗೆ ಹಿಂದಿರುಗಿದ್ದರು.

ಅದೇ ಕೊನೆಯಾಯಿತು. ಆಮೇಲೆ ಅವರನ್ನು ನೋಡಲಿಲ್ಲ. ಕೆಲಕಾಲದಿಂದ ಕಾಯಿಲೆ ಮಲಗಿದ್ದ ನಾಗೇಶರಾಯರು ಕೇವಲ ಒಂದು ತಿಂಗಳ ಹಿಂದೆ ತೀರಿಕೊಂಡಿದ್ದರು. ಮನಸ್ಸಿನ ಚಿಂತೆ, ಹೆಂಡತಿಯ ಅನಾದರಣೆಗಳು ಕಾಹಿಲೆ ಬಲವಾಗಲು ಕುಮ್ಮಕ್ಕಾಗಿ ಅವರ ಜೀವವನ್ನು ಬಲಿ ತೆಗೆದುಕೊಂಡವು.

ತಂದೆಯ ಸಾವಿನೊಡನೆ ವೆಂಕಮ್ಮನವರಿಗೂ ತವರುಮನೆಯೊಡನಿದ್ದ ಅಲ್ಪ ಸ್ವಲ್ಪ ಸಂಬಂಧವೂ ಮುಗಿದುಹೋಗಿತ್ತು.

ಹಳೆಯ ನೋವುಗಳನ್ನೇ ನೆನೆನೆನೆದು ದುಃಖದಲ್ಲಿ ಮುಳಗಿದ್ದ ಮನಸ್ಸಿಗೆ ಬೀದಿಯ ಬಾಗಿಲು ಸದ್ದಾದದ್ದೂ ಗೋಚರವಾಗಲಿಲ್ಲ. ಬಲವಾಗಿ ಬಾಗಿಲು ತಟ್ಟಿದಾಗಲೇ ಎಚ್ಚರ.

" ವೆಂಕಮ್ಮನವರೇ."

" ಯಾರು ?"

ಎನ್ನುತ್ತ ಎದ್ದು ಹೋಗಿ ಬಾಗಿಲು ತೆಗೆದರು. ನರಸಕ್ಕ ಒಳಗೆ ಬಂದರು.

" ಇವತ್ತು ಅಲ್ಲೇ ಊಟಕ್ಕೆ ಬಂದುಬಿಡಿ ವೆಂಕಮ್ಮ. ಮಧೂ ಎಲ್ಲಿ?"

" ಪಾಠಕ್ಕೆ ಹೋಗಿದಾನಮ್ಮಾ, ನೀವೇಕೆ ತೊಂದರೆ ತೆಗೆದುಕೊಳ್ಳುತ್ತೀರಿ ?"

" ತೊಂದರೆಯೂ ಇಲ್ಲ, ಏನೂ ಇಲ್ಲ. ಇಬ್ಬರಿಗಾಗುವ ಅಡುಗೆ ನಾಲ್ಕು ಜನಕ್ಕಾಗತ್ತೆ. ವರ್ಷಾವಧಿ ಹಬ್ಬ. ನೀವು ಇಲ್ಲಿ ಒಣಗುತ್ತ ಕುಳಿತಿದ್ದರೆ ನನ್ನ ಗಂಟಲಲ್ಲಿ ಅನ್ನ ಇಳಿಯುವುದಿಲ್ಲ, ಕಣ್ರೀ."

" ನನ್ನ ಕಷ್ಟಕ್ಕೆ ನೀವು ಹೊಣೆಯೇ ನರಸಕ್ಕ ?"

" ನಿಮ್ಮ ಕಷ್ಟ ನಾನು ಕಿತ್ತುಕೊಳ್ಳಲಾರೆ, ವೆಂಕಮ್ಮ. ಆದರೆ ನೆರೆಹೊರೆ ಅಂತ ಇದ್ದ ಮೇಲೆ ಅಷ್ಟೂ ಆಗದೆ ಇದ್ದ ಮೇಲೆ ಏತಕ್ಕೆ ಹೇಳಿ ? ಯಜಮಾನರೂ ಹೇಳಿದರು. ನೀವು ಖಂಡಿತ ಖಾಲಿ ಮಾಡದೆ ಮಧೂನೂ ಕರೆದುಕೊಂಡು ಹನ್ನೆರಡು ಘಂಟೆಗೆ ಬಂದುಬಿಡಿ. ನನಗೂ ಮರೆತು ಹೋಯಿತು, ಹಾಳು ಕೆಲಸ. ಬೆಳಗ್ಗೆಯೇ ಹೇಳಿಕಳಿಸಿ ಆ ಗಂಡಿನ ತಲೆಯ ಮೇಲೆ ಒಂದು ಬಟ್ಟು ಎಣ್ಣೆ ಇಟ್ಟು ಒಂದು ಜೋಸಿ ನೀರಾದರೂ ಹಾಕಬಹುದಾಗಿತ್ತು."

ವೆಂಕಮ್ಮನವರ ಕಣ್ಣಲ್ಲಿ ನೀರು ತುಂಬಿತು.

" ನಮ್ಮಿಂದ ನಿಮಗೆ ಎಷ್ಟು ಕಷ್ಟವಮ್ಮಾ"

ಎಂದು ಸೆರಗಿನಿಂದ ಕಣ್ಣೊರಸಿಕೊಂಡರು. ನರಸಕ್ಕ ಸಂತೈಸುತ್ತ,

" ಹಬ್ಬದ ದಿನ ಕಣ್ಣಲ್ಲಿ ನೀರು ಹಾಕಿಕೊಳ್ಳಬೇಡಿ. ದೇವರು ಹೀಗೇ

ಇಟ್ಟಿರೊಲ್ಲ, ವೆಂಕಮ್ಮ. ಅವನು ಕಣ್ಣು ಬಿಟ್ಟು ನೋಡುವ ಕಾಲವೂ ಬರುತ್ತೆ. ಮಧೂನೂ ಏನೋ ಒಂದು ರೀತಿ ಮುಂದಕ್ಕೆ ಬರುತಾ ಇದಾನೆ."

"ಏನು ಬರತ್ತೋಮ್ಮ"

ಎಂದು ವೆಂಕಮ್ಮನವರು ನಿಟ್ಟುಸಿರುಬಿಟ್ಟರು.

ಅಷ್ಟುಹೊತ್ತಿಗೆ ಸರಿಯಾಗಿ ಮಧುಸೂದನನೂ ಬಂದ.

"ಬಾಪ್ಪ, ನಿನಗೆ ನೂರು ವರ್ಷ ಆಯುಸ್ಸು"

ಎಂದರು ನರಸಕ್ಕ.

"ಏಕೆ ನರಸತ್ತೆ ?"

"ನಿನ್ನ ಮಾತೇ ಆಡುತ್ತ ಇದ್ದೆವು. ಇವತ್ತು ಅಮ್ಮನ ಜೊತೇಲಿ ನಮ್ಮ ಮನೆಗೇ ಊಟಕ್ಕೆ ಬಂದುಬಿಡಪ್ಪ. ಅವರು ದೇವರ ಪೂಜೆ ಮಾಡುತಾ ಇದ್ದರು. ಅದಕ್ಕೆ ನಾನೇ ಹೇಳೋಣಾಂತ ಬಂದೆ."

ಮಧು ತಾಯಿಯ ಮುಖ ನೋಡಿದ. ಅವರು ಸುಮ್ಮನಿದ್ದರು. ಒಂದು ಗಳಿಗೆ ಬಿಟ್ಟು,

"ನನಗೆ ಇವತ್ತು ಒಂದು ಊಟ ಬಂದಿದೆಯಮ್ಮ – ದೊಡ್ಡ ಗುರುಗಳು ಅಲ್ಲೇ ಊಟಕ್ಕೆ ಬಂದುಬಿಡು ಅಂತ ಹೇಳಿದಾರೆ"

ಎಂದ.

"ದೊಡ್ಡ ಗುರುಗಳು ಅಂದರೆ ಚಿಕ್ಕರಾಮರಾಯರೇನೋ ?"

ಎಂದು ಕೇಳಿದರು ನರಸಕ್ಕ.

"ಹೌದು, ಬೆಳಗ್ಗೆ ಸಂಜೀವಯ್ಯನವರ ಮನೆಯಿಂದ ಅವರ ಮನೆ ಕಡೆ ಹೋಗಿದ್ದೆ. ಆಗ ಹೇಳಿದರು ತಪ್ಪಿಸಿಕೋಬೇಡ, ಖಂಡಿತ ಬಂದುಬಿಡು ಅಂತ."

ವೆಂಕಮ್ಮ ನರಸಕ್ಕನ ಮುಖ ನೋಡಿದರು.

"ಹಾಗಾದರೆ ಮಧು ಅವರ ಮನೆಗೆ ಹೋಗಲಿ. ನೀವು ನಮ್ಮ ಮನೆಗೆ ಬಂದುಬಿಡಿ"

ಎಂದು ವಿಷಯ ಇತ್ಯರ್ಥ ಮಾಡಿದರು ನರಸಕ್ಕ.

ವೆಂಕಮ್ಮ ಒಪ್ಪಿಕೊಳ್ಳದೆ ಬೇರೆ ವಿಧಿಯೇ ಇರಲಿಲ್ಲ.

ಹನ್ನೆರಡು ಘಂಟೆಯ ಹೊತ್ತಿಗೆ ರಾಮರಾಯರ ಮನೆಯಲ್ಲಿ ಹಬ್ಬದ ಊಟ. ದಿವ್ಯವಾದ ಭೋಜನ. ರಾಯರು ತಮ್ಮ ಆಪ್ತ ಶಿಷ್ಯರನ್ನು ಊಟಕ್ಕೆ

ಬರಹೇಳಿದ್ದರು. ಊಟವಾದ ಮೇಲೆ ಎಲ್ಲರೂ ನಡುಮನೆಯಲ್ಲಿ ಹಾಸಿದ್ದ ಜಮಖಾನದ ಮೇಲೆ ಕುಳಿತು ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡರು. ತಾಂಬೂಲ ಬಂದಿತು. ದೊಡ್ಡವರೆಲ್ಲ ಹಾಕಿಕೊಂಡರು. ಸ್ವಲ್ಪ ಹೊತ್ತಾದ ಮೇಲೆ ಮಧು ಸೂದನ ಮನೆಗೆ ಹೋಗಲು ಅಪ್ಪಣೆ ಬೇಡಿದ. ರಾಯರು,

"ಸ್ವಲ್ಪ ಕುಳಿತುಕೋ, ಕೆಲಸವಿದೆ"

ಎಂದು ನುಡಿದು ಹತ್ತಿರದಲ್ಲೇ ಕುಳಿತಿದ್ದ ಗೋಪಾಲನಿಗೆ ಸನ್ನೆಮಾಡಿದರು. ಗೋಪಾಲ ಎದ್ದು ಒಳಗೆ ಹೋಗಿ ಒಂದು ಬಟ್ಟೆಯ ಗಂಟು ತಂದು ಮುಂದಿಟ್ಟ. ರಾಯರು ಅದನ್ನು ಬಿಚ್ಚಿಸಿ ಅದರಲ್ಲಿದ್ದ ಒಂದು ಹೊಸ ಜರಟು, ಹೊಸ ಪಂಚೆ ತೆಗೆಸಿ ಅವಕ್ಕೆ ಅರಸಿನ ಹಚ್ಚಿಸಿ,

"ದೇವರ ಮನೆಗೆ ಹೋಗಿ ದೇವರ ಮುಂದಿಟ್ಟು ನಮಸ್ಕಾರ ಮಾಡಿ ಆಮೇಲೆ ಇದನ್ನು ಹಾಕಿಕೋ"

ಎಂದು ಹೇಳಿ ಕೈಗೆ ಕೊಟ್ಟರು.

ಮಧು ಕಕ್ಕಾಬಿಕ್ಕಿಯಾದ. ಹೆಚ್ಚು ಮಾತಾಡುವ ಧೈರ್ಯವಿಲ್ಲದೆ ಎದ್ದು ಹೋಗಿ ಗುರುಗಳು ಅಪ್ಪಣೆ ಕೊಡಿಸಿದಂತೆಯೇ ಮಾಡಿ ಹಳೆಯ ಬಟ್ಟೆ ಬಿಚ್ಚಿಹಾಕಿ ಹೊಸದನ್ನು ಹಾಕಿಕೊಂಡು ಬಂದ. ಒಂದು ಕಡೆ ಕುಳಿತಿದ್ದ ಸಂಜೀವಯ್ಯ ಕಣ್ಣು ಸನ್ನೆಮಾಡಲು ಮಧು ನೇರವಾಗಿ ಗುರುಗಳ ಬಳಿಗೆ ಹೋಗಿ ಅವರ ಎರಡು ಪಾದಗಳ ಮೇಲೂ ತಲೆಯಿಟ್ಟು ನಮಸ್ಕಾರ ಮಾಡಿದ.

ರಾಯರ ಮುಖ ಗಂಭೀರವಾಯಿತು. ಎರಡು ಕಣ್ಣೂ ಮುಚ್ಚಿ ಅವನ ತಲೆಯ ಮೇಲೆ ಕೈಯಿಟ್ಟರು. ಮನಸ್ಸಿನಲ್ಲೇ ಏನು ಹರಸಿದರೋ ಯಾರಿಗೂ ಗೊತ್ತಾಗಲಿಲ್ಲ.

# ೬

ಮಧುಸೂದನನ ಸಂಗೀತ ಪಾಠ ನಿರಾತಂಕವಾಗಿ ಸಾಗಿತ್ತು. ಸಂಜೀವಯ್ಯನಲ್ಲಿ ಬಾಲ್ಯಪಾಠ ಮುಗಿದು ಚಿಕ್ಕರಾಮರಾಯರ ಹತ್ತಿರವೇ ಪಾಠ ನಡೆಯುತ್ತಿತ್ತು. ಹೊಸ ಹೊಸ ವರ್ಣ – ಕೃತಿಗಳು ಅವನ ಬೊಕ್ಕಸಕ್ಕೆ ಬಂದು ಸೇರುತ್ತಿದ್ದವು. ಶಾರೀರ ಒಡೆದು ತೊಂದರೆ ಕೊಡುತ್ತಿತ್ತಾದರೂ ಅದನ್ನು ಪಳಗಿಸಿ ಹದಕ್ಕೆ ತರುವ ಉಪಾಯವನ್ನು ಗುರುಗಳೇ ಹೇಳಿಕೊಟ್ಟಿದ್ದರು. ತನ್ನ ಶಾರೀರ ಗಡುಸಾಗಿದ್ದುದನ್ನು ಕಂಡು ಮಧುಸೂಧನನಿಗೆ ಮೊದಲು ವ್ಯಥೆಯಾಗಿತ್ತು. ಆದರೆ ಕಂಠ ಘಾತವಾಗಿದ್ದಷ್ಟೂ ಮುಂದೆ ಅಷ್ಟೂ ಅಷ್ಟು ಹದಕ್ಕೆ ಬರುವುದೆಂದು ಗುರುಗಳು ಧೈರ್ಯ ಹೇಳಿದ್ದರು.

ದೇಹದಂತೆ ಕಂಠಕ್ಕೂ ವ್ಯಾಯಾಮ ಅಗತ್ಯ; ಶರೀರವನ್ನು ಆರೋಗ್ಯದಿಂದಿಟ್ಟುಕೊಂಡರೆ ಶಾರೀರವೂ ಪಟುವಾಗಿರುತ್ತದೆ; ಹಾಡಿಕೆಗೆ ರಂಜನೆಯೇ ಪ್ರಧಾನವಾದದ್ದರಿಂದ ಕಂಠವನ್ನು ಉತ್ತಮರೀತಿಯಲ್ಲಿ ಸಂಸ್ಕರಿಸಿ ಹಿಡಿತದಲ್ಲಿಟ್ಟುಕೊಳ್ಳಬೇಕೆಂದೂ ಗುರುಗಳು ಪದೇ ಪದೇ ಹೇಳುತ್ತ ಎಚ್ಚರಿಸುತ್ತಿದ್ದರು. ಪ್ರಯೋಗಕ್ಕಾಗಿ ಅವರು ಅನೇಕ ರಾಗಗಳನ್ನು ತೆಗೆದುಕೊಂಡು, ಅವುಗಳಲ್ಲಿ ಅಪೂರ್ವ ಸಂಚಾರಗಳನ್ನು ಮಾಡಿ ತೋರಿಸಿ ಅವುಗಳನ್ನು ಅಭ್ಯಾಸದಿಂದ ರೂಢಿಸಿಕೊಳ್ಳಬೇಕೆಂದು ಹೇಳುತ್ತಿದ್ದರು.

ಶಾರೀರಕ್ಕೆ ಮೆರುಗು ಕೊಡುವಂಥ ಈ ವರ್ಣಗಳಲ್ಲಿರುವ ಸಂಚಾರ ಪೂರ್ಘನೆಗಳನ್ನು ಮಧು ನಿತ್ಯವೂ ಅಭ್ಯಾಸ ಮಾಡುತ್ತಿದ್ದ. 'ಪ್ರತಿಯೇ

ತಾಯಿ, ಲಯವೇ ತಂದೆ ' ಎಂಬ ಸತ್ಯಕ್ಕೆ ಅಪಚಾರವಾಗದಂತೆ ಅನುಷ್ಠಾನಕ್ಕೆ ತಂದುಕೊಳ್ಳಲು ಪ್ರಯತ್ನಿಸುತ್ತಿದ್ದ. ಉತ್ತಮ ಕೃತಿಗಳ ಹಾಡಿಕೆಯಲ್ಲಿ ದೊಡ್ಡ ದೊಡ್ಡ ಸಂಗೀತಗಾರರೂ ಸಾಹಿತ್ಯಕ್ಕೆ ಅಪಚಾರವೆಸಗುವ ನಿದರ್ಶನಗಳನ್ನು ಕೇಳಿ ಅವನು ಹೆದರಿದ್ದ. ಸಾಹಿತ್ಯದ ಅರ್ಥ ತಿಳಿದು ಹಾಡಿದಷ್ಟೂ ಸೊಗಸು ಹೆಚ್ಚೆಂದೂ ತಾಳಕ್ಕೂ ಸಾಹಿತ್ಯಕ್ಕೂ ಭಂಗವಾಗದೆ ಹಾಗೆ ಹಾಡುವ ರೀತಿಯೂ ಇದೆಯೆಂಬುದನ್ನೂ ಗುರುಗಳು ಹೇಳಿ, ಮಾಡಿತೋರಿಸಿದ್ದರು.

ಚಿಕ್ಕರಾಮರಾಯರು ತಮ್ಮ ಅನೇಕ ಕಚೇರಿಗಳಿಗೆ ಮಧುಸೂದನನನ್ನೂ ಜೊತೆಗೆ ಕರೆದೊಯ್ಯುತ್ತಿದ್ದರು. ಅವರ ಹಾಡಿಕೆಯಲ್ಲಿ ತನಗೆ ಅರ್ಥವಾಗದಿದ್ದ ಭಾಗವನ್ನು ಮಧು ಆಮೇಲೆ ಕೇಳಿ ತಿಳಿದುಕೊಳ್ಳುತ್ತಿದ್ದ. ರಾಗ – ತಾನ – ಪಲ್ಲವಿಗಳಲ್ಲಿ ಗುರುಗಳ ಅದ್ಭುತ ಪಾಂಡಿತ್ಯ ಕಂಡು ಅವನು ವಿಸ್ಮಿತನಾಗಿದ್ದ. ರಾಗದ ಒಂದೊಂದು ಆವರ್ತದಲ್ಲಿ ಒಂದೊಂದು ಕಲ್ಪನಾ ಪ್ರಪಂಚವನ್ನೇ ನಿರ್ಮಿಸುತ್ತಿದ್ದ ಅವರ ಅನ್ಯಾದೃಶ ಶಕ್ತಿ ಅವನನ್ನು ಮುಗ್ಧನನ್ನಾಗಿ ಮಾಡಿತ್ತು. ರಾಯರ ಹಾಡಿಕೆಯೆಂದರೆ ಪಕ್ಕವಾದ್ಯಕ್ಕೆ ಬಂದು ಕೂಡುವ ಸಂಗೀತಗಾರರೇ ಹೆದರುತ್ತಿದ್ದರು. ಹಾಡಿಕೆಯಲ್ಲಿ ದಕ್ಷಿಣೋತ್ತರ ಸಂಪ್ರದಾಯಗಳೆರಡನ್ನೂ ಆಮೂಲಾಗ್ರವಾಗಿ ಅರಗಿಸಿಕೊಂಡಿದ್ದ ರಾಯರ ಪ್ರತಿಭೆ ಕಸ್ತೂರಿಯ ಪರಿಮಳ ದಂತೆ ಎಲ್ಲಾ ಕಡೆಗೂ ಬೀರಿತ್ತು.

ಯಾವ ಕಚೇರಿಯಲ್ಲಾಗಲಿ ರಾಯರು ಕನ್ನಡದ ದೇವರನಾಮುಗಳನ್ನು ಹಾಡದೆ ಬಿಡುತ್ತಿರಲಿಲ್ಲ.

" ದೇವರನಾಮುಗಳನ್ನು ಬಿಡಬಾರದು, ಮಗೂ. ಅವು ನಮ್ಮ ದೊಡ್ಡ ಸಿಧಿ. ದಾಸಸಾಹಿತ್ಯದ ಭಂಡಾರ ನಾವು ಸೂರೆಗೊಂಡಷ್ಟೂ ಇದೆ "

ಎಂದು ಹೇಳುತ್ತಿದ್ದರು.

ಈ ಮಾತನ್ನು ತಮ್ಮ ಕಚೇರಿಗಳಲ್ಲಿ ಸಾರ್ಥಕಪಡಿಸಿ ತೋರಿಸುತ್ತಿದ್ದರು. ದೇವರನಾಮುಗಳೆಂದರೆ ಅವರಿಗೆ ಒಂದು ಹುಚ್ಚು. ಅವುಗಳನ್ನು ಸ್ವರಸಹಿತ ತ್ಯಾಗರಾಜರ, ದೀಕ್ಷಿತರ ಕೃತಿಗಳಂತೆಯೇ ಲಕ್ಷಣಬದ್ಧವಾಗಿ ಹಾಡಬಹುದೆಂಬು ದನ್ನು ತೋರಿಸಿ ತೆಲುಗು ಕೃತಿಗಳಿಗೇ ಜೋತುಬಿದ್ದಿದ್ದ ಕನ್ನಡ ವಿದ್ವಾಂಸರ ಕಣ್ಣು ತೆರೆಸಿದ್ದರು. ಮುಂಬಯಿ, ತಂಜಾವೂರು ಮೊದಲಾದ ಕಡೆ ಪ್ರವಾಸ ಹೋದಾಗಲೂ ಕೂಡ ಕಚೇರಿಗಳಲ್ಲಿ ದೇವರನಾಮುಗಳನ್ನು ಹಾಡುವುದು ರಾಯರ

ವೈಶಿಷ್ಟ್ಯವಾಗಿತ್ತು. ಕನ್ನಡ ಕೃತಿಗಳಲ್ಲಿ ಎಂಥ ಸೊಗಸಿದೆ ಎಂಬುದನ್ನು ಕಚೇರಿಯ ಮಟ್ಟದಲ್ಲಿ ಸಿದ್ಧಾಂತಪಡಿಸಿದ ಗೌರವ ಅವರಿಗೆ ಲಭಿಸಿತ್ತು. ಪರಿಷತ್ತು, ಕನ್ನಡ ನಾಡಿನ ಒಳಹೊರಗಿರುವ ಕರ್ಣಾಟಕ ಸಂಘಗಳು ಅವಕಾಶ ಸಿಕ್ಕಿದಾಗ ಬಿಡದೆ ರಾಯರನ್ನು ಕರೆಸಿ ಅವರ ಕಚೇರಿ ಮಾಡಿಸುತ್ತಿದ್ದವು.

ಈ ಶ್ರೇಷ್ಠ ಸಂಪ್ರದಾಯವನ್ನೇ ಗುರುಗಳು ತಮ್ಮ ಶಿಷ್ಯನಿಗೂ ಅರೆದು ಹೊಯ್ದಿದ್ದರು.

ಒಂದು ಸಲ ಮೈಸೂರಿನಲ್ಲಿ ಸಂಗೀತ ಸಮ್ಮೇಳನ ಏರ್ಪಟ್ಟಿತ್ತು. ಮೈಸೂರಿನ ಸಂಗೀತಗಾರರಲ್ಲದೆ ಹೊರಗಿನಿಂದಲೂ ಅನೇಕ ಮಂದಿ ವಿದ್ವಾಂಸರು ಬಂದು ಭಾಗವಹಿಸಿದ್ದರು. ಕರ್ಣಾಟಕ ಸಂಗೀತ ಸಂಪ್ರದಾಯದ ದಿಗ್ಗಜಗಳಂತಿದ್ದ ಗಾಯಕ ಶಿಖಾಮಣಿ ಮುತ್ತಯ್ಯ ಭಾಗವತರು, ಸಂಗೀತ ಶಾಸ್ತ್ರರತ್ನ ವಾಸುದೇವಾಚಾರ್ಯರು, ವೈಣಿಕ ಪ್ರವೀಣ ಸುಬ್ಬಣ್ಣನವರು ಅಧ್ಯಕ್ಷತೆ ವಹಿಸಿ, ಸಭಾಮಂಟಪದಲ್ಲಿ ಎತ್ತರವಾಗಿ ಸಿದ್ಧವಾಗಿದ್ದ ವೇದಿಕೆಯ ಮೇಲೆ ಲೋಡು ದಿಂಬುಗಳನ್ನೊರಗಿ ಕುಳಿತಿದ್ದರು. ಅಡಕೆ, ವೀಳೆಯದೆಲೆ, ಸುಣ್ಣ ತುಂಬಿದ ಸುಂದರವಾದ ಬೆಳ್ಳಿಯ ಪೆಟ್ಟಿಗೆ ತ್ರಿಮೂರ್ತಿಗಳ ಮುಂದೆ ಸಿದ್ಧವಾಗಿತ್ತು. ಆಚಾರ್ಯತ್ರಯರು ಸಾವಧಾನವಾಗಿ ತಾಂಬೂಲ ಮೆಲ್ಲುತ್ತ ಸಂಗೀತಾವಧಾನಕ್ಕೆ ಕುಳಿತರು.

ಸಮ್ಮೇಳನಾರಂಭದ ಮಾಮೂಲಿನ ಕಾರ್ಯಕ್ರಮವಾದ ಬಳಿಕ ನಾನಾ ವಿದ್ವಾಂಸರುಗಳ ಹಾಡಿಕೆ, ವಾದ್ಯವಾದನ ನಡೆಯತಕ್ಕದ್ದೆಂದೂ ಅನಂತರ ರಾಗ ಪ್ರಭೇದಗಳ ಮೇಲೆ ಚರ್ಚೆ ನಡೆಯತಕ್ಕದ್ದೆಂದೂ ಗೊತ್ತಾಗಿತ್ತು. ಹಾಡಿಕೆಗಾಗಲಿ ವಾದ್ಯವಾದನಕ್ಕಾಗಲಿ ಒಬ್ಬೊಬ್ಬ ವಿದ್ವಾಂಸನಿಗೆ ಅರ್ಧ ಘಂಟೆಗಿಂತ ಹೆಚ್ಚಾದ ಅವಕಾಶವಿರಲಿಲ್ಲ.

ಹಲವು ವಿದ್ವಾಂಸರು ಹಾಡಿದರು. ಕೆಲವರಿಂದ ವೀಣೆ, ಗೋಟುವಾದ್ಯ, ಪಿಟೀಲು, ಜಲತರಂಗ, ಸಿತಾರ್, ಮುಂತಾದ ವಾದ್ಯಗಳ ವಾದನವಾಯಿತು. ಒಬ್ಬೊಬ್ಬರೂ ತಮ್ಮ ಕಾರ್ಯಕಲಾಪ ಮುಗಿಸಿದ ಬಳಿಕ ಅಧ್ಯಕ್ಷ–ಆಚಾರ್ಯರುಗಳಿಗೆ ನಮಸ್ಕರಿಸಿ ಹೋಗಿ ತಮ್ಮ ತಮ್ಮ ಸ್ಥಳಗಳಲ್ಲಿ ಕೂಡುತ್ತಿದ್ದರು. ಈ ಸ್ವಾರಸ್ಯ ಕಾರ್ಯಕ್ರಮದಲ್ಲಿ ಭಾಗಿಗಳಾಗಿದ್ದ ಸಂಗೀತಗಾರರು ಮಾತ್ರವೇ ಅಲ್ಲದೆ

ಐದುನೂರು ಮಂದಿಗೆ ಕಡಮೆಯಿಲ್ಲದಂತೆ ವಿದ್ವಜ್ಜನರೂ ರಸಿಕ ಶ್ರೋತೃಗಳೂ ಸೇರಿದ್ದರು.

ಕಾರ್ಯಕ್ರಮ ಆರಂಭವಾಗಿ ಒಂದು ಘಂಟೆಯ ಹೊತ್ತು ಕಳೆದಿತ್ತು. ಒಬ್ಬ ವಿದ್ವಾಂಸರು ಗೋಟುವಾದ್ಯ ನುಡಿಸಿ ಸ್ವಸ್ಥಾನಕ್ಕೆ ಮರಳಿದ್ದರು. ಸಂಗೀತ ಗಾರರ ಗುಂಪಿನಲ್ಲಿ ಏನೋ ಗುಸುಗುಸು ಆರಂಭವಾಗಿತ್ತು. ಬೇಕು – ಬೇಡ ಎಂಬ ಮಾತುಗಳು ಕೇಳಿಬರುತ್ತಿದ್ದವು. ಮುತ್ತಯ್ಯ ಭಾಗವತರು ಸಂಗೀತ ಗಾರರ ಕಡೆ ತಿರುಗಿ,

" ಇನ್ನಾರಾವರೂ ಹಾಡುವವರಿದ್ದರೆ ಬರಬಹುದು "

ಎಂದು ಹೇಳಿದರು.

ಮುಂದಿನ ವಿದ್ವಾಂಸರು ಬರುವುದು ಸ್ವಲ್ಪ ತಡವಾಗಲು ಸಭೆ ಸ್ತಬ್ಧವಾಗಿ ಯಾರು ಬರುವರೆಂಬುವದನ್ನು ಕುತೂಹಲದಿಂದ ನಿರೀಕ್ಷಿಸುತ್ತಿತ್ತು. ಸಂಗೀತ ಗಾರರ ಗುಂಪಿನಿಂದ ಹದಿನೆಂಟು – ಇಪ್ಪತ್ತು ವರ್ಷ ವಯಸ್ಸಿನ ಒಬ್ಬ ಯುವಕ ಎದ್ದು ಬಂದು ಆಚಾರ್ಯತ್ರಯರಿಗೆ ನಮಸ್ಕರಿಸಿ ಕುಳಿತ. ಪಕ್ಕವಾದ್ಯಗಾರರೂ ಸಿದ್ಧರಾದರು. ಹಾಡಿಕೆ ಆರಂಭವಾಯಿತು.

ಕೇತಾರಗೌಳದಲ್ಲಿ ಒಂದು ವರ್ಣ ಹಾಡಿ, ಬೇಹಾಗ್, ಶಹನ, ರೀತಿಗೌಳ ಗಳಲ್ಲಿ ಮೂರು ಕೃತಿಗಳನ್ನು ಹಾಡಿದ. ಅಠಾಣವನ್ನು ಆಲಾಪನೆಗೆ ಎತ್ತಿಕೊಂಡು ಗಂಭೀರವಾಗಿ ವಿಸ್ತರಿಸಿ, ಭಾವವ್ಯಂಜಕವಾಗಿ ಒಂದು ದೇವರನಾಮ ಹಾಡಿದ. ' ಗೀತಗೋವಿಂದ 'ದ ಒಂದು ಅಷ್ಟಪದಿಯನ್ನು ಅರ್ಥವತ್ತಾಗಿ ರಾಗಮಾಲಿಕೆ ಯಾಗಿ ಹಾಡಿದ.

ಹಾಡಿಕೆ ನವೀನವಾಗಿತ್ತು. ಜೀರಾದ ಸತ್ವಯುಕ್ತ ಶಾರೀರ ; ಗಮಕಗಳು ಲೀಲಾಜಾಲವಾಗಿ ನುಡಿಯುತ್ತಿದ್ದವು. ಸ್ವರಪ್ರಸ್ತಾರವೂ ರಾಗಸಂಚಾರ ರೀತಿಯೂ ಪ್ರೌಢವಾಗಿದ್ದವು. ತಾಳದ ಕಟ್ಟು ಎದ್ದುಕಾಣುವ ಹಾಗಿಲ್ಲದಿದ್ದರೂ ಬಿಗಿಯಾಗಿತ್ತು.

ಅರ್ಧ ಗಂಟೆ ಕಳೆದುಹೋಗಿತ್ತು. ಅದನ್ನು ಯಾರೂ ಗಮನಿಸದಂತೆ ಕಂಡುಬರಲಿಲ್ಲ. ಸುಬ್ಬಣ್ಣನವರು ಹಾಡಿಕೆಯಲ್ಲಿ ತಲ್ಲೀನರಾಗಿ ಕುಳಿತುಬಿಟ್ಟಿದ್ದರು. ವಾಸುದೇವಾಚಾರ್ಯರು ಅಚ್ಚರಿಯಿಂದ ನೋಡುತ್ತಿದ್ದರು. ಮುತ್ತಯ ಭಾಗವತರು ತಾಂಬೂಲ ಮೆಲ್ಲುವುದನ್ನೇ ಮರೆತು ನಿಲ್ಲಿಸಿಬಿಟ್ಟಿದ್ದರು. ಮುಂದೆ

ಇಟ್ಟಿದ್ದ ಬೆಳ್ಳಿಯ ತಾಂಬೂಲ ಕರಂಡ ಮೂವರ ಕಡೆಗೂ ಬಾಯಿ ಬಿಟ್ಟು ಕೊಂಡು ನೋಡುತ್ತಿತ್ತು.

ಯುವಕ ಹಾಡಿಕೆ ನಿಲ್ಲಿಸುವುದಕ್ಕೆ ಅಧ್ಯಕ್ಷರ ಮುಖ ನೋಡಿದ. 'ನಿಲ್ಲಿಸ ಬೇಡ, ಇನ್ನೂ ಸ್ವಲ್ಪ ಹೊತ್ತು ನಡೆಯಲಿ' ಎನ್ನುವಂತೆ ಸುಬ್ಬಣ್ಣನವರು ಸನ್ನೆ ಮಾಡಿದರು. ಕಚೇರಿ ಮುಂದೆ ಸಾಗಿತು.

ಅದು ಮುಗಿದಾಗ ಮೂವರು ಸಂಗೀತಗಾರರಿಗೆ ಕೊಡುವಷ್ಟು ಹೊತ್ತನ್ನು ಒಬ್ಬನೇ ಗಾಯಕ ವಿನಿಯೋಗಿಸಿಕೊಂಡು ಬಿಟ್ಟಿದ್ದ. ಕಚೇರಿ ಮುಗಿಸಿ ಯುವಕ ಎದ್ದು ಬಂದು ಮೂವರು ಆಚಾರ್ಯರಿಗೂ ಕಾಲುಮುಟ್ಟಿ ನಮಸ್ಕರಿಸಿದ.

"ಯಾರ ಶಿಷ್ಯನಪ್ಪಾ ನೀನು ?"

ಮುತ್ತಯ್ಯ ಭಾಗವತರು ಕೇಳಿದರು.

ಯುವಕನ ಮುಖ ಕೆಂಪಗಾಯಿತು. ತಬ್ಬಿಬ್ಬಾಗಿ ಅತ್ತಿತ್ತ ನೋಡಿದ.

ಗುಂಪಿನ ನಡುವೆ ಕುಳಿತಿದ್ದ ವಿದ್ವಾಂಸರೊಬ್ಬರು ಅಲ್ಲಿಯೇ ಗೋಡೆ ಒರಗಿ ಕಂಡೂ ಕಾಣದಹಾಗೆ ಕುಳಿತಿದ್ದ ಚಿಕ್ಕರಾಮರಾಯರ ಕಡೆ ಕೈ ತೋರಿಸಿದರು.

ಆಚಾರ್ಯತ್ರಯದ ಮುಖದ ಮೇಲೆ ಸಂತೋಷಾಶ್ಚರ್ಯಗಳೆರಡೂ ಮೂಡಿದವು.

"ನಮ್ಮ ಚಿಕ್ಕರಾಮೂ ಶಿಷ್ಯನೇ ?"

ಎಂಬ ಮಾತು ತಾನಾಗಿ ಹೊರಟುಬಿಟ್ಟಿತು.

"ನನಗೆ ಹೇಳಲೇ ಇಲ್ಲವಲ್ಲೋ, ರಾಮೂ ?"

ಎಂದು ಸುಬ್ಬಣ್ಣನವರು ಅಂತಃಕರಣ ತುಂಬಿ ಕೇಳಿದರು.

"ಗುರುವಿಗೆ ತಕ್ಕ ಶಿಷ್ಯ"

ಎಂದು ವಾಸುದೇವಾಚಾರ್ಯರು ಅರ್ಥವತ್ತಾಗಿ ಜೋಡಿಸಿದರು.

"ಚಾಮುಂಡೇಶ್ವರಿ ದೀರ್ಘಾಯುಸ್ಸು ಕೊಡಲಿ"

ಎಂದು ಮುತ್ತಯ್ಯ ಭಾಗವತರು ಮನಃಪೂರ್ವಕವಾಗಿ ಹರಸಿದರು.

ಸಭೆಯಲ್ಲೂ ಸಾಕಾದಷ್ಟು ಪ್ರತಿಕ್ರಿಯೆ ಉಂಟಾಗಿತ್ತು.

ದೂರದಲ್ಲಿ ಕುಳಿತಿದ್ದ ಕೆಲವರು ಮಂಡಿಯೂರಿ ಎದ್ದು ಅಕ್ಕಪಕ್ಕದಲ್ಲಿದ್ದವ ರನ್ನು ಕುರಿತು,

"ಯಾರ ಶಿಷ್ಯನಂತೆ?"

ಎಂದು ಕೇಳಿದರು.

"ಚಿಕ್ಕರಾಮರಾಯರ ಶಿಷ್ಯನಂತೆ"

ಎಂದು ಯಾರೋ ಎಲ್ಲಿಂದಲೋ ಉತ್ತರವಿತ್ತರು.

ಈ ವಯಸ್ಸಿಗೆ ಈ ಪಾಂಡಿತ್ಯವೇ ಎಂದು ಅಚ್ಚರಿಯಲ್ಲಿ ಮುಳುಗಿದ್ದ ಸಭೆ ದೀರ್ಘಕಾಲ ಕರತಾಡನ ಮಾಡಿತು.

ರಾತ್ರಿ ಶಿಷ್ಯನನ್ನು ಜೊತೆಗೆ ಕರೆದೊಯ್ದು ರಾಮರಾಯರ ಹೃದಯ ಹಿಗ್ಗಿನಿಂದ ಬಿರಿಯುತ್ತಿತ್ತು. ತಾವು ಅಕ್ಕರೆಯಿಂದ ನೆಟ್ಟಿದ್ದ ಸಸಿ ಗಿಡವಾಗಿ ಬೆಳೆದು ಪಲ್ಲವಿಸುತ್ತಿರುವುದನ್ನು ನೋಡಿ ಅವರಿಗೆ ಹೆಮ್ಮೆಯುಂಟಾಗಿತ್ತು. ಆದರೂ ಅದನ್ನು ತೋರಗೊಡದೆ ಶಿಷ್ಯನಿಗೆ ಒಂದೆರಡು ಬುದ್ಧಿಯ ಮಾತನ್ನು ಹೇಳಿದರು :

"ಮಗೂ ಗಾನಸರಸ್ವತಿಯನ್ನು ಒಲಿಸಿಕೊಳ್ಳುವುದು ಕಷ್ಟ. ಅದಕ್ಕೆ ತುಂಬ ಶ್ರದ್ಧೆ ಬೇಕು; ಏಕಾಗ್ರವಾದ ನಿಷ್ಠೆ ಬೇಕು; ಕಷ್ಟಪಟ್ಟು ಕಲಿಯಬೇಕು. ಸಿದ್ಧಿಸಿದ ಕಲೆಯನ್ನು ಯಾವ ರೀತಿಯಲ್ಲೂ ತೃಣವಾಗೆಣಿಸಕೂಡದು, ಅದರ ಗೌರವವನ್ನು ಇಳಿಸಬಾರದು. ನಾನೇ ಸರ್ವಜ್ಞನೆಂಬ ಹೆಮ್ಮೆ ವಿನಾಶಕ್ಕೆ ಮೂಲ. ಅದು ಅಭ್ಯುದಯದ ಹಾದಿಗೆ ಮುಳ್ಳಾಗುತ್ತದೆ.

"ಸಂಗೀತದಲ್ಲಿ ನಾವು ಕಲಿತಿರುವುದಾದರೂ ಎಷ್ಟು? ಎಲ್ಲೋ ಒಂದು ಅಲ್ಪ. ಅಪಾರವಾದ ಆ ಸಾಗರದಲ್ಲಿ ನಮ್ಮ ವಿದ್ಯೆ 'ಒಂದು ಬಿಂದು ಮಾತ್ರ. ಕಲಿತಿರುವುದು ಅಲ್ಪವಾದರೆ ಕಲಿಯಬೇಕಾದ್ದು ಅಗಾಧವಾಗಿದೆಯೆಂಬುದನ್ನು ಮರೆಯಬಾರದು. ಸಂಗೀತಗಾರರಿಗೆ ಪ್ರಶಂಸೆ ಬರುತ್ತಲೇ ಇರುತ್ತದೆ. ಹಾಗೆ ಬರುವುದೂ ಒಳ್ಳೆಯದೇ. ಆದರೆ ಅದರಿಂದಲೇ ಕುರುಡರಾಗಬಾರದು. ಇನ್ನೂ ಹೆಚ್ಚಿನ ಶಾಸ್ತ್ರ – ಕಲಾ ಜ್ಞಾನ ಸಂಪಾದಿಸಲು ಆ ಪ್ರಶಂಸೆ ಪ್ರಚೋದಕವಾಗಬೇಕು. ಇವೊತ್ತು ನಿನ್ನ ಹಾಡಿಕೆಗೆ ದೊರೆತ ಪ್ರಶಂಸೆ ನಿನಗಾಗಲಿ ನನಗಾಗಲಿ ವಿದ್ವಾಂಸರು ಹಾಕಿದ ಕಿರೀಟವಲ್ಲ; ಹೆಗಲಮೇಲೆ ಹೊರೆಸಿದ ಒಂದು ಭಾರ, ಹೆಚ್ಚಿನ ಜವಾಬ್ದಾರಿ. ಅದನ್ನು ನಿರ್ವಹಿಸುವ ಶಕ್ತಿ ಪಡೆದುಕೊಳ್ಳಬೇಕು. ಸಂತತವಾದ ಧ್ಯಾನ, ಅಭ್ಯಾಸ, ಪ್ರತಿಭಾ ಶಕ್ತಿಗಳಿಂದ ನಿನ್ನ ಕಲೆಯನ್ನು ಬೆಳೆಸಿಕೋ. ಆಚಾರ್ಯರ ಆಶೀರ್ವಾದ ನಿನ್ನ ಬಾಳಿಗೆ ಬೆಳಕಾಗಲಿ"

ಎಂದು ನುಡಿದರು.

ಶಿಷ್ಯನ ಉತ್ಕರ್ಷದಶೆ ನೋಡಿ ಅವರ ಕಣ್ಣಿಂದ ಆನಂದಬಾಷ್ಪ ಗಳುರುಳಿದವು.

ಅಂದಿನ ಕಚೇರಿಯ ಪ್ರಶಂಸೆ, ಗುರುಗಳ ಬದ್ಧಿವಾದ ಮಧುಸೂದನನಿಗೆ ನೂರು ಜನರ ಉತ್ಸಾಹವನ್ನು ದೊರಕಿಸಿಕೊಟ್ಟಿತು.

ಅವನು ದೇವರಿಗೆ ಮನಸ್ಸಿನಲ್ಲೇ ಕೈಜೋಡಿಸಿದ.

## ೧೦

ನಟರಾಜ ಅಯ್ಯರರ ಮನೆ ಕಲಾರಾಧಕರ ಗುಡಿಯಾಗಿತ್ತು. ಸಂಗೀತವೋ ನಾಟ್ಯವೋ ಕಾಲಕ್ಷೇಪವೋ ತಿಂಗಳಿಗೊಮ್ಮೆ ಅಲ್ಲಿ ನಡೆಯದೆ ಇರುತ್ತಿರಲಿಲ್ಲ. ಅಯ್ಯರರು ಪೂರಾ ರಸಿಕರು. ಮೊದಲಿನಿಂದಲೂ ಲಲಿತ ಕಲೆಗಳ ಮೇಲೆ ಅಭಿಮಾನ. ವಿಪುಲ ಸಂಪತ್ತಿಗೆ ಯೋಗ್ಯವಾದ ಸದಭಿರುಚಿ ಅವರಲ್ಲಿ ಬೆಳೆದು ಬಂದಿತ್ತು. ಸಿವಿಲ್ ಸರ್ವಿಸ್ ಹುದ್ದೆಯಿಂದ ನಿವೃತ್ತ ರಾಗುವುದನ್ನೇ ಕಾಯುತ್ತಿದ್ದ ಅವರಿಗೆ ಅಧಿಕಾರದ ನೂರೆಂಟು ತೊಂಗು ತೊಡಕುಗಳನ್ನು ಕಳಚಿಕೊಂಡು ಬಂದ ಬಳಿಕ ಬಂಧನದಿಂದ ಬಿಡುಗಡೆಗೊಂಡ ಹಕ್ಕಿಯಂತೆ ಮನಸ್ಸಿಗೆ ಎಷ್ಟೋ ಹರ್ಷವಾಗಿತ್ತು. ಅಧಿಕಾರದ ಜಂಜಡದಲ್ಲಿ ತುಳಿತಕ್ಕೆ ಸಿಕ್ಕಿ ಸುಪ್ತವಾಗಿ ಅಡಗಿದ್ದ ಸಹಜಪ್ರವೃತ್ತಿ ವಿರಾಮ ಕಾಲ ಬಂದಾಗ ನಾನಿದ್ದೇನೆ ಎಂದು ತಲೆಯೆತ್ತಿತು. ಅಯ್ಯರರು ಅದಕ್ಕೆ ಸಂತೋಷದಿಂದಲೇ ಸ್ವಾಗತವಿತ್ತರು.

ನಟರಾಜ ಅಯ್ಯರರ ವಂಶದಲ್ಲೇ ಕಲಾಭಿಮಾನ ರಕ್ತಗತವಾಗಿ ಬಂದಿತ್ತು. ತಾತ ಮುತ್ತಾತಂದಿರ ಕಾಲದಿಂದಲೂ ಅವರ ಮನೆತನ ಒಂದಲ್ಲ ಒಂದು ವಿಧದಲ್ಲಿ ಕಲೆಗೋ ವಿದ್ವತ್ತಿಗೋ ಹೆಸರಾಗಿತ್ತು. ಅಯ್ಯರ ತಾತ ಚಂದ್ರಶೇಖರ ಅಯ್ಯರರು ಸಂಸ್ಕೃತದಲ್ಲಿ ದೊಡ್ಡ ವಿದ್ವಾಂಸರಾಗಿ ಹಲವು ರಾಜಾಸ್ಥಾನಗಳಲ್ಲಿ ಮನ್ನಣೆ ಪಡೆದಿದ್ದರಂತೆ. ತಂದೆ ಸುಬ್ರಹ್ಮಣ್ಯ ಅಯ್ಯರರು ರಾಜಾರವಿವರ್ಮನ ಶಿಷ್ಯರಾಗಿದ್ದು ಚಿತ್ರಕಲೆ ಗಾನ ಕಲೆಗಳಲ್ಲಿ ಪಾಂಡಿತ್ಯ ಪಡೆದಿದ್ದರಂತೆ. ಆ

ರಕ್ತವೇ ಧಮನಿಗಳಲ್ಲಿ ಹರಿಯುತ್ತಿದ್ದ ನಟರಾಜ ಅಯ್ಯರರು ತುಂಬ ಚಿಕ್ಕ ವಯಸ್ಸಿನಲ್ಲೇ ಮುಂದಕ್ಕೆ ಬಂದು ಸಿವಿಲ್ ಸರ್ವಿಸ್ ಸೇರಿ ದೊಡ್ಡ ಅಧಿಕಾರ ನಿರ್ವಹಿಸಿದ್ದರು. ಜೊತೆಗೆ ಸಂಗೀತ ನಾಟ್ಯಗಳ ಮೇಲೂ ಸಾಕಷ್ಟು ಜ್ಞಾನ ದೊರಕಿಸಿಕೊಂಡಿದ್ದರು.

ಅಯ್ಯರರು ಎರಡು ಕೈಗಳಲ್ಲಿಯೂ ಹೇರಳವಾಗಿ ಸಂಪಾದಿಸಿದ್ದರು. ಹಾಗೆಯೇ ಖರ್ಚೂ ಮಾಡುತ್ತಿದ್ದರು. ಅವರ ಶ್ರೀಮಂತಿಕೆ ಅವರೊಬ್ಬರ ಸಂಸಾರಕ್ಕೇ ಮೀಸಲಾಗಿ ಅರಣ್ಯದ ಬೆಳದಿಂಗಳೆನ್ನಿಸಿಕೊಳ್ಳದೆ ನಾಲ್ಕು ಜನಕ್ಕೂ ಆಶ್ರಯ ನೀಡುತ್ತಿತ್ತು. ಅಯ್ಯರಿಂದ ಸನ್ಮಾನಿತರಾಗದ ಸಂಗೀತಗಾರರು, ನರ್ತಕರು, ಹರಿಕಥಾ ವಿದ್ವಾಂಸರು ಸಾಧಾರಣವಾಗಿ ಮದರಾಸಿನಲ್ಲಿ ಇರಲೇ ಇಲ್ಲವೆನ್ನಬಹುದು. ಊರಿನ ಜನ ಜಂಗುಳಿಯ ಗೊಂದಲದಿಂದ ದೂರವಾಗಿ ಕೀಲಪಾಕಿನಲ್ಲಿ ಕಟ್ಟಿಸಿದ್ದ ಅವರ ಭವ್ಯನಿವಾಸದ ಬಾಗಿಲು ಸದಾ ಕಲಾವಿದರಿಗೆ ತೆರೆದೇ ಇರುತ್ತಿತ್ತು.

ಅಯ್ಯರ ದೊಡ್ಡ ಮಗನೇ ಶಿವಸ್ವಾಮಿ. ಎಂ. ಎಸ್‌ಸಿ ಮುಗಿಸಿಕೊಂಡು ಸಸ್ಯ ವಿಜ್ಞಾನದಲ್ಲಿ ಡಾಕ್ಟೊರೇಟ್ ಪಡೆದು ಬರಲು ಇಂಗ್ಲೆಂಡಿಗೆ ಹೋಗಿದ್ದ. ಆ ವಿಷಯವಾಗಿ ಅವನು ಬರೆದಿದ್ದ ಒಂದು ಪ್ರೌಢ ಪ್ರಬಂಧ ವಿಜ್ಞಾನಿಗಳ ಮೆಚ್ಚಿಕೆಗೆ ಪಾತ್ರವಾಗಿತ್ತು.

ಎರಡನೆಯವಳೇ ಲಲಿತ. ಇಂಟರ್‌ಮಿಡಿಯೇಟ್ ಮುಗಿಯುವುದಕ್ಕೆ ಮೊದಲೇ ಭರತನಾಟ್ಯದಲ್ಲಿ ಸಾಕಷ್ಟು ಪ್ರಾವೀಣ್ಯ ದೊರಕಿಸಿಕೊಂಡಿದ್ದಳು. ಪರೀಕ್ಷೆಯಲ್ಲಿ ಪಾಸಾದರೂ ಮುಂದಕ್ಕೆ ಓದುವ ಇಷ್ಟವಿಲ್ಲದೆ ನಾಟ್ಯಕ್ಕಾಗಿಯೇ ಜೀವನವನ್ನು ಮೀಸಲು ಮಾಡಲು ನಿರ್ಧರಿಸಿದ್ದಳು. ಮಗಳು ಯಾವುದೇ ನಿರ್ಧಾರಮಾಡಲಿ ಅದು ತಂದೆತಾಯಿಗಳಿಗೆ ಪ್ರಿಯವಾಗಿತ್ತು. ಮೀನಾಕ್ಷಮ್ಮನ ಸ್ವಭಾವ ಗಂಡನ ಇಚ್ಛೆಗಳನ್ನು ನೆರಳಿನಂತೆ ಅನುಸರಿಸುತ್ತಿದ್ದುದರಿಂದ ಅವರ ಮಾತಿಗೆ ಆಕೆ ಅಡ್ಡ ಬರುತ್ತಿರಲಿಲ್ಲ. ಮಗಳು ಪ್ರೌಢ ವಿದ್ಯಾವ್ಯಾಸಂಗ ಕೈಕೊಂಡರೂ ಸರಿಯೆ, ನಾಟ್ಯ ಪ್ರವೀಣೆಯಾದರೂ ಸರಿಯೆ ಅವರ ಆಕ್ಷೇಪಣೆಯಿರಲಿಲ್ಲ. ಇಂಟರ್ ಮಿಡಿಯೇಟ್ ರಿಸಲ್ಟು ಬಂದಾಗ ಲಲಿತ,

"ಅಮ್ಮಾ, ನಾನು ಮುಂದೆ ಓದುವುದಿಲ್ಲ. ನಾಟ್ಯಕ್ಕೇ ಕಾಲ ವಿನಿಯೋಗಿಸುತ್ತೇನೆ"

ಎಂದಿದ್ದಳು.

"ನಿನಗೆ ಹೇಗೆ ಬೇಕೋ ಹಾಗೆ ಮಾಡು, ಕಂದಾ"

ಎಂದು ಮೀನಾಕ್ಷಮ್ಮ ಉತ್ತರವಿತ್ತಿದ್ದರು.

ಆದಕ್ಕೆ ಮೊದಲು ಕ್ರಮವಾಗಿ ಪಾಠವೇ ಆಗಿತ್ತು. ಕಲಾಕ್ಷೇತ್ರದಲ್ಲಿ ರುಕ್ಮಿಣೀದೇವಿಗೆ ಲಲಿತನೇ ಪಟ್ಟಶಿಷ್ಯೆ. ವಿರಾಮ ಕಾಲದಲ್ಲಿ ಭರತನಾಟ್ಯವನ್ನು ಅವರಲ್ಲಿ ಅಭ್ಯಸಿಸಿದ್ದ ಲಲಿತನಿಗೆ ಅದನ್ನು ಸುಲಭವಾಗಿ ಬಿಟ್ಟುಬಿಡುವ ಮನಸ್ಸಿರಲಿಲ್ಲ. ಹದಿನೇಳು ಆ ವಯಸ್ಸಿನ ಹುಡುಗಿಯ ಮುಂದೆ ನಾಟ್ಯಕಲೆಯ ಭವ್ಯ ಪ್ರಪಂಚವೇ ತೆರೆದಿತ್ತು. ಅದರ ಅಭಿಮಾನಿದೇವಿ ಕೈಬೀಸಿ ಕರೆಯುತ್ತಿದ್ದಳು. ಆ ಕಲೆಗೆ ಓಗೊಡದಿರಲು ಸಾಧ್ಯವೇ ಇರಲಿಲ್ಲ.

ಲಲಿತ ನಾಟ್ಯಾಭ್ಯಾಸಕ್ಕೆ ಮೊದಲು ಮನಸ್ಸು ಕೊಟ್ಟಾಗ ಅದನ್ನು ಒಂದು ವೃತ್ತಿಯನ್ನಾಗಿ ಅವಲಂಬಿಸಬೇಕೆಂಬ ಹಂಬಲವಿರಲಿಲ್ಲ. ಜೀವನಕ್ಕಾಗಿ ಅವಳು ಯಾವ ವೃತ್ತಿಯನ್ನೂ ಕೈಕೊಳ್ಳಬೇಕಾಗಿರಲಿಲ್ಲ. ತಂದೆಗಿದ್ದ ಅಪಾರ ವಾದ ಆಸ್ತಿ ಅಣ್ಣತಂಗಿಯರು ಜೀವಮಾನವೆಲ್ಲಾ ಕುಳಿತು ತಿಂದರೂ ಸವೆಯ ದಷ್ಟಿತ್ತು. ಸಹಜವಾಗಿಯೇ ಅವಳ ಮನಸ್ಸು ನಾಟ್ಯದ ಕಡೆಗೆ ಹೊರಳಿತ್ತು.

ಮಗಳಿಗೆ ಒಳ್ಳೆಯ ಕಡೆಯೇ ಶಿಕ್ಷಣಕೊಡಿಸಬೇಕೆಂದು ನಿರ್ಧರಿಸಿದ್ದ ನಟರಾಜ ಅಯ್ಯರವರು ರುಕ್ಮಿಣೀದೇವಿಯನ್ನು ಪ್ರಾರ್ಥಿಸಿಕೊಂಡಿದ್ದರು. ಅದಕ್ಕಾಗಿ ಎಷ್ಟು ವೆಚ್ಚವಾದರೂ ಮಾಡಲು ಸಿದ್ಧವಾಗಿದ್ದರು. ಆದರೆ ಲಲಿತೆ ನಲ್ಲಿ ನಾಟ್ಯಪ್ರವೃತ್ತಿ ಬಳ್ಳಿಯಲ್ಲಿ ಹೂವರಳುವಂತೆ ಅರಳುವುದೆಂಬುದನ್ನು ಮನಗಂಡಿದ್ದ ಚಾಣಾಕ್ಷೆ ರುಕ್ಮಿಣೀದೇವಿ ಯಾವ ಸಂಭಾವನೆಯನ್ನೂ ಸ್ವೀಕರಿಸ ಲೊಪ್ಪದೆ ಅವಳನ್ನು ತಮ್ಮ ಮುಖ್ಯ ಶಿಷ್ಯೆಯನ್ನಾಗಿ ಅಂಗೀಕರಿಸಿ ಅಭಿಮಾನ ದಿಂದ ಪಾಠ ಹೇಳಲು ಸಮ್ಮತಿಸಿದ್ದರು.

ಲಲಿತ ಹೆಸರಿಗೆ ಅನ್ವರ್ಥವಾಗಿದ್ದಳು. ಗುಲಾಬಿಯ ಮೈಬಣ್ಣಕ್ಕೆ ಒಪ್ಪುವಂತಿದ್ದ ಸುಂದರವಾದ, ಎತ್ತರವುಳ್ಳ ಆಕೃತಿ; ನಸುಸೀಳವಾದರೂ ಕೋಮಲವಾದ ನಾಸಿಕ. ಯಾವ ಅಧರ ರಾಗವನ್ನೂ ಅಪೇಕ್ಷಿಸದ ಕೆಂದುಟಿ; ಕಾಂತಿಯುಕ್ತವಾದ ಸೋಗೆಗಣ್ಣುಗಳು. ಯೌವನದ ಪ್ರಾದುರ್ಭಾವವನ್ನು ಸೂಚಿಸುತ್ತ ತುಂಬಿ ಬರುತ್ತಿದ್ದ ಭಾವವಾದ ಎದೆ. ಅದರ ಸೊಗಸು ಎತ್ತಿ ಕಾಣುವಂತೆ ನೆರವಾಗಿದ್ದ ಬಳುಕುನಡು. ಮಾತನಾಡುವಾಗಲೇ ಸಹಜ-

ವಿನ್ಯಾಸದಲ್ಲಿ ಚಲಿಸುತ್ತಿದ್ದ ಕೋಮಲವಾದ ತೋಳುಗಳು. ಈ ಆಕೃತಿಯಲ್ಲಿ ನಾಟ್ಯ ಪ್ರವೃತ್ತಿ ಸೇರಿ ಬಂಗಾರಕ್ಕೆ ಕುಂದಣವಿಟ್ಟ ಹಾಗಿತ್ತು. ಒಂದು ನೋಟ ದಲ್ಲೇ ಈ ಮರ್ಮವನ್ನು ಗ್ರಹಿಸಿದ್ದ ರುಕ್ಮಿಣೀದೇವಿ ಲಲಿತನನ್ನು ತಮ್ಮ ನೆಚ್ಚಿನ ಶಿಷ್ಯಳನ್ನಾಗಿ ಮಾಡಿಕೊಂಡಿದ್ದರಲ್ಲಿ ಆಶ್ಚರ್ಯವಿರಲಿಲ್ಲ.

ಪಾಠಕ್ರಮ ಕಠಿನವಾಗಿಯೇ ಇತ್ತು. ಸುಖದಲ್ಲಿ ಬೆಳೆದಿದ್ದ ಹುಡುಗಿ ನಾಟ್ಯದ ಓನಾಮ ಆರಂಭಿಸಿ ಗೆಜ್ಜೆಪೂಜೆ ಮಾಡಿದ ದಿನ ಹರ್ಷದಿಂದ ಕುಣಿ ದಾಡಿದ್ದಳು. ಆದರೆ ದಿನ ಕಳೆಯುತ್ತ ಕಳೆಯುತ್ತ ಇದು ಮೈಮುರಿಯುವ ಕಲೆ, ಅಳ್ಳೆದೆಯವರಿಗೆ ಒಲಿಯತಕ್ಕದ್ದಲ್ಲ; ಇದರ ಉದ್ದಕ್ಕೂ ಜೀವ ತೇದರೇ ಅಭಿಮಾನಿದೇವಿ ಕೃಪೆಮಾಡಿಯಾಳು – ಎಂಬ ಸತ್ಯ ಗೋಚರವಾಗತೊಡಗಿತು. ಲಲಿತ ಅರ್ಧಕ್ಕೇ ಹಿಮ್ಮೆಟ್ಟಿ ಓಡಿಹೋಗುವ ಸ್ವಭಾವದವಳೂ ಆಗಿರಲಿಲ್ಲ. ಅಭಿನಯ ಕಲೆಯನ್ನು ಸಾಧಿಸಬೇಕೆಂಬ ಹುಚ್ಚು ಅವಳ ತಲೆಗೆ ಚೆನ್ನಾಗಿ ಹತ್ತಿ ಬಿಟ್ಟಿತ್ತು. ಅನ್ನ ನೀರನ್ನೂ ಮರೆತು ಅಭ್ಯಾಸದಲ್ಲಿ ನಿರತಳಾದಳು.

ಅವಳ ಉತ್ಸಾಹ ನಟರಾಜ ಅಯ್ಯರರಿಗೇ ಆಶ್ಚರ್ಯವನ್ನುಂಟುಮಾಡಿತ್ತು. ಮಗಳ ಪ್ರಗತಿಯನ್ನು ಅವರು ಕುತೂಹಲದಿಂದಲೇ ವೀಕ್ಷಿಸುತ್ತ ಬಂದಿದ್ದರು. ಪಾಠ ಸಾಂಗವಾಗಿ ನಡೆದ ಮೇಲೆ ಒಂದು ದಿನ ಮನೆಯಲ್ಲೇ ಮಗಳ ಅಭಿನಯ ಏರ್ಪಡಿಸಬೇಕೆಂದು ಬಯಸಿದರು. ಲಲಿತನಿಗೆ ಅದು ಇಷ್ಟವಿರಲಿಲ್ಲ. ನಾಟ್ಯ ಮಂದಿರ ಬಿಟ್ಟು ಇದುವರೆಗೂ ಜನರೆದುರಿಗೆ ಎಲ್ಲೂ ಅಭಿನಯ ಪ್ರದರ್ಶಿ ಸಿರಲಿಲ್ಲ. ತನ್ನಲ್ಲೇ ತನಗೆ ನಂಬಿಕೆ ಸಾಲದಾಗಿ ಅವಳಿಗೆ ಅಂಜಿಕೆಯಾಗಿತ್ತು. ಆದರೆ ತನಗಿಂತ ಹೆಚ್ಚಾಗಿ ಉತ್ಸಾಹ ತೋರಿಸುತ್ತಿದ್ದ ತಂದೆಯ ಬಲವಂತಕ್ಕೆ ಒಪ್ಪದೆ ಬೇರೆ ದಾರಿಯೇ ಇರಲಿಲ್ಲ.

ಒಂದು ಸಂಜೆ ನಟರಾಜ ಅಯ್ಯರರು ತಮಗೆ ಬೇಕಾದ ಆಪ್ತವರ್ಗದ ಎಂಟು ಹತ್ತು ಗೆಳೆಯರಿಗೆ ಆಹ್ವಾನ ಕಳಿಸಿದ್ದರು. ಸಮಾರಂಭ ಏನೆಂದೂ ಏಕೆಂದೂ ಯಾರಿಗೂ ಗೊತ್ತಿರಲಿಲ್ಲ. ಆಗಾಗ್ಗೆ ಹುಚ್ಚು ತಿರುಗುವಂತೆ ಅಯ್ಯರರು ಉಪಾಹಾರ ಗೋಷ್ಠಿಗೆ ತಮ್ಮನ್ನು ಕರೆದಿರಬೇಕೆಂದೇ ಹಲವರ ನಂಬಿಕೆ ಯಾಗಿತ್ತು. ಆಹ್ವಾನಿತರಲ್ಲಿ ರುಕ್ಮಿಣೀದೇವಿ, ಶಂಭು ಪಿಳ್ಳೆ, ಗೋವಿಂದ ಮೆನನ್ ಮುಂತಾದ ಕಲಾವಿದರೂ ಇದ್ದರು. ಅಯ್ಯರರ ಆಪ್ತಗೆಳೆಯರಾದ ಕೇಶವ ಪೈ, ಸ್ವಾಮಿನಾಥನ್, ಮುತ್ತುಸ್ವಾಮಿಯವರಿಗೂ ಆಹ್ವಾನ ಹೋಗಿತ್ತು.

ಎಲ್ಲರೂ ನಿರ್ದಿಷ್ಟ ಕಾಲಕ್ಕೆ ಹಾಜರಾದರು. ಅಯ್ಯರರ ಮನೆಯ ವಿಶಾಲವಾದ ಹಜಾರದಲ್ಲಿ ದೊಡ್ಡ ಜಮಖಾನೆ ಹಾಸಿತ್ತು. ಗೋಡೆಗಳಿಗೆ ಅಲ್ಲಲ್ಲೇ ಗೌಸು ಹಾಕಿದ ಒರಗುದಿಂಬುಗಳನ್ನಿಡಲಾಗಿತ್ತು. ತಂಬೂರಿ, ಅದರ ಪಕ್ಕದಲ್ಲೇ ಮೃದಂಗ ಸಿದ್ಧವಾಗಿದ್ದವು. ನಾಲ್ಕೂ ಕಡೆ ಒತ್ತಟ್ಟಿಗಿಟ್ಟಿದ್ದ ಧೂಪಧಾನಿಗಳಿಂದ ಮಧುರವಾದ ಪರಿಮಳದ ಹೊಗೆ ಸಣ್ಣಗೆ ಏಳುತ್ತಿತ್ತು. ವಿದ್ಯುದ್ದೀಪದ ಮಂದವಾದ ಪ್ರಕಾಶ ಸಭಾಂಗಣವನ್ನು ಆವರಿಸಿತ್ತು.

ಬಂದ ಮಿತ್ರರನ್ನೆಲ್ಲಾ ಸ್ವಾಗತಿಸಿ ಅಯ್ಯರರು ಒಳಗೆ ಕರೆದು ತಂದು ಕೂಡಿಸಿದರು. ಎಲ್ಲರಿಗೂ ಉಪಾಹಾರವಾಯಿತು. ಹತ್ತು ನಿಮಿಷ ಲೋಕಾಭಿರಾಮವಾಗಿ ಮಾತುಕತೆ ನಡೆಯಿತು. ಉಪಾಹಾರಕ್ಕೆ ಸಂದರ್ಭವೇನೆಂದು ತಿಳಿದುಕೊಳ್ಳಲು ಒಬ್ಬಿಬ್ಬರು ಸ್ನೇಹಿತರಿಗೆ ಕುತೂಹಲ. ಅದನ್ನು ನಟರಾಜ ಅಯ್ಯರರೇ ಅರಿತು, ಮಗಳ ನಾಟ್ಯಾಭ್ಯಾಸ ಮುಗಿದಿರುವುದರ ನೆನಪಾಗಿ ಈ ಸಣ್ಣ ಸಂತೋಷ ಕೂಟ ಏರ್ಪಡಿಸುವ ಬಯಕೆಯಾಯಿತೆಂದು ತಿಳಿಸಿದರು.

" ಹಾಗಾದರೆ ಲಲಿತ ಎಲ್ಲಿ, ಕಾಣಲೇ ಇಲ್ಲವಲ್ಲಾ ?"

ಎಂದು ಸ್ವಾಮಿನಾಥನ್ ಕೇಳಿದರು.

" ನಾಟ್ಯಕ್ಕೆಂದು ಗೊತ್ತಾಗಿದ್ದರೆ ನಮ್ಮ ಮನೆಯವರನ್ನೂ ಕರೆತರುತ್ತಿದ್ದೆ"

ಎಂದು ಕೇಶವ ಪೈ ನುಡಿದರು.

" ನಾನೂ ಕರೆತರುತ್ತಿದ್ದೆ"

ಎಂದು ಮುತ್ತುಸ್ವಾಮಿ ಜೋಡಿಸಿದರು.

ಎಲ್ಲರೂ ನಕ್ಕರು.

ಗೆಜ್ಜೆಯ ಧ್ವನಿಯಾಯಿತು. ಲಲಿತ ಬಂದು ಎಲ್ಲರಿಗೂ ನಮಸ್ಕರಿಸಿ ರುಕ್ಮಿಣೀ ದೇವಿಯ ಹತ್ತಿರ ಹೋಗಿ ಕುಳಿತುಕೊಂಡಳು.

ನಾಟ್ಯಕ್ಕಾಗಿ ಸಜ್ಜಾಗಿ ಬಂದಿದ್ದ ಅವಳ ವೇಷಭೂಷಣಗಳನ್ನು ಮಿತ್ರವರ್ಗ ಕುತೂಹಲದಿಂದ ದಿಟ್ಟಿಸಿ ನೋಡಿತು.

ಲಲಿತ ನೀಲವರ್ಣದ ಪೀತಾಂಬರವನ್ನುಟ್ಟು ಅಡ್ಡಸೆರಗೆಳೆದು ಸಿಕ್ಕಿಸಿಕೊಂಡಿದ್ದಳು. ರೋಜಾಬಣ್ಣದ ಕುಪ್ಪುಸ ಧರಿಸಿ ಕೊರಳಿಗೆ ಕೆಂಪಿನ ಅಡ್ಡಿಕೆ ಹಾಕಿಕೊಂಡಿದ್ದಳು. ಒಂದೆಳೆಯ ಮುತ್ತಿನಸರ ಬೈತಲೆಗೆ ಭೂಷಣವಾಗಿತ್ತು. ತೋಳಿಗೆ ಮುದ್ದಾದ ಬಾಜೂಬಂದಿ ಕಟ್ಟಿದ್ದಳು. ಕೈಗೆ ಕಡಗ ಬೆರಳಿಗೆ ಉಂಗುರ

ಗಳಿದ್ದುವು. ಮೊಗ್ಗಿನ ಜಡೆ ಹಾಕಿದ ಹೆರಳು ಬೆನ್ನಮೇಲೆ ನೀಳವಾಗಿ ಇಳಿಬಿದ್ದು ಬಂಗಾರದ ಕುಚ್ಚಿನ ಭಾರಕ್ಕೆ ಹಾಗೂ ಹೀಗೂ ತೂಗುತ್ತಿತ್ತು. ಕಾಲಿಗೆ ಗೆಜ್ಜೆ ಕಟ್ಟಿ ನಾಟ್ಯಸೇವೆಗೆ ಅಣಿಯಾಗಿ ಬಂದಿದ್ದಳು.

ನಟರಾಜ ಅಯ್ಯರರು ರುಕ್ಮಿಣೀದೇವಿಯ ಮುಖ ನೋಡಿದರು. ಅವರು ಆಗಬಹುದೆಂದು ಒಪ್ಪಿಗೆ ಸೂಚಿಸಿ ಲಲಿತನ ಕಿವಿಯಲ್ಲಿ ಏನೋ ಉಸುರಿದರು. ಲಲಿತ ಎದ್ದು ವಾದ್ಯಗಳು ಸಿದ್ಧವಾಗಿದ್ದೆಡೆಗೆ ಬಂದುನಿಂತಳು. ಕಲಾಕ್ಷೇತ್ರದ ಮೂವರು ಗೆಳೆಯರು ಆಗಲೇ ಬಂದು ಕುಳಿತಿದ್ದರು. ಅವರಲ್ಲಿಬ್ಬರು ವಾದ್ಯ ಗಳನ್ನು ಶ್ರುತಿಮಾಡಿಕೊಂಡು ಕುಳಿತಿದ್ದರು.

ಮೆಲ್ಲನೆ ಹಿಮ್ಮೇಳ ಗಾಯನ ಆರಂಭವಾಯತು. ಗಾಯಕ ಕೇತಾರ ಗೌಳದಲ್ಲಿ ಒಂದು ವರ್ಣ ಆರಂಭಿಸಿದ. ಲಲಿತ ಅದಕ್ಕೆ ಅಭಿನಯ ಕಟ್ಟ ಲಾರಂಭಿಸಿದಳು. ರುಕ್ಮಿಣೀದೇವಿ ಸದ್ದಿಲ್ಲದೆ ತಾಳ ಹಾಕುತ್ತ ಶಿಷ್ಯಳ ಅಂಗ ವಿನ್ಯಾಸವನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಶಂಭು ಪಿಳ್ಳೆ ಅವಳ ಹಸ್ತ ವಿಕ್ಷೇಪಗಳನ್ನು ನೋಡುತ್ತಿದ್ದರು. ಗೋವಿಂದ ಮೆನನ್ನರ ದೃಷ್ಟಿಯನ್ನು ನಾಟ್ಯಗಾತಿಯ ಗೆಜ್ಜೆಯ ಹೆಜ್ಜೆಯ ಗತಿ ಸೆಳೆದಿತ್ತು.

ಕೃಷ್ಣನನ್ನು ಅರಸಿ ಬಂದ ಗೋಪಿಕಾ ಸ್ತ್ರೀಯೊಬ್ಬಳು ಅವನನ್ನು ವೃಂದಾವನದಲ್ಲಿ ಕಾಣದೆ ವಿರಹ ತಪ್ತಳಾಗಿ ಅಲೆಯುತ್ತ ತನ್ನ ಉದ್ವೇಗವನ್ನು ತೋಡಿಕೊಳ್ಳುವುದೇ ವರ್ಣದ ಸಾಹಿತ್ಯ. ವಿಪ್ರಲಂಭ ಶೃಂಗಾರ ಸೊಗಸಾಗಿ ಪ್ರತಿಪಾದನೆಯಾಗಿತ್ತು. ನಾಟ್ಯದಲ್ಲಿ ಆ ಭಾವ ಮೈ ತಾಳುವಂತೆ ಲಲಿತ ಚಿತ್ರಿಸಿ ಭಲೆ ಎನ್ನಿಸಿಕೊಂಡಳು.

ವರ್ಣವಾದ ಮೇಲೆ ಒಂದು ಸ್ವರ ಜತಿ, ಆಮೇಲೆ ದೀಕ್ಷಿತರದೊಂದು ಕೀರ್ತನೆ, ತಿಲ್ಲಾನಗಳಾದವು. ಭಗವಂತನ ಚಿದ್ರೂಪದ ಸಾಕ್ಷಾತ್ಕಾರವಾದ ಅಂತರಂಗ ಭಕ್ತನ ಮನಸ್ಸಿನ ವ್ಯಾಪಾರಗಳನ್ನೂ ಆನಂದಾತಿರೇಕಗಳನ್ನೂ ಚಿತ್ರಿಸುವ ಆ ಕೀರ್ತನೆ ಅದ್ಭುತ ಕರುಣಾರಸಗಳ ನೆಲೆವೀಡು. ವಿವಿಧ ಮನೋ ಭಾವಗಳ ಆ ಚಿತ್ರಣದಲ್ಲಿ ಲಲಿತಳ ಲಾಸ್ಯ ಕಾವುಗೊಂಡು ನೋಟಕರಿಗೆ ರೋಮಾಂಚನವನ್ನುಂಟು ಮಾಡಿತು.

ಕೊನೆಯಲ್ಲಿ ಒಂದು ಶ್ಲೋಕ. ಅದಕ್ಕೆ ಅಭಿನಯ ಕಟ್ಟಿ ಮುಕ್ತಾಯ ಮಾಡುವ ವೇಳೆಯಲ್ಲಿ ಲಲಿತ ಸ್ತಬ್ಧಳಾಗಿ ನಿಂತು ಪ್ರತಿಮಾಭಂಗಿಯನ್ನು

ಪ್ರದರ್ಶಿಸಿದಳು. ಎರಡು ನಿಮಿಷ ಹಾಗೇ ನಿಂತಿದ್ದು ಅನಂತರ ನಾಟ್ಯವನ್ನು ವಿರಮಿಸಿ ಎಲ್ಲರಿಗೂ ಕೈಮುಗಿದು ಒಳಗೆ ಹೊರಟುಹೋದಳು.

ಅಯ್ಯರರ ಸಭಾಭವನ ಐದು ನಿಮಿಷ ಒಂದೇ ಸಮನೆ ಚಪ್ಪಾಳೆಯಿಂದ ತುಂಬಿಹೋಯಿತು. ಕೇಶವ ಪೈ ಅಯ್ಯರರ ಬೆನ್ನು ತಟ್ಟುತ್ತ

"ಸೊಗಸಾದ ನಾಟ್ಯ ಮಾಡಿಸಿಬಿಟ್ಟರಿ. ಲಲಿತ ಇಷ್ಟರಮಟ್ಟಿಗೆ ಭರತ ನಾಟ್ಯ ಕಲಿತಿದ್ದಾಳೆಂಬುದೇ ನನಗೆ ಗೊತ್ತಿರಲಿಲ್ಲ. ಬಲು ಘಾಟಿಯಪ್ಪಾ ನೀವು. ಎಲ್ಲಾ ಒಳಗೊಳಗೇ ಮಗಳನ್ನು ತರಪೇತು ಮಾಡಿಸಿಬಿಟ್ಟದ್ದೀರಿ"

ಎಂದರು. ನಟರಾಜ ಅಯ್ಯರರು ಮುಗುಳ್ನಗುತ್ತ ರುಕ್ಮಿಣೀದೇವಿಯ ಕಡೆಗೆ ಕೈ ತೋರಿಸಿದರು :

"ಎಲ್ಲಾ ಅವರಿಗೆ ಸೇರಬೇಕಾದ್ದು. ಅವರು ಮನಸ್ಸು ಮಾಡದಿದ್ದರೆ ಇವೊತ್ತು ಲಲಿತ ನಿಮ್ಮ ಮುಂದೆ ಹೀಗೆ ನಾಟ್ಯ ಕಟ್ಟುತ್ತಿರಲಿಲ್ಲ."

ರುಕ್ಮಿಣೀದೇವಿ ತಮಗೆ ಸಲ್ಲಬೇಕಾದ ಗೌರವವನ್ನು ಮರ್ಯಾದೆಯಿಂದ ಸ್ವೀಕರಿಸುತ್ತ,

"ಕೀರ್ತಿ ಅವಳಿಗೇ ಸೇರಬೇಕು. ಲಲಿತ ತುಂಬ ಜಾಣೆ. ಬೆರಳು ತೋರಿಸಿದರೆ ಹಸ್ತ ನುಂಗುವ ಸ್ವಭಾವ ಅವಳದು. ಹೇಳಿಕೊಟ್ಟಿರುವುದೇ ಸ್ವಲ್ಪ. ಅದನ್ನೇ ಇಷ್ಟು ಚೆನ್ನಾಗಿ ರೂಢಿಸಿಕೊಂಡಿದಾಳೆ"

ಎಂದರು.

"ಅಂತೂ ನಿಮ್ಮ ಕೈವಾಡವೆಂದು ಒಪ್ಪಿಕೊಳ್ಳುವುದಿಲ್ಲವಲ್ಲಾ ?"

ಎಂದು ಗೋವಿಂದ ಮೆನನ್ ನುಡಿದರು.

ರುಕ್ಮಿಣೀದೇವಿ ನಕ್ಕು ಸುಮ್ಮನಾದರು.

ಒಂದೆರಡುಕ್ಷಣ ಬಿಟ್ಟು ಸ್ವಾಮಿನಾಥನ್ ಅಯ್ಯರರ ಕಡೆ ತಿರುಗಿ,

"ಮುಂದೇನು ಮಾಡುತ್ತಾಳಂತೆ. ನಾಟ್ಯವನ್ನೇ ರೂಢಿಸಿಕೊಳ್ಳು ತ್ತಾಳಂತೋ, ಇಲ್ಲ ಇಷ್ಟಕ್ಕೇ ಕೈ ಬಿಟ್ಟುಕೂಡುತ್ತಾಳಂತೋ ?"

"ಬಿಟ್ಟು ಕೂಡುವ ಹಾಗೇನೂ ಕಾಣಲಿಲ್ಲ. ಅಭ್ಯಾಸ ಮುಂದುವರಿಸುವ ಉತ್ಸಾಹ ಅವಳಿಗಿದೆ"

ಎಂದು ಅಯ್ಯರರು ಉತ್ತರವಿತ್ತರು.

ಹೊತ್ತಾಯಿತೆಂದು ಮಿತ್ರರು ಒಬ್ಬೊಬ್ಬರಾಗಿ ಎದ್ದರು. ಕಲಾಕ್ಷೇತ್ರದಲ್ಲಿ ಬೇರೊಂದು ಕಾರ್ಯಕ್ರಮವಿದೆಯೆಂದು ಹೇಳಿ ರುಕ್ಮಿಣೀದೇವಿ ಹೊರಟರು.

ಅಯ್ಯರರು ಸ್ನೇಹಿತರನ್ನು ಬೀಳ್ಕೊಡಲು ಮನೆಯ ಮುಂದಿನ ತೋಟದ ಹೆಬ್ಬಾಗಿಲವರೆಗೂ ನಡೆದುಬಂದರು. ಕೇಶವ ಪೈ ಮಧ್ಯದಲ್ಲಿ ನಿಂತು,

"ದೊಡ್ಡ ಜವಾಬ್ದಾರಿ ನಿಮ್ಮ ಮೇಲೆ ಬಿದ್ದಿದೆ. ಲಲಿತ ಅಭ್ಯಾಸ ಮುಂದುವರಿಸಿದರೆ ನಾಟ್ಯದ ನಾನಾ ಪ್ರಭೇದಗಳನ್ನು ಕಲಿತುಕೊಳ್ಳಬೇಕಾಗುತ್ತದೆ. ಇದಕ್ಕೆ ಬೇರೆ ಬೇರೆ ಸಂಪ್ರದಾಯಗಳ ವಿದ್ವಾಂಸರ ನೆರವೂ ಬೇಕಾಗಬಹುದು."

"ಅವಳೇನೋ ಭರತನಾಟ್ಯವನ್ನೇ ಚೆನ್ನಾಗಿ ರೂಢಿಸಿಕೊಳ್ಳಬೇಕೆಂದಿದ್ದಾಳೆ. ಅವಳಿಗೆ ಪಂದನಲ್ಲೂರಿನ ಹುಚ್ಚು ಹಿಡಿದಿದೆ. ಅಲ್ಲಿಗೆ ಹೋಗಬೇಕಂತೆ."

"ಹೋಗಲಿ ಬಿಡಿ."

"ಅದಕ್ಕಡ್ಡಿಯಿಲ್ಲ. ಮೈಸೂರಿನಲ್ಲೊಬ್ಬರು ಭರತನಾಟ್ಯ ಪ್ರವೀಣೆ ಇದ್ದಾರೆಂದು ಕೇಳಿದೆ. ಆದರೆ ಅವರ ಹೆಸರು ಗೊತ್ತಿಲ್ಲ. ಭರತನಾಟ್ಯದಲ್ಲಿ ಅವರದೂ ಶುದ್ಧ ಸಂಪ್ರದಾಯದವಂತೆ."

"ಅಲ್ಲಿಗೇಕೆ ಕಳಿಸಬಾರದು ?"

"ಲಲಿತ ಏನು ಹೇಳುತ್ತಾಳೋ ಕಾಣೆ. ಇದು ಹೊರಗಿನ ಊರುಗಳಲ್ಲಿ ಹುಡುಗಿಯನ್ನು ಬಿಟ್ಟಿರುವ ಪ್ರಶ್ನೆ. ಅದಕ್ಕೇ ಯೋಚಿಸುತ್ತಿದೇನೆ. ವಿದ್ವಾಂಸರನ್ನು ಇಲ್ಲಿಗೆ ಕರೆಸಿ ತಿಂಗಳಗಟ್ಟಲೆ ಇಟ್ಟುಕೊಳ್ಳುವುದು ಕಷ್ಟದ ಕೆಲಸ. ಅವರು ಒಪ್ಪುವುದೂ ಕಷ್ಟ."

ಈ ವಿಷಯದಲ್ಲಿ ಯೋಚಿಸಿ ನಿರ್ಧಾರಕ್ಕೆ ಬರುವುದು ಅಯ್ಯರರ ಸ್ವಂತದ ಪ್ರಶ್ನೆಯಾಗಿತ್ತು. ಸ್ನೇಹಿತರು ಆ ವಿಷಯದಲ್ಲಿ ಸಲಹೆ ಕೊಡಬಲ್ಲವರಾಗಿದ್ದರೇ ವಿನಾ ತೀರ್ಮಾನ ಮಾಡುವ ಹಾಗಿರಲಿಲ್ಲ.

ಮಾತು ಅಷ್ಟಕ್ಕೇ ನಿಂತಿತು. ಎಲ್ಲರೂ ಗೇಟಿನ ಹತ್ತಿರ ಬಂದಿದ್ದರು.

ಕೇಶವ ಪೈ, ಸ್ವಾಮಿನಾಥನ್ ಒಂದು ಕಾರಿನಲ್ಲಿ ಕುಳಿತು ಹೊರಟರು. ಕೀಲ ಪಾಕಿನಲ್ಲೇ ವಾಸಿಸುತ್ತಿದ್ದ ಮುತ್ತುಸ್ವಾಮಿ ನಡೆದುಕೊಂಡೇ ಮನೆಗೆ ಹೊರಟು ಬಿಟ್ಟರು.

ಗೆಳೆಯರನ್ನು ಬೀಳ್ಕೊಟ್ಟು ಹಿಂತಿರುಗಿದ ನಟರಾಜ ಅಯ್ಯರರ ಮನಸ್ಸನ್ನು ಮಗಳ ಅಭ್ಯುದಯದ ಪ್ರಶ್ನೆ ಆವರಿಸಿತ್ತು.

## ೧೧

ಗುರುಗಳಾಡಿದ ಮಾತನ್ನು ಮಧುಸೂದನ ಮರೆಯಲು ಸಾಧ್ಯವೇ ಇರಲಿಲ್ಲ. ಸಂಗೀತಜ್ಞಾನವನ್ನು ಅವನು ಅಭಿವೃದ್ಧಿಪಡಿಸಿಕೊಳ್ಳುತ್ತ ಬಂದ ಹಾಗೆಲ್ಲಾ ಅದರ ಅಗಾಧತೆಯ ಒಂದೊಂದು ಮುಖವೂ ಅವನಿಗೆ ಗೋಚರವಾಗುತ್ತ ಬಂದಿತ್ತು. ಕಲಿತಷ್ಟೂ ಕಲಿಯುವುದಿದೆ ಎನ್ನುವ ನಿಜ ಹೊಳೆಯುತ್ತ ಬಂದಿತ್ತು. ಸಂಗೀತದಲ್ಲಿ ಕಲಿಯುವಷ್ಟೇ ಕೇಳಿಕೆಯೂ ಮುಖ್ಯ ಎನ್ನುವುದು ಅನುಭವದಿಂದ ವಿಶದಪಡುತ್ತ ಬಂದಿತು.

ಮೈಸೂರಿನಲ್ಲಿ ಎಲ್ಲಿ ಸಂಗೀತ ಕಚೇರಿಗಳಾಗಲಿ ಅವನು ಹೋಗದೆ ಇರುತ್ತಿರಲಿಲ್ಲ. ಸಂಗೀತಗಾರರಲ್ಲಿ ಸಹಜವಾಗಿ ಬೆಳೆದು ಬರುವ ವೃತ್ತಿ ಮಾತ್ಸರ್ಯವನ್ನು ಅವನು ದೂರ ಮಾಡಿದ್ದ. ಇತರರ ಹಾಡಿಕೆಯೆಂದರೆ ಮೂಗು ಮುರಿಯದೆ ಅಲ್ಲಿಗೆ ಹೋಗಿ ಹತ್ತು ಕಣ್ಣಾಗಿ, ನೂರು ಕಿವಿಯಾಗಿ ಶ್ರದ್ಧೆಯಿಂದ ಕುಳಿತು ಕೇಳಿ ಬರುತ್ತಿದ್ದ. ಅವರ ಹಾಡಿಕೆಯ ಶೈಲಿ ವೈಶಿಷ್ಟ್ಯಗಳನ್ನು ಎಚ್ಚರದಿಂದ ಗಮನಿಸುತ್ತಿದ್ದ. ಅದರಿಂದ ಅವನಿಗೆ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಲಾಭವೇ ಆಗುತ್ತ ಬಂದಿತು. ಇತರ ಹಾಡಿಕೆಯಲ್ಲಿ ತನಗೆ ಕಂಡು ಬರುತ್ತಿದ್ದ ವಿಶೇಷಗಳನ್ನು ತನ್ನ ಹಾಡಿಕೆಗೆ ಹೋಲಿಸಿಕೊಂಡು ತಿದ್ದಿಕೊಳ್ಳಲು, ಹೊಸ ಹೊಸ ಮಾರ್ಗಗಳನ್ನು ಪ್ರಯೋಗಿಸಿ ನೋಡಲು, ಈ ಅಭ್ಯಾಸ ಸಹಾಯ ಮಾಡುತ್ತ ಬಂದಿತು.

ಆದರೆ ಅವನು ಬರೀ ಕಲಿಕೆಯಲ್ಲೇ ಕುಳಿತು ಕಾಲ ಕಳೆಯುವಹಾಗಿರಲಿಲ್ಲ.

ಒಪ್ಪೊತ್ತಿನ ಊಟಕ್ಕೆ ತಾಯಿ ನ್ಯೈಮರೆಯುವಂತೆ ದುಡಿಯುತ್ತಿದ್ದರು. ತಾನೇನೋ ವಾರಾನ್ನ ಬಿಟ್ಟು ತುಂಬ ದಿವಸವಾಗಿತ್ತು. ಗುರುಗಳ ಮನೆಯಲ್ಲಿ ಎರಡು ಹೊತ್ತೂ ರಸಕವಳ ಬಿದ್ದುಹೋಗುತ್ತಿತ್ತು. ಆದರೆ ಅಷ್ಟರಿಂದಲೇ ಸಮಸ್ಯೆ ಹರಿಯುವ ಹಾಗಿರಲಿಲ್ಲ. ಒಂದೇ ಸಮನಾಗಿ ಗುರುಗಳಿಗೆ ಭಾರವಾಗುವುದೂ ಚೆನ್ನಾಗಿ ಕಾಣಲಿಲ್ಲ. ವೆಂಕಮ್ಮನವರಿಗೆ ದಿನದಿನಕ್ಕೆ ವಯಸ್ಸಾಗುತ್ತಾ ಬರುತ್ತಿತ್ತೇ ಹೊರತು ಯೌವನ ಬರುತ್ತಿರಲಿಲ್ಲ. ವಿದ್ಯೆ ಕಲಿತು ಒಂದು ಮಟ್ಟಕ್ಕೆ ಬಂದ ಮಗ ಸಂಪಾದಿಸಿ ತಂದುಹಾಕುವುದು ಕರ್ತವ್ಯ ವಾಗಿತ್ತು. ತಾಯಿಯ ಕಷ್ಟವನ್ನು ಅವನು ನೋಡಲಾರದವನಾಗಿದ್ದ.

ನಾಲ್ಕು ಕಾಸು ಸಂಪಾದಿಸಿಕೊಳ್ಳುವುದಕ್ಕಾದರೂ ಅವನು ಒಂದೆರಡು ಪಾಠಗಳನ್ನು ಗೊತ್ತುಮಾಡಿಕೊಳ್ಳಬೇಕಾಗಿತ್ತು. ತಾನೇ ಕಲಿತುಕೊಳ್ಳುವುದು ಅಗಾಧವಾಗಿರುವಾಗ ಇತರರಿಗೆ ಪಾಠ ಹೇಳುವುದು ಅವನಿಗೆ ಸ್ವಲ್ಪವೂ ಇಷ್ಟ ವಿರಲಿಲ್ಲ. ಎಷ್ಟೋ ಮಂದಿ ಕಷ್ಟಪಟ್ಟು ವಿದ್ಯೆ ಕಲಿತು ಬರೀ ಸಂಗೀತದ ಮೇಷ್ಟ ರಾಗಿಯೇ ನಿಂತುಹೋಗುತ್ತಿದ್ದುದನ್ನು ಅವನು ನೋಡಿದ್ದ. ಯಾವುದೋ ಗುರಿಯತ್ತ ಹೊರಟು ಮಧ್ಯೆ ಎಲ್ಲೋ ಒಂದೆರಡು ಗಳಿಗೆ ವಿಶ್ರಮಿಸಿಕೊಳ್ಳಲು ಕುಳಿತವರಿಗೆ ಪುನಃ ಅಲ್ಲಿಂದ ಮುಂದೆ ನಡೆಯಲಾಗದೆ ಆ ಜೀವವೂ ಅದೇ ಅವರ ಬಾಳಿನ ಆಶ್ರಯಸ್ಥಾನವಾಗಿ ಹೋಗುವಂತೆ ಪ್ರತಿಭಾಸಂಪತ್ತಿನಿಂದ ಕೂಡಿದ್ದ ಎಷ್ಟೋ ಮಂದಿ ವಿದ್ವಾಂಸರೂ ಕೂಡ ವಿಧಿಯಿಲ್ಲದೆ ಸನ್ನಿವೇಶದ ಯಂತ್ರಗಳಾಗಿ ಹೋಗಿದ್ದರು.

ಈ ಪರಿಸ್ಥಿತಿಯನ್ನು ಕಲ್ಪಿಸಿಕೊಂಡು ಮಧು ಗಡಗಡನೆ ನಡುಗಿದ. ನಿರ್ಬಾಧಿತವಾಗಿ ಕಲಾರಾಧನೆ ಮಾಡಬೇಕೆಂದು ಸಂಕಲ್ಪ ತೊಟ್ಟ ಅವನಿಗೆ ನಾಲ್ಕು ಕಾಸಿನ ಸಂಪಾದನೆಯೇ ಪರಮ ಪ್ರಯೋಜನವಾಗಿ ತನ್ನ ಗುರಿಯನ್ನು ಮರೆಸುವುದಲ್ಲಾ ಎಂಬ ವಿಷಾದ ಒಳಗೇ ಕೊರೆಯುತ್ತಿತ್ತು.

ಆದರೆ ಸದ್ಯದ ದುರ್ಭರ ಪರಿಸ್ಥಿತಿಯನ್ನು ಸುಧಾರಿಸುವುದಕ್ಕಾದರೂ ಅವನು ಒಂದೆರಡು ಸಣ್ಣ ಪಾಠಗಳನ್ನಿಟ್ಟುಕೊಳ್ಳದೆ ವಿಧಿಯಿರಲಿಲ್ಲ. ಮಧು ಸೂದನನ ಪರಿಸ್ಥಿತಿಯನ್ನು ಚೆನ್ನಾಗಿ ಅರಿತಿದ್ದ ಸಂಜೀವಯ್ಯ ಎರಡು ಮನೆಗಳ ಪಾಠ ಗೊತ್ತುಮಾಡಿಕೊಟ್ಟಿದ್ದ.

ಈ ಮಧ್ಯೆ ರಾಮೋತ್ಸವ ಬಂದಿತು.

ಸಂಗೀತಗಾರರಿಗೂ ಮೈಸೂರಿನ ರಸಿಕ ಜನಕ್ಕೂ ಸಡಗರದ ಕಾಲ. ಎಲ್ಲೆಲ್ಲೂ ಕಚೇರಿಗಳು, ಹರಿಕಥೆಗಳು. ರಾಮಮಂದಿರದಲ್ಲಂತೂ ಭರ್ಜರಿ ಕಚೇರಿಗಳಾಗುತ್ತಿದ್ದವು. ಹೊರಗಿನಿಂದ ಅನೇಕ ವಿದ್ವಾಂಸರು ಮೈಸೂರಿಗೆ ಬಂದಿದ್ದರು. ಒಂದೊಂದು ದಿನ ಒಬ್ಬೊಬ್ಬರ ಸೇವೆ ನಡೆಯುತ್ತಿತ್ತು.

ಮಧುಸೂದನ ಒಂದು ಬೆಳಗ್ಗೆ ಪಾಠಕ್ಕೆ ಹೋಗಿದ್ದು ಮನೆಗೆ ಹಿಂತಿರುಗಿದಾಗ ವೆಂಕಮ್ಮನವರು ಒಂದು ಲಕೋಟೆ ಕೈಯಲ್ಲಿಟ್ಟರು. ಕಾಗದ ಬರೆದಿರುವವರು ಯಾರಿರಬಹುದೆಂದು ಕುತೂಹಲದಿಂದ ಒಡೆದು ನೋಡಿದ. ನಂಜನಗೂಡಿನ ತರುಣ ಸಂಘದ ರಾಮೋತ್ಸವ ಸಮಿತಿಯ ಕಾರ್ಯದರ್ಶಿ ತಮ್ಮ ಊರಿನಲ್ಲಿ ಒಂದು ಕಚೇರಿ ನಡಸಬೇಕೆಂದು ಕೋರಿ ಕಾಗದ ಬರೆದಿದ್ದರು. ಮಧುಸೂದನನಿಗೆ ಅಚ್ಚರಿಯಾಯಿತು. ತನ್ನ ವಿಷಯ ಮೈಸೂರಿನವರಿಗೇ ಹೆಚ್ಚಾಗಿ ತಿಳಿಯದಿರುವಾಗ ನಂಜನಗೂಡಿನ ತರುಣ ಸಂಘದ ವರೆಗೂ ಹೇಗೆ ಹೋಯಿತೆಂಬುದು ಅವನಿಗೆ ಬಿಡಿಸಲಾರದ ಒಗಟಾಯಿತು.

ನಂಜನಗೂಡಿಗೆ ಮಾರನೆಯ ದಿನವೇ ಹೊರಡಬೇಕಾಗಿತ್ತು. ಗುರುಗಳ ಮನೆಗೆ ಹೋಗಿ ವಿಷಯ ವಿಜ್ಞಾಪಿಸಲು ಅವರು ನಸುನಕ್ಕು,

“ಧೈರ್ಯವಾಗಿ ಹೋಗಿ ಬಾ. ನಾಲ್ಕು ಜನದ ಕಣ್ಣಿಗೆ ಬೀಳುವುದೇ ಹೀಗೆ. ಇಂಥ ಅವಕಾಶ ಬಿಡಬಾರದು”

ಎಂದರು.

ಮರುದಿನ ಸಂಜೆ ರೈಲಿನಲ್ಲಿ ನಂಜನಗೂಡಿಗೆ ಬಂದಿಳಿದಾಗ ಸ್ಟೇಷನ್ನಿಗೆ ಸಂಘದ ಕಾರ್ಯದರ್ಶಿಯೂ ಒಬ್ಬಿಬ್ಬರು ಸದಸ್ಯರೂ ಬಂದಿದ್ದರು. ಅವರ ಗುರುತು ಇವನಿಗೆ ಇಲ್ಲವಾದರೂ ಇವನ ಗುರುತು ಅವರಿಗೆ ಸಿಕ್ಕುವುದು ಕಷ್ಟವಾಗಲಿಲ್ಲ. ಕಾರ್ಯದರ್ಶಿ ಸುಬ್ರಹ್ಮಣ್ಯಂ ತಾವೇ ಹತ್ತಿರ ಬಂದು ಮಾತಾಡಿಸಿದರು,

“ನಮಸ್ಕಾರ, ಮಧುಸೂದನರು ನೀವೇ ಅಲ್ಲವೆ ?”

“ಹೌದು, ನೀವು ?....”

“ನಾನೇ ತರುಣ ಸಂಘದ ಕಾರ್ಯದರ್ಶಿ ಸುಬ್ರಹ್ಮಣ್ಯಂ. ಮುಖತಃ ಪರಿಚಯವಿಲ್ಲದಿದ್ದರೂ ನಿಮ್ಮನ್ನು ಬಲ್ಲೆ. ಮೈಸೂರಿನಲ್ಲಿ ಸಂಗೀತ ಸಮ್ಮೇಳನವಾದಾಗ ನೀವು ಹಾಡಿದಿರಿ. ಅವೊತ್ತು ನಮ್ಮಲ್ಲನೇಕರು ಬಂದಿದ್ದೆವು. ಹಾಡಿಕೆ

ನಮಗೆ ತುಂಬ ಮೆಚ್ಚಿಕೆಯಾಯಿತು. ಅವಕಾಶವಾದಾಗ ನಿಮ್ಮನ್ನು ನಮ್ಮ ಸಂಘಕ್ಕೆ ಕರೆಸಬೇಕೆಂದಿದ್ದೆವು. ಆ ಸಂದರ್ಭ ಈಗ ಒದಗಿತು, ಅಷ್ಟೆ."

" ನಾನೇನೂ ಹೇಳಿಕೊಳ್ಳುವಂಥ ವಿದ್ವಾಂಸನಲ್ಲ. ಇನ್ನೂ ವಿದ್ಯಾರ್ಥಿ. ಕಲಿತ ಪಾಠವನ್ನು ಸಭೆಯಲ್ಲಿ ಹಿರಿಯರ ಎದುರಿಗೆ ಒಪ್ಪಿಸಬೇಕಾಗಿ ಬಂದಿತು, ಅಷ್ಟೆ. ಕಚೇರಿಗೆ ನನಗಿಂತ ಹಿರಿಯರಾದ ವಿದ್ವಾಂಸರು ಎಷ್ಟೋ ಜನ ಇರುವಾಗಲೂ ಅವರನ್ನು ಬಿಟ್ಟು ನನ್ನನ್ನು ಕರೆಸಿರುವುದು ನಿಮ್ಮ ಅಭಿಮಾನ."

" ಅದು ನಿಮ್ಮ ವಿನಯದ ಮಾತು. ವಿದ್ಯೆ ಇರುವ ಕಡೆ ವಿನಯ ಇರುತ್ತದೆಂಬುದಕ್ಕೆ ಸಾಮತಿಗೆ ನೀವೇ ಸಾಕ್ಷಿ ನುಡಿದಹಾಗಾಯಿತು. ನಾವಂತೂ ತರುಣ ಕಲಾವಿದರು ಎಲ್ಲಿ ಕಣ್ಣಿಗೆ ಬಿದ್ದರೂ ಅವರಿಗೆ ಉತ್ತೇಜನ ಕೊಡಬೇಕೆಂದಿದ್ದೇವೆ. ನಮ್ಮ ಸಂಘದ ಉದ್ದೇಶಗಳಲ್ಲಿ ಅದೂ ಒಂದು. ಹತ್ತಿರದಲ್ಲೇ ನಿಮ್ಮಂಥ ಕಲಾವಿದರಿರುತ್ತ ದೂರ ಹೋಗಬೇಕೇಕೆ ?"

ಎಂದರು. ಎಲ್ಲರೂ ನಗುತ್ತ ಗಾಡಿಯೇರಿ ಹೊರಟರು.

ದಳವಾಯಿ ಕಟ್ಟಡದಲ್ಲಿ ಸಂಗೀತ ಕಚೇರಿ ಏರ್ಪಡಿಸಿದ್ದರು. ಸೀತಾ ಲಕ್ಷ್ಮಣ ಆಂಜನೇಯ ಸಮೇತನಾದ ರಾಮಚಂದ್ರಮೂರ್ತಿಯ ದೊಡ್ಡ ಪಟವನ್ನು ಇಟ್ಟು ಹೂವುಗಳಿಂದ ಅಲಂಕರಿಸಿದ್ದರು. ಎರಡು ಕಡೆಯೂ ನಂದಾದೀಪಗಳು ಉರಿಯುತ್ತಿದ್ದವು. ವಿಶಾಲವಾದ ಸಭಾಂಗಣ ಶ್ರೋತೃ ವೃಂದದಿಂದ ತುಂಬಿತ್ತು.

ಸಂಘದ ಕಾರ್ಯನಿರ್ವಾಹಕರೊಡನೆ ಮಧುಸೂದನ ಬಂದು ಸಭಾಂಗಣದ ಪಕ್ಕದಲ್ಲಿದ್ದ ರೂಮಿನಲ್ಲಿ ಕುಳಿತ. ಉಪಾಹಾರವಾಯಿತು. ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದ ಬಳಿಕ ಎಲ್ಲರೂ ಸಭಾಂಗಣಕ್ಕೆ ಬಂದರು.

ವೇದಿಕೆಯ ಮೇಲೆ ತಂಬೂರಿಯನ್ನಿಟ್ಟುಕೊಂಡು ಒಬ್ಬ ತರುಣ ಕುಳಿತಿದ್ದ. ಸ್ಥಳದ ವಿದ್ವಾಂಸರಿಬ್ಬರು ಪಕ್ಕವಾದ್ಯಗಳನ್ನು ನುಡಿಸಲು ಸಿದ್ಧರಾಗಿ ಕುಳಿತಿದ್ದರು. ಮಧು ವೇದಿಕೆಯನ್ನೇರಿ ಸಭೆಗೆ ನಮಸ್ಕರಿಸಿ ಕುಳಿತ. ತಂಬೂರಿಯನ್ನು ತಾನೇ ಶ್ರುತಿಮಾಡಿಕೊಂಡು ಹಿಂದೆ ಕುಳಿತಿದ್ದ ತರುಣನ ಕೈಗಿತ್ತ. ಗುರುಗಳಿಗೆ ಮನಸ್ಸಿನಲ್ಲೇ ವಂದಿಸಿ ಕಚೇರಿ ಪ್ರಾರಂಭಿಸಿದ.

ಎರಡು ಘಂಟೆಗಳ ಹೊತ್ತು ದಿವ್ಯವಾದ ಕಚೇರಿ ನಡೆಯಿತು.

ಆಲಾಪನೆಯಲ್ಲಿ ವಿಶಿಷ್ಟವಾದ ಧೋರಣೆ, ಸ್ವರಪ್ರಸ್ತಾರದಲ್ಲಿ ಚೌಕವಾದ

ನಿರ್ಣಯ, ಪಲ್ಲವಿಯಲ್ಲಿನ ಪಾಂಡಿತ್ಯಗಳನ್ನು ಕಂಡು ಸಭಿಕರು ತಲೆದೂಗಿದರು. ಕಚೇರಿಯ ಕೊನೆಯಲ್ಲಿ ಹಾಡಿದ ದೇವರನಾಮುಗಳಂತೂ ಶ್ರೋತೃವೃಂದಕ್ಕೆ ತುಂಬ ಅಚ್ಚುಮೆಚ್ಚಾದವು. ಮಂಗಳ ಹಾಡಿ ಮುಗಿಸಿದಾಗ ಸಭಾಮಂದಿರ ಒಂದೇ ಸಮನೆ ಐದು ನಿಮಿಷ ಚಪ್ಪಾಳೆಯಿಂದ ತುಂಬಿಹೋಯಿತು.

ಸಂಘದ ಅಧ್ಯಕ್ಷರಾದ ಅಮಲ್ದಾರ್ ನರಸಿಂಹಯ್ಯನವರು ವೇದಿಕೆಯ ಮೇಲೆ ಬಂದು ನಿಂತು,

"ಇವೊತ್ತಿನ ದಿವಸ ನಮ್ಮ ಸಂಘದ ಜೀವನದಲ್ಲಿ ತುಂಬ ಮಹತ್ವದ ದಿವಸ, ಮೈಸೂರಿನ ತರುಣ ಗಾಯಕರೊಬ್ಬರನ್ನು ಸನ್ಮಾನಿಸುವ ಹೆಮ್ಮೆಯ ದಿವಸ. ಇಂಥ ಅವಕಾಶಗಳು ನಮಗೆ ಪದೇ ಪದೇ ಬರಬಾರದೇ ಎನ್ನಿಸುತ್ತದೆ. ವಿದ್ವಾನ್ ಮಧುಸೂದನರು ವಯಸ್ಸಿನಲ್ಲಿ ಚಿಕ್ಕವರಾದರೂ ಅಸಾಧಾರಣವಾದ ವಿದ್ವತ್ತನ್ನು ಸಂಪಾದಿಸಿಕೊಂಡಿದ್ದಾರೆ. ಅವರಿಗೆ ಸರಸ್ವತಿಯೇ ಒಲಿದು ಅನುಗ್ರಹಿಸಿದ್ದಾಳೆ. ಅವರ ಗಾನಾಮೃತವನ್ನು ಸವಿದಿರುವ ನಿಮಗೆ ಅದನ್ನು ನಾನು ವಿವರಿಸಿ ಹೇಳಹೊರಡುವುದು ಶುಷ್ಕಪ್ರಯತ್ನವಾದೀತು. ಸಂಗೀತದ ರುಚಿ ಶ್ರವಣೇಂದ್ರಿಯದ ಮೂಲಕ ನಿಮ್ಮ ಮನಸ್ಸಿಗಿಳಿದು ನೀವಿನ್ನೂ ಚಪ್ಪರಿಸುತ್ತಿರುವಾಗ ಅರುಚಿಯಾದ ಭಾಷಣದಿಂದ ಆ ಸವಿಯನ್ನು ಕೆಡಿಸುವುದು ಬೇಡ.

"ವಿದ್ವಾನ್ ಮಧುಸೂದನರಂಥ ಉತ್ಸಾಹಶಾಲಿ ಕಲಾವಿದರು ನಾಡಿಗೇ ಒಂದು ಭೂಷಣ. ಶ್ರೀರಾಮೋತ್ಸವದಂಥ ಪುಣ್ಯ ಸಂದರ್ಭದಲ್ಲಿ ನಮ್ಮ ಮನವಿಯನ್ನು ಮನ್ನಿಸಿ ಅವರು ಬಂದು ಕಚೇರಿ ನಡೆಸಿದುದರಿಂದ ನಮಗೆಲ್ಲಾ ತುಂಬ ಸಂತೋಷವಾಗಿದೆ. ಅವರಿಗೆ ನಾವು ಅರ್ಪಿಸುತ್ತಿರುವ ಈ ಅಲ್ಪ ಕಾಣಿಕೆ ಅವರ ವಿದ್ವತ್ತಿಗೆ ಕಟ್ಟುವ ಬೆಲೆಯಲ್ಲ. ಅದು ಎಂದೆಂದಿಗೂ ಅಮೂಲ್ಯವೇ. ಸಂಘದ ಶಕ್ತಿಯ ಮಿತಿಯನ್ನರಿತು ಅವರು ಮನ್ನಿಸುವರೆಂದು ನಂಬಿದ್ದೇನೆ. ಶ್ರೀರಾಮಚಂದ್ರನು ಅವರಿಗೆ ಮಂಗಳವನ್ನುಂಟುಮಾಡಿ, ಸಂಗೀತ ಕಲೆಗೆ ಇತೋಪ್ಯಧಿಕವಾದ ಸೇವೆ ಅವರಿಂದ ಸಲ್ಲುವಂತೆ ಅನುಗ್ರಹಿಸಲಿ"

ಎಂದು ನುಡಿದು ಮಧಸೂದನನಿಗೆ ಹಾರಹಾಕಿ ಬೆಳ್ಳಿಯ ತಟ್ಟೆಯಲ್ಲಿ ಫಲತಾಂಬೂಲಗಳೊಡನೆ ಕವರಿನಲ್ಲಿ ನೂರು ರೂಪಾಯಿ ನೋಟನ್ನಿಟ್ಟು ಒಪ್ಪಿಸಿದರು.

ಸಭೆಯಲ್ಲಿ ಮತ್ತೆ ಕರತಾಡನವಾಯಿತು.

ಕಾರ್ಯದರ್ಶಿ ಸುಬ್ರಹ್ಮಣ್ಯಂ ಗಾಡಿಯಲ್ಲಿ ಮಧುಸೂದನನನ್ನು ರೈಲ್ವೇ ಸ್ಟೇಷನ್ನಿಗೆ ಕರೆತಂದು, ಇಂಟರ್‌ಕ್ಲಾಸ್ ಟಿಕೆಟ್ ತೆಗೆದುಕೊಟ್ಟು ರೈಲಿನಲ್ಲಿ ಕುಳ್ಳಿರಿಸಿದರು.

ಮಧು ಎಲ್ಲರಿಗೂ ನಮಸ್ಕಾರ ಹೇಳಿ ಮೈಸೂರಿಗೆ ಹಿಂತಿರುಗಿದ.

ರೈಲು ಮೈಸೂರು ತಲುಪಿದೊಡನೆಯೇ ನೇರವಾಗಿ ಗುರುಗಳ ಮನೆಗೇ ಹೋದ. ಊಟವಾಗಿ ಮಲಗಿಕೊಳ್ಳಲು ಸಜ್ಜಾಗುತ್ತಿದ್ದ ಗುರುಗಳು ಶಿಷ್ಯನನ್ನು ಮುಗುಳ್ನಗೆಯಿಂದಲೇ ಸ್ವಾಗತಿಸಿದರು. ಮಧು ಎಲ್ಲವನ್ನೂ ಸಾಂಗವಾಗಿ ಬಿನ್ನವಿಸಿಕೊಂಡು ಫಲತಾಂಬೂಲವನ್ನೂ ನೋಟಿದ್ದ ಕವರನ್ನೂ ಅವರ ಮುಂದಿಟ್ಟು ನಮಸ್ಕರಿಸಿದ. ಗುರುಗಳು ಶಿಷ್ಯನ ತಲೆದಡವಿ ಅವನ ಮುಖವನ್ನು ಒಂದು ಗಳಿಗೆ ವಾತ್ಸಲ್ಯದಿಂದ ದಿಟ್ಟಿಸಿ ನೋಡಿದರು.

"ಏನು, ಈಗಲೇ ನನಗೆ ಗುರುದಕ್ಷಿಣೆ ಕೊಟ್ಟು ಮುಗಿಸಿಬಿಡಬೇಕೆಂದು ನೋಡುತ್ತಿದೀಯಾಪ್ಪ?"

ಎಂದರು. ಮಧು ನಿರುತ್ತರನಾದ. ಅವನ ಮನಸ್ಸಿನಲ್ಲಿ ವಿವಿಧ ಭಾವಗಳ ಒಳತೋಟಿ ನಡೆಯುತ್ತಿತ್ತು. ಸಕಲ ವಿಧದಲ್ಲಿಯೂ ತನ್ನನ್ನು ಸಾಕಿ ಸಲಹಿ ಮುಂದಕ್ಕೆ ತರುತ್ತಿರುವ ಗುರುಗಳಿಗೆ ಒಂದು ಅಲ್ಪ ಕಾಣಿಕೆ ಒಪ್ಪಿಸುವ ಅವಕಾಶ ಸಿಕ್ಕಿತಲ್ಲಾ ಎಂದು ಒಂದು ಕಡೆ ಹಿಗ್ಗು, ಗುರುಗಳ ವಿಚಾರದಲ್ಲಿ ತನ್ನದು ಅವಿನಯವಾಯಿತೇ, ಅಪಚಾರವಾಯಿತೇ ಎಂದು ಮತ್ತೊಂದು ಕಡೆ ಭೀತಿ. ಅವನ ಕಸಿವಿಸಿ ಅವರಿಗೆ ಅರ್ಥವಾಗಿರಬೇಕು. ಅವನ ಮನಸ್ಸಿನ ಶಂಕೆಯನ್ನು ದೂರ ಮಾಡುವಂತೆ,

"ಇದು ನನಗಲ್ಲ, ನಿನಗೆ. ಇದಕ್ಕೆ ನನಗಿಂತ ಹೆಚ್ಚಿನ ಪಾತ್ರರು ನಿಮ್ಮ ತಾಯಿ. ಅವರಿಗೊಪ್ಪಿಸಿ, ಅವರ ಆಶೀರ್ವಾದ ಪಡೆದುಕೋ"

ಎಂದರು. ಅವರ ಧ್ವನಿ ಭಾರವಾಗಿತ್ತು; ಶಿಷ್ಯನ ಉತ್ಕರ್ಷ, ವಿನಯದ ಸವಿಯಿಂದ ಅವರ ಮನಸ್ಸು ಆರ್ದ್ರವಾಗಿತ್ತು.

ಮಧು ಹೆಚ್ಚು ಮಾತಾಡದೆ ಕವರನ್ನು ಜೇಬಿಗೆ ಸೇರಿಸಿ ಮನೆಯ ಕಡೆ ಹೊರಟುಬಿಟ್ಟ.

ಹತ್ತು ಘಂಟೆಯ ಹೊತ್ತಾಗಿತ್ತು. ಮಗ ರಾತ್ರಿ ರೈಲಿನಲ್ಲೇ ಬರುತ್ತಾನೋ,

ಇಲ್ಲ ಬೆಳಗ್ಗೆ ಬರುತ್ತಾನೋ ಎಂದು ಯೋಚಿಸುತ್ತ ದಿಂಬಿಗೆ ವೆಂಕಮ್ಮನವರು ತಲೆಕೊಡುವುದಕ್ಕೂ ಮಧು ಬಂದು ಬಾಗಿಲು ತಟ್ಟುವುದಕ್ಕೂ ಸರಿಹೋಯಿತು.

"ಬಂದೆಯಾಪ್ಪಾ, ಬಾ"

ಎಂದು ಸ್ವಾಗತಿಸಿದರು. ಮಧು ಕುತ್ತಿಗೆಯಲ್ಲಿದ್ದ ಶಲ್ಯ ತೆಗೆದು ಗೂಟಕ್ಕೆ ತಗಲಿ ಹಾಕಿ, ತಾಯಿಯ ಮುಂದೆ ಕುಳಿತು ಜೇಬಿನಲ್ಲಿದ್ದ ಕವರನ್ನು ತೆಗೆದು ಅವರ ಮುಂದೆ ಹಾಕಿದ.

"ಅಮ್ಮಾ, ಅದರಲ್ಲೇನಿದೆ ನೋಡು."

ವೆಂಕಮ್ಮನವರು ಕವರನ್ನು ತೆಗೆದು ನೋಡಿದರು. ಒಳಗೆ ಹತ್ತು ರೂಪಾಯಿಗಳ ಹತ್ತು ನೋಟು. ಅವರ ಕಣ್ಣು ಆಶ್ಚರ್ಯದಿಂದ ಅರಳಿತು.

"ಇದೇನೋ ಮಗು?"

"ಇವತ್ತಿನ ಕಚೇರಿಯ ಸಂಭಾವನೆಯಮ್ಮಾ, ನಿನಗೆ."

"ನನಗೆ? ನನಗ್ಯಾಕೋ ಕಂದಾ, ನೀನೇ ಇಟ್ಟುಕೋ ನನ್ನಪ್ಪ."

"ಹಾಗಾದರೆ ನಿನಗೇನೂ ಬೇಡ ಅನ್ನು?"

"ನನಗೇನು ಬೇಕಾಗಿದೆಯಪ್ಪಾ? ಮನೆಗೊಂದಿಷ್ಟು ಸಾಮಾನು ತಂದು ಹಾಕಿ, ಬಾಡಿಗೆ ಬಾಕಿ ತೀರಿಸಿದರಾಯಿತು. ಹೊರಗಡೆ ಓಡಾಡಬೇಕಾದವನು ನೀನು, ಬಟ್ಟೆಬರೆ ಮಾಡಿಕೊಂಡು ಭೂಷಣವಾಗಿದ್ದರೆ ಸಾಕು. ಮನೆಯಲ್ಲಿ ಬಿದ್ದಿರುವವಳು ನಾನು ಹೇಗಿದ್ದರೂ ಆಯಿತು."

"ನಾನು ಭೂಷಣವಾಗಿರುತೀನಿ. ನೀನು ಹೀಗೇ ಕೋರಿ ಸುತ್ತಿಕೊಂಡು ಬಿಂಗಿಯ ಹಾಗೆ ನಿಂತಿರು. ಮನೆಗೆ ಬರುವರು ಹೋಗುವರು ಇರುತಾರೆ. ಚೆನ್ನಾಗಿ ಮರ್ಯಾದೆ ಬರತ್ತೆ."

ಆ ಮಾತು ವೆಂಕಮ್ಮನವರ ಬಾಯಿ ಮುಚ್ಚಿಸಿತು. ಅದಕ್ಕೆ ಅವರಲ್ಲಿ ಉತ್ತರವಿರಲಿಲ್ಲ.

ಬೆಳಗ್ಗೆ ಎದ್ದವನೇ ಮಧುಸೂದನ ತಾಯಿಯನ್ನು ಬಲಾತ್ಕಾರವಾಗಿ ಹೊರಡಿಸಿಕೊಂಡು ಕಾಡಯ್ಯನವರ ಜವಳಿ ಅಂಗಡಿ ಹೋಗಿ ಮೂವತ್ತು ರೂಪಾಯಿನಲ್ಲಿ ಎರಡು ಸೀರೆ, ಹತ್ತು ರೂಪಾಯಿನಲ್ಲಿ ತನಗೆ ಒಂದು ಜರತಾರಿ ಶಲ್ಯ ತೆಗೆಸಿ ಖರೀದಿ ಮಾಡಿದ. ಬಟ್ಟೆ ಅಂಗಡಿಗೆ ಹೋಗಿ ತನಗೆ ಬೇಕಾದ ಇಟ್ಟಿ ಪಂಚೆಗಳನ್ನು ತೆಗೆದುಕೊಂಡ. ಒಂದು ಜೊತೆ ಷರಟು ಹೊಲಿಯುವುದಕ್ಕೆ

ಹಾಕಿದ. ಟಾಂಗಾ ಗೊತ್ತುಮಾಡಿಕೊಂಡು ಜವಳಿಯನ್ನು ಅದರಲ್ಲಿಟ್ಟು ತಾಯಿಯನ್ನೂ ಕೂಡಿಸಿಕೊಂಡು ಮನೆಗೆ ಬಂದ. ಎಲ್ಲಾ ಖರ್ಚಾಗಿ ಮೂವತ್ತು ರೂಪಾಯಿ ಉಳಿದಿತ್ತು. ತನ್ನ ಸ್ವಂತಕ್ಕೆ ಐದು ರೂಪಾಯಿ ಇಟ್ಟುಕೊಂಡು ಉಳಿದ ಇಪ್ಪತ್ತೈದು ರೂಪಾಯಿಯನ್ನು ಮನೆಯ ವೆಚ್ಚಕ್ಕೆ ತಾಯಿಯ ಕೈಯಲ್ಲಿ ಹಾಕಿದ.

ನಿತ್ಯಯಾತ್ರೆಗೆ ಹೋಗಿ ಹಿಂದಿರುಗುತ್ತಿದ್ದ ದಾಸರು ಆಚಾರ್ಯರ ಮನೆಯ ಮುಂದೆ ಗಾಡಿ ಬಂದು ನಿಂತದ್ದನ್ನು ದೂರದಿಂದಲೇ ನೋಡಿ ಸಮಾಚಾರ ತಿಳಿದುಕೊಳ್ಳುವ ಕುತೂಹಲದಿಂದ ತಂಬೂರಿ ತೂಗಾಡುತ್ತಿದ್ದು ದನ್ನೂ ಗಮನಿಸದೆ, ದಾಪುಗುಲು ಹಾಕಿಕೊಂಡು, ಮೇಲುಸಿರು ಬಿಡುತ್ತ ಬಂದರು. ಚಾಪೆಯ ಮೇಲೆ ಜವಳಿ ಗಂಟು ಇಟ್ಟದ್ದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ವೆಂಕಮ್ಮನವರು ಎಲ್ಲವನ್ನೂ ವಿಶದವಾಗಿ ನಿರೂಪಿಸಿದರು. ದಾಸರ ಮುಖ ಊರಗಲವಾಯಿತು.

"ದೇವರು ಕಣ್ಣು ಬಿಟ್ಟು ನೋಡುತ್ತಿದಾನಮ್ಮಾ."

"ಎಲ್ಲಾ ನಿಮ್ಮ ಆಶೀರ್ವಾದ. ನೀವು ಕೈಹಿಡಿಯದಿದ್ದರೆ ಅವನು ಇಷ್ಟಾದರೂ ಮುಂದಕ್ಕೆ ಬರುತ್ತಿದ್ದನೋ ಇಲ್ಲವೋ ?"

"ದೇವರ ಸಹಾಯದ ಮುಂದೆ ಯಾರ ಸಹಾಯ ಬೇಕು, ತಾಯಿ ? ಮನುಷ್ಯ ನಿಮಿತ್ತ ಮಾತ್ರ. ಎಲ್ಲಾ ಅವನು ನಿಂತುಕೊಂಡು ನಡೆಸುತ್ತಾನೆ"

ಎಂದು ನುಡಿದು ಸಂತೋಷದ ಸುದ್ದಿಯನ್ನು ಹೆಂಡತಿಗೆ ತಿಳಿಸಲು ದಾಸರು ತೆರಳಿದರು. ಅವರು ಹೊರಟುಹೋದ ಮೇಲೆ ವೆಂಕಮ್ಮನವರು,

"ಮಧೂ, ದಾಸರನ್ನೂ ನರಸಕ್ಕನನ್ನೂ ನಾಳೆ ನಮ್ಮ ಮನೆಗೇ ಊಟಕ್ಕೆ ಕರೆಯಬೇಕು, ಕಣೋ"

ಎಂದರು.

"ಏನಮ್ಮ ನಾಳೆ ವಿಶೇಷ ?"

"ಏನೂ ಇಲ್ಲಪ್ಪಾ. ಅವರು ನಮ್ಮ ಹಿತಚಿಂತಕರು; ಕಷ್ಟ ಸುಖಕ್ಕೆ ಆಗತಕ್ಕವರು. ಎಷ್ಟೋ ಆಸರೆಯಾಗೂ ಇದಾರೆ. ಅವರನ್ನು ನಾಳೆ ಊಟಕ್ಕೆ ಕರೆದು ಒಂದು ತೊವ್ವೆ ಪಾಯಸದ ಅಡುಗೆ ಮಾಡಿ ಬಡಿಸಿದರೆ ಗಂಡಹೆಂಡತಿ ಎಷ್ಟೋ ಸಂತೋಷಪಟ್ಟುಕೊಳ್ಳುತ್ತಾರೆ. ಅದಕ್ಕೇ ಹೇಳಿದೆ."

"ನಿನಗೆ ಹೇಗೆ ತೋರತ್ತೋ ಹಾಗೆ ಮಾಡಮ್ಮ, ಇದಕ್ಕೆಲ್ಲಾ ನನ್ನ ಕೇಳಬೇಕೆ ?"

ಎಂದು ಮಧು ಉತ್ತರ ಕೊಟ್ಟ.

ಅವನ ಬುದ್ಧಿ ಬೇರೊಂದು ಸಮಸ್ಯೆಯನ್ನು ಬಿಡಿಸಲು ತೊಡಗಿತ್ತು.

ತನ್ನ ಭವಿಷ್ಯ, ತಾಯಿಯ ಹಿತಚಿಂತನೆ ಅವನಿಗೆ ಮುಖ್ಯ ಪ್ರಶ್ನೆಯಾಗಿತ್ತು. ಪಾಠದಿಂದ ಬರುತ್ತಿದ್ದ ನಲವತ್ತು–ಐವತ್ತು ರೂಪಾಯಿ ಇಬ್ಬರ ಜೀವನಕ್ಕೆ ಹಾಗೂ ಹೀಗೂ ಸಾಕಾಗುತ್ತಿತ್ತು. ಹೀಗೆ ಅಲ್ಲೊಂದು ಇಲ್ಲೊಂದು ಕಚೇರಿಯಾದಾಗ ಕೈಗೆ ನಾಲ್ಕು ಕಾಸು ಹೆಚ್ಚಾಗಿ ಬರುತ್ತಿತ್ತು, ತಾಯಿ ಕೂಲಿ ನಾಲಿ ಮಾಡುವುದನ್ನು ನಿಲ್ಲಿಸಿಬಿಡಬೇಕೆಂದು ಎಷ್ಟೋ ದಿವಸಗಳ ಹಿಂದೆಯೇ ಹೇಳಿದ್ದ. ಆದರೆ ದುಡಿದು ಅಭ್ಯಾಸವಾದ ಎತ್ತು ನೊಗದ ಭಾರವನ್ನೇ ಬಯಸುವ ಹಾಗೆ ದುಡಿತ ಮೈಗಂಟಿದ್ದ ವೆಂಕಮ್ಮ ಮಗನಿಗೆ ಕಂಡೂ ಕಾಣದ ಹಾಗೆ ಅವಕಾಶ ಸಿಕ್ಕಿದಾಗ ಅವಲಕ್ಕಿ ಬತ್ತ ಹಾಕಿದವರ ಮನೆಗೋ, ಮೆಣಸಿನ ಪುಡಿ ಮಾಡಿಸುತ್ತಿದ್ದವರ ಮನೆಗೋ ಹೋಗಿಬರುತ್ತಿದ್ದರು.

ಅದರಿಂದ ಅವನ ಮನಸ್ಸು ತುಂಬ ಮುಖ ಖಿನ್ನವಾಗಿತ್ತು. ತನಗೆ ಬರುತ್ತಿದ್ದ ದುಡ್ಡೆಲ್ಲವನ್ನೂ ಅವನ ತಾಯಿಯ ಕೈಗೇ ಹಾಕಿಬಿಡುತ್ತಿದ್ದ. ಅವರು ಕೊಡುವವರಿಗೆಲ್ಲಾ ಕೊಟ್ಟು, ಅಂಗಡಿ ಸಾಮಾನು ಜಾತಾ ಬಾಕಿಯನ್ನು ಒಂದು ಕಾಸೂ ಪೋಲು ಮಾಡದೆ ಒಂದು ಹಿತ್ತಾಳೆ ಡಬ್ಬಿಯಲ್ಲಿ ಕೂಡಿಡುತ್ತಿದ್ದರು. ಗಂಡ ಸತ್ತಮೇಲೆ ಕಂಡವರ ಕೈಬಾಯಿಗೆ ಜೋತುಬಿದ್ದು ದುಡ್ಡಿನ ಬೆಲೆ ಏನೆಂಬುದು ಆಕೆಗೆ ಚೆನ್ನಾಗಿ ಮನದಟ್ಟಾಗಿತ್ತು. ಆ ಅನುಭವ ಕೈಗೆ ಎರಡು ಕಾಸು ಬರುವುದಕ್ಕಾರಂಭವಾದ ಮೇಲೂ ಮಾಸಿರಲಿಲ್ಲ.

ವೆಂಕಮ್ಮನವರು ಹೀಗೆ ಹೊಟ್ಟೆ ಬಟ್ಟೆ ಕಟ್ಟುವುದು ಮಧುಸೂದನನಿಗೆ ಇಷ್ಟವಿರಲಿಲ್ಲ. ಕಾಲಸನ್ನಿವೇಶಗಳಿಗೆ ತಕ್ಕ ಹಾಗೆ ಸುಧಾರಿಸಿಕೊಳ್ಳದಿದ್ದರೆ ಮರ್ಯಾದೆ ಬರುವುದಿಲ್ಲವೆಂದು ಅವನಿಗೆ ಮನವರಿಕೆಯಾಗಿತ್ತು. ಮನೆಗೆ ಬಂದು ಹೋಗುವವರ ಸಂಖ್ಯೆ ಹೆಚ್ಚಾಗುತ್ತಿತ್ತು. ಸ್ನೇಹಿತರನ್ನೂ ಶಿಷ್ಯರನ್ನೂ ಕೂಡಿಸಲು ಸರಿಯಾದ ಸ್ಥಳವಿರಲಿಲ್ಲ. ಒಬ್ಬಿಬ್ಬರು ಹುಡುಗರು ಪಾಠಕ್ಕೆ ಮನೆಗೇ ಬರುತ್ತಿದ್ದರು. ಮಧು ಹೊರಗೆ ಪಾಠಕ್ಕೆ ಹೋಗದಿದ್ದಾಗ ಮನೆಯಲ್ಲೇ ಕುಳಿತು ಅಭ್ಯಾಸ ಮಾಡಿಕೊಳ್ಳಬೇಕಾಗಿತ್ತು.

ಮನೆ ಯಾವುದಕ್ಕೂ ಸಾಲದು. ಹಿಂದಿನ ಸಂಗತಿ ಬೇರೆ. ಮೂರು ಜೀವಗಳಿಗೆ ಆಗ ಈ ಗೂಡೇ ನಾಕಾಗಿತ್ತು. ಆದರೆ ಈಗ ಪರಿಸ್ಥಿತಿ ಬದಲಾಯಿಸಿತ್ತು. ಅದಕ್ಕೆ ಹೊಂದಿಕೊಂಡು ಹೋಗದಿದ್ದರೆ ಜನದಲ್ಲಿ ಗಣ್ಯತೆ ಬರುವುದಿಲ್ಲವೆಂದು ಅವನಿಗೆ ಚೆನ್ನಾಗಿ ತಿಳಿದಿತ್ತು. ಸ್ವಲ್ಪ ಅನುಕೂಲವಾದ, ದೊಡ್ಡದಾದ ಮನೆ ನೋಡಬೇಕೆಂದು ಅವನು ಯೋಚಿಸುತ್ತಿದ್ದ.

ಅವನ ವೇಷಭೂಷಣಗಳಲ್ಲೂ ಕೆಲವು ಮಾರ್ಪಾಡುಗಳಾಗುವುದು ಅನಿವಾರ್ಯವಾಗಿತ್ತು. ಅಪ್ಪನ ಕಾಲದ ತಲೆಯ ಮೇಲಿನ ಚಂಡಿಕೆ ಹೋಗಿ ಕ್ರಾಪು ಬಂದಿತ್ತು. ಹಣೆಗೊಂದು ಚಿಹ್ನೆಯಿದ್ದರೆ ಸಾಕೆಂದು ಹಿರಿಯರ ಭಯಕ್ಕೆ ಯದ್ವಾತದ್ವಾ ಹಚ್ಚಿಕೊಳ್ಳುತ್ತಿದ್ದ ಅಕ್ಷತೆ ಮಾಯವಾಗಿ ಅದರ ಸ್ಥಳದಲ್ಲಿ ಚುಕ್ಕಿ ಬಟ್ಟು ಬಂದಿತ್ತು. ತುಂಡು ಸೇರಿಸಿ ಹೊಲಿದಿರುತ್ತಿದ್ದ ಪಂಚೆ, ತೇಪೆ ಹಾಕಿದ ಬನೀನು ಹೋಗಿ ಶುಭ್ರವಾಗಿ ಒಗೆದ ಧೋತರ, ಮಲ್ಲು ಜುಬ್ಬ, ಜರತಾರಿಯ ಶಲ್ಯಗಳು ಬಂದಿದ್ದವು.

ಸಮಾಜದಲ್ಲಿ ತಲೆಯೆತ್ತಿ ನಿಂತು ಬದುಕಬೇಕಾದರೆ ಎಷ್ಟು ಹೋರಾಟ, ಎಷ್ಟು ಸನ್ನಾಹ ಅಗತ್ಯವೆಂಬುದು ಅವನಿಗೆ ಈಗೀಗ ಚೆನ್ನಾಗಿ ಅರ್ಥವಾಗತೊಡಗಿತ್ತು.

ಈ ವ್ಯತ್ಯಸ್ತ ಪರಿಸ್ಥಿತಿಗೆ ತಾಯಿಯ ಮನಸ್ಸನ್ನೂ ಒಗ್ಗಿಸಿ ಬದಲಾವಣೆಗಳನ್ನು ಮಾಡಿಕೊಳ್ಳುವುದು ಅಗತ್ಯವಾಗಿತ್ತು.

ಅವನ ಬುದ್ಧಿ ಈ ಪ್ರಶ್ನೆಗಳಿಗೆಲ್ಲ ಯಥೋಚಿತ ಪರಿಹಾರ ಹುಡುಕುವುದಕ್ಕೆ ಆರಂಭಿಸಿತು.

## ೧೨

ರುಕ್ಮಿಣೀದೇವಿಯ ಬಳಿ ಕಲಿತುಕೊಂಡ ನಾಟ್ಯವನ್ನೇ ರೂಢಿಸಿಕೊಂಡಿದ್ದರೆ ಸಾಕಾಗಿತ್ತಾದರೂ ಲಲಿತನಿಗೆ ಅಷ್ಟರಿಂದಲೇ ತೃಪ್ತಿಯಾಗುವಂತಿರಲಿಲ್ಲ. ಅವಳಿಗೆ ಪಂದನಲ್ಲೂರಿಗೆ ಹೋಗುವ ಚಪಲ ಬಲಿಯಿತು. ದಕ್ಷಿಣದಲ್ಲಿ ನಾಟ್ಯಾಭ್ಯಾಸ ಮಾಡುತ್ತಿದ್ದ ಹಲವರಿಗೆ ಪಂದನಲ್ಲೂರಿನ ಯಾತ್ರೆ ಮಾಡದಿದ್ದರೆ ತಮ್ಮ ವಿದ್ಯೆ ಪೂರ್ಣವಾಗುವುದಿಲ್ಲವೆಂಬ ಭಾವನೆ ಬೆಳೆದುಬಿಟ್ಟಿತ್ತು. ಭರತ ನಾಟ್ಯದಲ್ಲಿ ಮೀನಾಕ್ಷಿ ಸುಂದರಂ ಪಿಳ್ಳೆಯವರ ಶುದ್ಧ ಸಂಪ್ರದಾಯವೂ ಈ ಆಕರ್ಷಣೆಗೆ ಸ್ವಲ್ಪ ಮಟ್ಟಿಗೆ ಕಾರಣವಾಗಿತ್ತು. ನಾಟ್ಯಕಲೆಯ ವಿಚಾರದಲ್ಲಿ ಜನತೆಗಿದ್ದ ಅನಾದರ ಕ್ರಮೇಣ ಮರೆಯಾಗಿ, ಅಭಿಮಾನ ಮತ್ತೆ ಮೂಡುತ್ತಿದೆ ಯೆಂಬುದನ್ನು ನಾಡಿನ ನಾನಾ ಭಾಗಗಳಲ್ಲಿ ನಡೆಯುತ್ತಿದ್ದ ನೃತ್ಯಪ್ರದರ್ಶನಗಳು ಸಾರಿ ಹೇಳುತ್ತಿದ್ದವು. ಕಲಿಯುವವರ ಸಂಖ್ಯೆ ಹೆಚ್ಚಾದಂತೆ ನೋಡುವವರ ಸಂಖ್ಯೆಯೂ ಹೆಚ್ಚಾಗಿತ್ತು. ಹೆಸರಾಂತ ನಾಟ್ಯಾಚಾರ್ಯ ಪಿಳ್ಳೆಯವರ ಶಿಷ್ಯರೆಂದು ಹೇಳಿಕೊಳ್ಳುವುದೇ ಅನೇಕರಿಗೆ ಹೆಮ್ಮೆಯ ವಿಚಾರವಾಗಿತ್ತು.

ನಾಟ್ಯಪದ್ಧತಿಯಲ್ಲಿ ದೇಶವಿದೇಶ ಪದ್ಧತಿಗಳು ಬೆರೆತು ಹೋಗಿ ಒಂದ ನ್ನೊಂದನ್ನು ಪ್ರತ್ಯೇಕವಾಗಿ ಗುರುತಿಸುವುದೇ ಕಷ್ಟವಾಗಿತ್ತು. ಜನರಂಜನೆಗಾಗಿ ನೃತ್ಯದ ಬೇರೆ ಬೇರೆ ಸಂಪ್ರದಾಯಗಳನ್ನು ಮಿಶ್ರಮಾಡುವುದು ವಾಡಿಕೆ ಯಾಗಿತ್ತು. ಕಥಕ್ಕಳಿ, ಕಥಕ್, ಮಣಿಪುರಿ ನೃತ್ಯಸಂಪ್ರದಾಯಗಳು ಪ್ರಾದೇಶಿಕ ವೈಶಿಷ್ಟ್ಯವನ್ನು ಬೆಳಸಿಕೊಂಡಿದ್ದವಾದರೂ ಅವುಗಳನ್ನೆಲ್ಲ ಬೆರಸಿದ

ಒಂದು ಕಲಸು ಮೇಲೋಗರವನ್ನು ನಾಟ್ಯವೆಂದು ತೋರಿಸುವುದನ್ನು ಪ್ರಾಚೀನ ಸಂಪ್ರದಾಯದ ಅನೇಕ ವಿದ್ವಾಂಸರು ಒಪ್ಪುತ್ತಿರಲಿಲ್ಲ.

ಭರತನಾಟ್ಯವನ್ನು ಅದರ ಶುದ್ಧರೂಪದಲ್ಲಿಯೇ ಪ್ರದರ್ಶಿಸಬೇಕೆಂದು ಹೇಳುವ, ಅದಕ್ಕಾಗಿ ಯಾವಜ್ಜೀವವೂ ದುಡಿಯುವ ಪುಣ್ಯಾತ್ಮರು ಒಬ್ಬರಿಬ್ಬರಿದ್ದರು. ತಂಜಾವೂರು ಕಡೆ ಬಾಲಸರಸ್ವತಿಯವರ ಹೆಸರೂ ಮೈಸೂರಿನಲ್ಲಿ ಜಟ್ಟಿ ತಾಯಮ್ಮನವರ ಹೆಸರೂ ಮನೆಮಾತಾಗಿತ್ತು. ಕಣಿವೆ ಕೆಳಗಿನ ಸಂಪ್ರದಾಯಕ್ಕೆ ಭಿನ್ನವಾದ ಕರ್ಣಾಟಕ ಪದ್ಧತಿಯೆಂದು ಮೈಸೂರಿನಲ್ಲಿ ಬೆಳೆಯುತ್ತಿತ್ತು. ತಾಯಮ್ಮನವರು ಅನೇಕ ಶಿಷ್ಯ ಶಿಷ್ಯೆಯರಿಗೆ ವಿದ್ಯಾದಾನ ಮಾಡಿ ಕೃತಾರ್ಥರಾಗಿದ್ದರು.

ಪಂದನಲ್ಲೂರಿನ ಪಿಳ್ಳೆಯವರಂತೂ ಆ ಕ್ಷೇತ್ರದಲ್ಲಿ ಅವರಿಗೆ ಸಾಟಿಯಿಲ್ಲ ಎನ್ನುವ ಹಾಗೆ ಏಕಮೇವಾದ್ವಿತೀಯರಾಗಿದ್ದರು. ಅವರ ಶಾಸ್ತ್ರಜ್ಞಾನ ಅದ್ಭುತವಾಗಿತ್ತು. ಶಿಷ್ಯರಿಗೆ ಪಾಠ ಹೇಳಿಕೊಡುವುದರಲ್ಲಿ, ನಾಟ್ಯದ ಸೂಕ್ಷ್ಮಾತಿ ಸೂಕ್ಷ್ಮ ಪ್ರಭೇದಗಳನ್ನು ಕಲಿಸಿಕೊಡುವುದರಲ್ಲಿ ಪಿಳ್ಳೆಯವರು ವಹಿಸುತ್ತಿದ್ದ ಆಸಕ್ತಿ ಎಂಥವರಿಗಾದರೂ ಅಚ್ಚರಿಯನ್ನುಂಟುಮಾಡುವ ಹಾಗಿತ್ತು. ಅವರ ಕೈಯಲ್ಲಿ ತಯಾರಾಗಿ ಬಂದವರು ಸಿದ್ಧಿಯ ಸೋಪಾನವನ್ನು ಹತ್ತಿದಹಾಗೆಯೇ ಎಂಬ ನಂಬಿಕೆ ಸಹಜವಾಗಿ ನಾಟ್ಯಪ್ರೇಮಿಗಳಲ್ಲಿ ಬೇರೂರಿತ್ತು. ದಕ್ಷಿಣದ ನಾಟ್ಯಾಭ್ಯಾಸಿಗಳು ಪಂದನಲ್ಲೂರಿಗೆ ಯಾತ್ರೆ ಹೋಗುವುದು ವಾಡಿಕೆಯಾಗಿತ್ತು.

ಮದ್ರಾಸಿನ ಸರೋಜಿನಿ, ಕೊಯಮತ್ತೂರು ಪದ್ಮಾವತಿ, ತಂಜಾವೂರು ಸುಬ್ಬಲಕ್ಷ್ಮಿ ಮುಂತಾದವರ ನಾಟ್ಯಪ್ರದರ್ಶನಗಳನ್ನು ನೋಡಿ ಬೆರಗಾಗಿದ್ದ ಲಲಿತನಿಗೆ ಅವರು ಪಂದನಲ್ಲೂರು ಪಿಳ್ಳೆಯವರ ಶಿಷ್ಯರೆಂದು ಕೇಳಿದ ಮೇಲೆ ನಾಟ್ಯದ ಗೀಳು ಇನ್ನೂ ಬಲವಾಯಿತು. ಮೈಸೂರು, ತಂಜಾವೂರು, ಪಂದನಲ್ಲೂರುಗಳಲ್ಲಿ ಯಾವ ಒಂದು ಕಡೆಗಾದರೂ ಹೋಗಬಹುದೆಂಬ ವಿಷಯಕ್ಕೇನೋ ತಾಯಿ ತಂದೆಗಳ ಅನುಮತಿ ಸಿಕ್ಕಿತ್ತು. ಮಗಳನ್ನು ಕಳಿಸಲು ಮೀನಾಕ್ಷಮ್ಮ ಮೊದಲು ತಕರಾರು ಮಾಡಿದ್ದರಾದರೂ ಗಂಡ-ಮಗಳ ಬಲವಂತಕ್ಕೆ ಅವರು ಒಪ್ಪಿಕೊಳ್ಳಲೇಬೇಕಾಗಿಬಂದಿತು. ಅತ್ತ ಶಿವಸ್ವಾಮಿಯೂ ಇಂಗ್ಲೆಂಡಿನಲ್ಲಿ ಹೋಗಿ ಕುಳಿತು, ಇತ್ತ ಲಲಿತನೂ ಪಂದನಲ್ಲೂರಿಗೆ ಹೋಗಿಬಿಟ್ಟರೆ ಮಕ್ಕಳನ್ನು ಬಿಟ್ಟು ಮನೆಯಲ್ಲಿ ತಾವಿಬ್ಬರೇ ಕುಳಿತು ನೊಣ ಜಾಡಿಸುವ

ಕೆಲಸ ದಂಪತಿಗಳಿಗೆ ಪ್ರಿಯವಾಗಿರಲಿಲ್ಲ. ಆದರೆ ಮಗಳ ಕಲಾ ಶಿಕ್ಷಣಕ್ಕೆ ಸಾಧ್ಯವಾದ ರೀತಿಯಲ್ಲೆಲ್ಲಾ ಪ್ರೋತ್ಸಾಹ ಕೊಡಬೇಕೆಂಬ ನಟರಾಜ ಅಯ್ಯರರ ಸಂಕಲ್ಪ ಮಗಳ ಅಲ್ಪಕಾಲದ ಅಗಲಿಕೆಯನ್ನು ಸಹಿಸುವುದಕ್ಕೆ ಅವರ ಮನಸ್ಸನ್ನು ಅನುಗೊಳಿಸಿತ್ತು.

ಮನೆಯಲ್ಲಿ ಹೆಂಡತಿ, ಮಗಳೊಡನೆ ಸಮಾಲೋಚನೆ ನಡಸಿದ್ದ ಅಯ್ಯರರು ಗೆಳೆಯರಾದ ಸ್ವಾಮಿನಾಥನ್, ಕೇಶವ ಪೈರವರ ಸಲಹೆ ತೆಗೆದುಕೊಳ್ಳದೆಯೂ ಇರಲಿಲ್ಲ. ಎಲ್ಲರೂ ಅಳೆದು, ಸುರಿದು, ತೂಗಿ ನೋಡಿದ ಮೇಲೆ ಲಲಿತ ಒಂದು ವರ್ಷದ ಮಟ್ಟಿಗೆ ಪಂದನಲ್ಲೂರಿಗೇ ಹೋಗಿಬರುವುದೆಂದು ತೀರ್ಮಾನವಾಯಿತು. ಸ್ವಾಮಿನಾಥನ್ನರ ದೂರದ ಸಂಬಂಧಿ ವಿಶ್ವನಾಥನ್ ತಂಜಾವೂರಿನಲ್ಲಿ ನೆಲಸಿದ್ದರು. ಅಲ್ಲಿ ಅವರ ತೋಟ ತುಡಿಗೆಗಳಿದ್ದವು. ಆಢ್ಯ ಜಮೀನ್ದಾರರೆನ್ನಿಸಿದ ಅವರ ಪ್ರಭಾವ ಆ ಪ್ರಾಂತದಲ್ಲಿ ವಿಶೇಷವಾಗಿ ಹರಡಿತ್ತು. ಸ್ವಾಮಿನಾಥನ್ ಅವರ ನೆರವು ಕೋರಿದರು. ಪಿಳ್ಳೆಯವರ ಹತ್ತಿರ ಲಲಿತನ ನಾಟ್ಯಾಭ್ಯಾಸದ ವಿಚಾರ ಚರ್ಚಿಸಿ, ಅಗತ್ಯವಾದರೆ ತಕ್ಕಮಟ್ಟಿನ ಪ್ರಭಾವವನ್ನೂ ಬೀರಿ, ಫಲಿತಾಂಶ ತಿಳಿಸಬೇಕೆಂದು ಸ್ವಾಮಿನಾಥನ್ ಕಾಗದ ಬರೆದು ಹಾಕಿದರು.

ಒಂದು ತಿಂಗಳಾದರೂ ಉತ್ತರ ಬರಲಿಲ್ಲ. ಎಲ್ಲರಿಗೂ ಆತಂಕ. ಪಿಳ್ಳೆಯವರು ತನ್ನನ್ನು ಶಿಷ್ಯಳನ್ನಾಗಿ ಸ್ವೀಕರಿಸುತ್ತಾರೋ ಇಲ್ಲವೋ ಅಥವಾ ಅವಕಾಶವಿಲ್ಲವೆನ್ನುತ್ತಾರೋ, ಏನು ಕಾಗದ ಬರುವುದೋ ಎಂದು ಲಲಿತನ ಜೀವ ಒಂದೇ ಸಮನೆ ತುಡಿಕೊಳ್ಳುವುದಕ್ಕೆ ಆರಂಭವಾಯಿತು. ಸ್ವಾಮಿನಾಥನರಿಗೆ ಜವಾಬು ಬಂದಿತೇ ಎಂದು ದಿನ ಬೆಳಗಾದರೆ ತಂದೆಯನ್ನು ಕೇಳುವುದೇ ಅವಳಿಗೊಂದು ಕೆಲಸವಾಯಿತು; ಅವಳಿಗೆ ಉತ್ತರ ಕೊಡುವುದರಲ್ಲಿ ಅವರಿಗೂ ಬೇಸರವಾಯಿತು. ಹಣಕ್ಕಾಗಿ ಪಾಠ ಹೇಳದೆ ಶಿಷ್ಯರ ಯೋಗ್ಯತೆ ನೋಡಿ ವಿದ್ಯೆ ಕಲಿಸುವ ಗುಣವುಳ್ಳವರೆಂದು ಹೆಸರಾಗಿದ್ದ ಪಿಳ್ಳೆಯವರ ವಿಚಾರ ಹೀಗೇ ಎಂದು ಹೇಳುವ ಹಾಗಿರಲಿಲ್ಲ. ಅವರಿಗೆ ಲಹರಿ ಬಂದರೆ ಆಗಲಿ ಎನ್ನುತ್ತಿದ್ದರು; ಇಲ್ಲದಿದ್ದರೆ ತಿಂಗಳುಗಟ್ಟಲೆ ಅಲೆದರೂ ಕೂಡ ಒಂದು ಉತ್ತರ ಸಿಕ್ಕುವುದು ದುರ್ಲಭವಾಗುತ್ತಿತ್ತು.

ಹಲವರಿಂದ ಈ ವಿಷಯ ಕೇಳಿದ್ದ ನಟರಾಜ ಅಯ್ಯರರಿಗೆ, ಉತ್ತರ

ಬಾರದಿರಲು ಸಂದೇಹ ಬಲವಾದದ್ದರಲ್ಲಿ ಅಚ್ಚರಿಯಿರಲಿಲ್ಲ. ಅವರ ಮನಸ್ಸು ಪಂದನಲ್ಲೂರಿನ ದಿಕ್ಕುಬಿಟ್ಟು ತಿರುಗಲಾರಂಭಿಸಿತು.

ಒಂದು ಬೆಳಗ್ಗೆ ಆಗತಾನೇ ಬಂದಿದ್ದ ಪತ್ರಿಕೆಗಳನ್ನು ತಿರುವಿ ಹಾಕಿದ ಬಳಿಕ ನಟರಾಜ ಅಯ್ಯರರು ಮನೆಯ ಮುಂದಿನ ತೋಟದಲ್ಲಿ ಓಡಾಡುತ್ತಿದ್ದರು. ಮಾಲಿ ಗಿಡಗಳ ಪಾತೆಗಳನ್ನು ಸರಿಮಾಡುತ್ತ ಅವಕ್ಕೆ ನೀರೆರೆಯುತ್ತಿದ್ದ. ಲಲಿತ ಮುಂದುಗಡೆಯ ರೂಮಿನಲ್ಲಿ ಕುಳಿತು 'ಕಲ್ಕಿ'ಯ ಪುಟಗಳನ್ನು ತಿರುಗಿಸುತ್ತಿದ್ದಳು. ಅಯ್ಯರರು ಅನ್ಯ ಮನಸ್ಕರಾಗಿ ಶತಪಥ ಹಾಕುತ್ತಿದ್ದರು.

ಸೀಬೆಯ ಗಿಡದ ಹತ್ತಿರ ಕೆಲಸ ಮಾಡುತ್ತಿದ್ದ ಮಾಲಿ ಪಕ್ವವಾಗಿ ತೊಟ್ಟು ಕಳಚಿದ್ದ ಒಂದು ಹಣ್ಣನ್ನು ತಂದು ಅಯ್ಯರರ ಕೈಗಿತ್ತ. ಅವರ ದೃಷ್ಟಿ ಅತ್ತ ಹೊರಳಿ ಅದರಲ್ಲಿಯೇ ಕೀಲಿಸಿತು. ಮಗಳನ್ನು ಕೂಗಿ ಹಣ್ಣನ್ನು ಕೊಡ ಬೇಕೆಂದು ಅವರು ಆ ಕಡೆ ತಿರುಗಿ ಹೆಜ್ಜೆ ಹಾಕುತ್ತಿದ್ದಾಗ ಗೇಟು ತೆಗೆದು ಕೊಂಡು ಸ್ವಾಮಿನಾಥನ್ ಒಳಗೆ ಬಂದರು.

ಸ್ವಾಮಿನಾಥನ್ ಅಷ್ಟು ಹೊತ್ತಿನಲ್ಲಿ ಬರುವುದು ಅಪರೂಪ. ಕಾಗದ ವೇನಾದರೂ ಬಂದಿತೋ ಎಂದು ಅಯ್ಯರರ ಮನಸ್ಸು ಶಂಕಿಸಿತು. ಅದನ್ನವರು ಕೇಳುವುದಕ್ಕೆ ಅವಕಾಶವೇ ಇರಲಿಲ್ಲ. ಸ್ವಾಮಿನಾಥನ್ ಜೇಬಿನಿಂದ ಒಂದು ಕವರು ತೆಗೆಯುತ್ತಲೇ ಹತ್ತಿರ ಬಂದರು. ಕುತೂಹಲವನ್ನು ತಡೆಯಲಾರದೆ ಅಯ್ಯರರು,

"ಏನು ಸಮಾಚಾರ? ಹಣ್ಣೋ ಕಾಯೋ?"

ಸ್ವಾಮಿನಾಥನ್ ಮುಗುಳ್ನಗುತ್ತ

"ಕೈಯಲ್ಲಿಟ್ಟುಕೊಂಡು ನನ್ನನ್ನೇ ಕೇಳುತ್ತೀರಲ್ಲಾ?"

"ಇರಲಿ, ಏನು ಹೇಳೀಪ್ಪಾ."

"ನೀವೇ ಓದಿ ನೋಡಿ"

ಎಂದು ಕಾಗದವನ್ನು ಅವರ ಕೈಗಿತ್ತರು. ಅಯ್ಯರರು ಅದನ್ನು ಅವಸರವಸರವಾಗಿ ಓದಿ ಮುಗಿಸಿ,

"ಆಗಬಹುದು ಎಂದರು, ಅಂತ ಬರೆದಿದ್ದಾರೆ."

"ಹೌದು."

" ನನಗೆ ಇದೇ ಒಂದು ದೊಡ್ಡ ಯೋಚನೆಯಾಗಿತ್ತು. ದಿನ ಬೆಳಗಾದರೆ ಅವಳ ಪ್ರಶ್ನೆಗೆ ಉತ್ತರ ಹೇಳಿ ಹೇಳಿ ಸಾಕಾಗಿತ್ತು. ಸದ್ಯ, ಮಹಾರಾಯರು ಒಳ್ಳೇ ಸುದ್ದಿ ತಂದಿರಿ"

ಎಂದು ತಮ್ಮ ಕೈಯಲ್ಲಿದ್ದ ಸೀಬೆಹಣ್ಣನ್ನು ಸ್ವಾಮಿನಾಥನ್ನರ ಕೈಗಿತ್ತರು.

" ನನ್ನ ಶ್ರಮಕ್ಕಿದು ಇನಾಮಲ್ಲವೆ ?"

ಎಂದು ಸ್ವಾಮಿನಾಥನ್ ನಕ್ಕು ಕೇಳಿದರು. ಇವರಿಬ್ಬರೂ ಮಾತಾಡುತ್ತಿದ್ದುದನ್ನು ನೋಡಿ ಲಲಿತ ಓಡಿ ಬಂದಳು. ಅಯ್ಯರರು,

" ಒಳ್ಳೇ ಸಮಾಚಾರ ಬಂದಿದೆಯಮ್ಮಾ."

" ಏನಣ್ಣಾ ?"

" ಪಿಳ್ಳೆಯವರು ಆಗಬಹುದು ಎಂದಿದ್ದಾರಂತೆ"

ಎಂದು ಮಗಳ ಕೈಗೆ ಕಾಗದವಿತ್ತರು. ಲಲಿತನ ಮುಖ ಅರಳಿತು.

" ಸರಿ"

ಎಂದು ಕಾಗದವನ್ನು ಹಿಡಿದು ಉಕ್ಕುತ್ತಿದ್ದ ಸಂತೋಷದಲ್ಲಿ ಒಳಗೆ ಓಡಿದಳು. ಅಯ್ಯರರು ವರಾಂಡದ ಸೋಫಾದ ಮೇಲೆ ಸ್ವಾಮಿನಾಥಯ್ಯರನ್ನು ಕೂಡಿಸಿ, ಅವರ ಕೈಗೊಂದು ಪತ್ರಿಕೆ ತಗಲಿಸಿ ಹೆಂಡತಿಗೆ ಸಮಾಚಾರ ತಿಳಿಸಲು ಒಳಗೆ ಹೋದರು.

" ಇನ್ನು ನಿನ್ನ ಮಗಳು ಹಾಸಿಗೆ ಬಟ್ಟೆ ಕಟ್ಟಬೇಕಾದ್ದೇ"

ಎಂದರು. ಇದ್ದಕ್ಕಿದ್ದ ಹಾಗೆ ಈ ಮಾತು ಕೇಳಿ ಮೀನಾಕ್ಷಮ್ಮನವರಿಗೆ ಗಾಬರಿಯಾಯಿತು.

" ಯಾಕೇಂದ್ರೆ, ಏನಾಯಿತು ?"

" ಏನೂ ಆಗಿಲ್ಲ, ಗಾಬರಿಯಾಗಬೇಡ. ಪಂದನಲ್ಲೂರಿನಿಂದ ಲಗ್ನ ಪತ್ರಿಕೆ ಬಂದಿದೆ."

" ಸದ್ಯ, ಅಷ್ಟೇತಾನೆ? ನಾನು ಇನ್ನು ಏನೋ ಅಂತಿದ್ದೆ, ನಿಮ್ಮ ಹುಡುಗಾಟ ಯಾವಾಗಲೂ ಒಂದೇ."

" ಸರಿ ಅದಿರಲಿ, ಯಾವಾಗ ಕಳಿಸುತ್ತೀ ಮಗಳನ್ನ ?"

" ಪುಣ್ಯಾತಗಿತ್ತಿ ಹೊರಟೇ ನಿಂತಿದಾಳೆ. ಅವಳಿಗಿಂತ ಹೆಚ್ಚಾಗಿ ನೀವು

ಕುಣಿಯುತ್ತಾ ಇದೀರಿ. ನೀವಿಬ್ಬರೂ ಮಸಲತ್ತು ಮಾಡಿಕೊಂಡೇ ಇರೋವಾಗ ನನ್ನದೇನು ಅಡ್ಡಿ ?"

"ಹಾಗಲ್ಲ, ನಿನ್ನ ಅಭಿಪ್ರಾಯ ಕೇಳಿದೆ. ನಿನ್ನ ಕೇಳದೆ ನಾನು ಯಾವುದಾದರೂ ಮಾಡಿದೇನೆಯೆ ?"

"ಅಬ್ಬ, ಏನು ಬಿನ್ನಾಣವಾಗಿ ಮಾತಾಡುತೀರೋ. ಯಾವ ಹೆಂಗಸೂ ನಿಮಗೆ ಹೇಳಿಕೊಡಬೇಕಾಗಿಲ್ಲ ಮಾತಿನ ಜಾಣತನ. ಪಾಪ, ನನ್ನ ಅಭಿಪ್ರಾಯ ತುಂಬ ಕೇಳೋರು ಇವರು."

ಗಂಡ–ಹೆಂಡತಿಯರ ಸರಸದ ಒಂದೊಂದು ಮಾತು ಕಿವಿಗೆ ಬಿದ್ದು ಸ್ವಾಮಿನಾಥನ್ ಒಳಗೇ ನಗುತ್ತಿದ್ದರು.

ರೂಮು ಸೇರಿ ಕಾಗದ ಓದಿ ಮುಗಿಸಿದ್ದ ಲಲಿತ ತಾಯಿ ತಂದೆಯ ರೊಡನೆ ಮಾತಿನಲ್ಲಿ ಭಾಗಿಯಾಗಲು ತಾನೂ ಹೋದಳು.

ಗೌರೀಹಬ್ಬ ಕಳೆದ ಮೇಲೆ ಮಗಳನ್ನು ಪಂದನಲ್ಲೂರಿಗೆ ಕಳಿಸುವುದೆಂದು ನಿಶ್ಚಯವಾಯಿತು. ಮೀನಾಕ್ಷಮ್ಮನವರ ಸಲಹೆಗೆ ಅಯ್ಯರರು ಪ್ರತಿಹೇಳುವ ಹಾಗಿರಲಿಲ್ಲ. ಮಗಳ ಪ್ರಯಾಣವನ್ನು ಹೆಂಡತಿ ಆದಷ್ಟು ದೂರ ಮುಂದೆ ಹಾಕುತ್ತಿದ್ದಾಳೆಂಬುದು ಅವರಿಗೆ ಗೊತ್ತಿದ್ದರೂ ಹಡೆದೊಡಲಿನ ಮಮತೆಗೆ ಬೆಲೆ ಕೊಡುವುದು ಅನಿವಾರ್ಯವಾಗಿತ್ತು.

ಶ್ರಾವಣಮಾಸ ಓಡುತ್ತ ಬಂದಿತು. ಹಬ್ಬಗಳ ಸಾಲು. ಅಯ್ಯರರಿಗೂ ಮಗಳು ಇನ್ನೊಂದು ತಿಂಗಳು ಕಣ್ಣೆದುರಿಗೇ ಇರಲಿ ಎನ್ನಿಸಿತು. ಪಂದನಲ್ಲೂರಿಗೆ ಮಗಳನ್ನು ಕಳಿಸಲು ಏರ್ಪಾಡು ಮಾಡುವಾಗ ಇದ್ದ ಆತುರ ಕಳಿಸಬೇಕಾಗಿ ಬಂದಾಗ ಹಿಮ್ಮೆಟ್ಟುತ್ತಿತ್ತು. ಒಂದು ವರ್ಷ ಮಗಳನ್ನು ಬಿಟ್ಟು ತಾನು ತನ್ನ ಕಣ್ಣಿನ ಬೊಂಬೆ ಎಂದು ಗಂಡಹೆಂಡತಿಯರಿಬ್ಬರೇ ಕಾಲ ನೂಕುವುದು ಅಯ್ಯರರ ಮನಸ್ಸಿಗೂ ಹಿತವಾಗಿರಲಿಲ್ಲ. ಅನಿಶ್ಚಯದಲ್ಲಿ ತೂಗುತ್ತಿದ್ದ ಅವರ ಮನಸ್ಸು ಹೆಂಡತಿ ಮುಂದೆ ಹಾಕಿದ ವಾಯಿದೆಗೇ ಜೋತುಬಿತ್ತು.

ಆಡುತ್ತ ಆಡುತ್ತ ಭಾದ್ರಪದ ಬಂದೇಬಿಟ್ಟಿತು. ಅಯ್ಯರರ ಮನೆಯಲ್ಲಿ ಗೌರೀಹಬ್ಬ ಈ ಸಲದಷ್ಟು ಸಂಭ್ರಮವಾಗಿ ಯಾವಾಗಲೂ ನಡೆದಿರಲಿಲ್ಲ. ಅವರ ಭಾಗಕ್ಕೆ ಲಲಿತನೇ ಗೌರಿ. ಹಬ್ಬ ಕಳೆದ ಮೇಲೆ ಗೌರೀದೇವಿಯನ್ನು ಬಿಳ್ಕೊಡುವಾಗ ಆಗುವಷ್ಟೇ ಸಂಕಟ ಮಗಳನ್ನು ಕಳಿಸಿಕೊಡುವ ದಿನ ಹತ್ತಿರ

ವಾದಂತೆ ಮೀನಾಕ್ಷಮ್ಮನವರಿಗೂ ಆಗುತ್ತಿತ್ತು. ಅಂಗೈಯಲ್ಲಿಟ್ಟುಕೊಂಡು ಮುಂಗೈಯಲ್ಲಿ ಮುಚ್ಚಿಕೊಳ್ಳುತ್ತಿದ್ದ ಮುದ್ದಿನ ಮಗಳನ್ನು ಅಗಲಲೇಬೇಕಾಗಿತ್ತು.

ಲಲಿತನಂತೂ ಉತ್ಸಾಹದ ಬುಗ್ಗೆಯಾಗಿ ಕುಣಿಯುತ್ತಿದ್ದಳು. ಅವಳ ಎಳೆತನದ ಹುರುಪಿನಲ್ಲಿ ತಾಯಿತಂದೆಗಳ ನಗುಮೊಗದ ಹಿಂದೆ ಅಡಗಿರುವ ಚಿಂತೆಯ ಸುಳುವೂ ಅವಳಿಗೆ ಗೊತ್ತಾಗಲಿಲ್ಲ. ಸ್ವಾಮಿನಾಥನ್ ತಂಜಾವೂರಿಗೆ ಲಲಿತನನ್ನು ಕರೆದುಕೊಂಡು ಹೋಗಿ ಅಲ್ಲಿ ವಿಶ್ವನಾಥನ್ನರ ಜೊತೆಗೂಡಿ ಮುಂದೆ ಪಂದನಲ್ಲೂರಿಗೆ ಪ್ರಯಾಣ ಮಾಡಬೇಕೆಂದು ಗೊತ್ತಾಗಿತ್ತು. ವಿಶ್ವನಾಥನ್ನರ ದೂರದ ಸಂಬಂಧದ ಒಂದು ಪಾಟಿ ಲಲಿತನ ನಾಟ್ಯಾಭ್ಯಾಸ ಮುಗಿಯುವವರೆಗೂ ಪಂದನಲ್ಲೂರಿನಲ್ಲಿ ಅವಳ ಜೊತೆಗಿದ್ದು ಯೋಗಕ್ಷೇಮ ನೋಡಿಕೊಳ್ಳಬೇಕೆಂದೂ ನಿಶ್ಚಯವಾಗಿತ್ತು.

ಪ್ರಯಾಣದ ದಿವಸ ಮನೆಯಲ್ಲಿ ಹಬ್ಬದ ಅಡುಗೆ. ಸ್ವಾಮಿನಾಥನ್ನರಿಗೂ ಔತಣ ಬಂದಿತ್ತು. ಎಲ್ಲರನ್ನೂ ಕೂಡಿಸಿ ಉಪಚಾರ ಹೇಳುತ್ತ ಬಡಿಸಿಸುತ್ತಿದ್ದ ಮೀನಾಕ್ಷಮ್ಮನವರಿಗೆ ತಾವೇ ಊಟಕ್ಕೆ ಕುಳಿತಾಗ ಗಂಟಲಲ್ಲಿ ಒಂದು ತುತ್ತು ಅನ್ನವೂ ಇಳಿಯಲಿಲ್ಲ. ಅಡುಗೆಯವನು ಏನು ತಂದರೂ ಬೇಡ ಬೇಡವೆಂದು ಹೇಳುತ್ತ ಎಂಜಲು ಶಾಸ್ತ್ರ ಮಾಡಿ ಎದ್ದರು.

ಲಲಿತನಿಗೆ ಬೇಕಾದ ಬಟ್ಟೆಬರೆ ಹಾಸಿಗೆ ಎಲ್ಲವನ್ನೂ ಆಳು ಕಟ್ಟಿ ಸಿದ್ಧ ಪಡಿಸಿಟ್ಟಿದ್ದ. ಡ್ರೈವರು ಗ್ಯಾರೇಜಿನಿಂದ ಕಾರು ತಂದು ಪೋರ್ಟಿಕೋದಲ್ಲಿ ನಿಲ್ಲಿಸಿದ.

ನಟರಾಜ ಅಯ್ಯರರು ಸ್ವಾಮಿನಾಥನ್ನರಿಗೆ ಹೇಳಬೇಕಾದ್ದೆಲ್ಲವನ್ನೂ ಹೇಳಿ ಅವರ ಕೈಯಲ್ಲಿ ೫೦೦ ರೂಪಾಯಿ ನೋಟಿನ ಕಂತೆಯನ್ನಿಟ್ಟರು.

ಲಲಿತ ರೋಜಾಬಣ್ಣದ ಜಾರ್ಜೆಟ್ ಸೀರೆಯನ್ನುಟ್ಟು ತೆಳುನೀಲಿಯ ಚೋಲಿ ತೊಟ್ಟಿದ್ದಳು. ಮೂರೆಳೆ ಹಾಕಿದ್ದ ಜಡೆ ಅತ್ತ ಇತ್ತ ಒಲೆಯುತ್ತಿತ್ತು. ಮೀನಾಕ್ಷಮ್ಮನವರು ತೋಟದಿಂದ ದೊಡ್ಡದಾದ ಗುಲಾಬಿ ಹೂವೊಂದನ್ನು ತಾವೇ ಕಿತ್ತು ತಂದು ಮಗಳಿಗೆ ಮುಡಿಸಿದರು.

ಎಲ್ಲರೂ ಪೋರ್ಟಿಕೋಗೆ ಬಂದು ನಿಂತರು. ಮೀನಾಕ್ಷಮ್ಮನವರು ಮಗಳ ಭುಜ ನೇವರಿಸುತ್ತ,

“ಹೋಗಿ ಸೇರಿದ್ದಕ್ಕೆ ಬೇಗ ಕಾಗದ ಹಾಕು ಕಂದಾ, ಮರೆಯಬೇಡ”

ಎಂದರು. ಎಷ್ಟು ನಿವಾರಿಸುತ್ತಿದ್ದರೂ ಉಕ್ಕುತ್ತಿದ್ದ ಕಂಬನಿ ಅವರ ನೋಟಕ್ಕೆ ತೆರೆ ಹಾಕುತ್ತಿತ್ತು.

ಅಯ್ಯರರ ಗಂಟಲಿನಲ್ಲೂ ಒಂದು ಚಂಡು ತುರುಕಿದ ಹಾಗಿತ್ತು. ಅವರು ಆ ದೃಶ್ಯ ನೋಡಲಾರದೆ ಆ ಕಡೆ ತಿರುಗಿಕೊಂಡರು.

ಸ್ವಾಮಿನಾಥನ್ ರೈಲಿಗೆ ಹೊತ್ತಾಯಿತೆಂದು ಅವಸರಿಸಿದರು.

ನಟರಾಜ ಅಯ್ಯರ್, ಸ್ವಾಮಿನಾಥನ್, ಲಲಿತ ಕಾರು ಹತ್ತಿ ಕುಳಿತರು. ಮನೆಯಲ್ಲಿ ಯಾರೂ ಇಲ್ಲದ್ದರಿಂದ ಮೀನಾಕ್ಷಮ್ಮ ಹಿಂದೆಯೇ ಉಳಿಯ ಬೇಕಾಯಿತು.

ಕಾರು ನಿಧಾನವಾಗಿ ಪೋರ್ಟಿಕೋ ಬಿಟ್ಟು ಹೊರಟಿತು. ಲಲಿತ ಹೊರಗೆ ತಲೆಹಾಕಿ,

" ಅಮ್ಮಾ, ಹೋಗಿ ಬರುತ್ತೇನೆ."

" ಹೋಗಿ ಬಾಪ್ಪ, ನಾನು ಹೇಳಿದ್ದು ಮರೆಯಬೇಡ. ಕಾಗದ ಹಾಕುತ್ತಿರು, ಜೋಪಾನ "

ಎಂದು ಇನ್ನೊಮ್ಮೆ ಎಚ್ಚರಿಸಿದರು.

ಸೆಂಕೆಡ್‌ಕ್ಲಾಸಿನಲ್ಲಿ ಎರಡು ಬರ್ತ್‌ಗಳನ್ನು ರಿಸರ್ವ್ ಮಾಡಿಸಲಾಗಿತ್ತು. ಪ್ಲಾಟ್‌ಫಾರಂನಲ್ಲಿ ಗಾಡಿ ಸಿದ್ಧವಾಗಿಯೇ ನಿಂತಿತ್ತು. ಅಯ್ಯರರು ಕಾರಿನಿಂದಿಳಿದು ಕೂಲಿಯವನ ಕೈಯಲ್ಲಿ ಸಾಮಾನುಗಳನ್ನು ತೆಗೆಸಿಕೊಂಡು ಬಂದು ಗಾಡಿಯಲ್ಲಿಡಿ ಸಿದರು. ಬರ್ಮಾದಿಂದ ಹಿಂತಿರುಗುತ್ತಿದ್ದ ಚೆಟ್ಟಿಯಾರರೊಬ್ಬರು ಕುಟುಂಬ ಸಮೇತರಾಗಿ ಅದೇ ಗಾಡಿ ಹತ್ತಿದರು.

ರೈಲು ಹೊರಡುವ ಗಂಟೆಯಾಗಿ, ರೈಲು ನಿಧಾನವಾಗಿ ಚಲಿಸ ಲಾರಂಭಿಸಿತು. ಕಿಟಕಿಯ ಹತ್ತಿರ ಕುಳಿತಿದ್ದ ಮಗಳ ಕೈಯನ್ನು ನೇವರಿಸುತ್ತ ಅಯ್ಯರರು ಸ್ವಾಮಿನಾಥನ್ನರ ಕಡೆ ತಿರುಗಿ,

" ತಂಜಾವೂರು ತಲಪಿದ್ದಕ್ಕೆ ವೈರ್‌ಮಾಡಿ. ಹೆಚ್ಚು ಹಣ ಬೇಕಾದರೆ ತಿಳಿಸಿ. ಪಂದನಲ್ಲೂರು ಕೆಲಸವಾದ ಮೇಲೆ ನೀವು ಹೊರಡುವ ಮೊದಲು ಕಾಗದ ಹಾಕಿ "

ಎಂದು ತಿಳಿಸಿದರು. ಸ್ವಾಮಿನಾಥನ್ ಆಗಲೆಂದು ತಲೆ ಹಾಕಿದರು.

" ಅಣ್ಣಾ, ಹೋಗಿಬಿಟ್ಟು ಬರುತ್ತೇನೆ "

ಎಂದು ಲಲಿತ ನುಡಿದಳು.

ಪ್ಲಾಟ್‌ಫಾರಮನ್ನು ದಾಟಿ ಹೋಗುತ್ತಿದ್ದ ಗಾಡಿಯನ್ನು ನೋಡುತ್ತ ಅಯ್ಯರರು ಹಾಗೆಯೇ ನಿಂತರು. ರೈಲು ಕಣ್ಮರೆಯಾಗುವವರೆಗೂ ಅವರ ದೃಷ್ಟಿ ಮಗಳು ಕುಳಿತಿದ್ದ ಗಾಡಿಯನ್ನು ಹಿಂಬಾಲಿಸುತ್ತಿತ್ತು.

## ೧೩

ಎಲ್ಲಾದರೂ ಒಂದು ಅನುಕೂಲವಾದ ಮನೆ ಕಣ್ಣಿಗೆ ಬಿದ್ದರೆ ತಿಳಿಸುವಂತೆ ಮಧುಸೂದನ ಹೇಳಿದ್ದನ್ನು ಸುಬ್ಬಕೃಷ್ಣ ಮರೆತಿರಲಿಲ್ಲ. ಒಂಟಿಕೊಪ್ಪಲಿನಲ್ಲಿ ಹೊಸದಾಗಿ ಮನೆಗಳಾಗುತ್ತಿದ್ದವು. ಸಾಹುಕಾರ್ ಚಿನ್ನಪ್ಪ ಮಧ್ಯಮ ವರ್ಗದ ಕುಟುಂಬಗಳಿಗೆ ಆಗಲೆಂದು ಕಡಮೆ ಬಾಡಿಗೆಯಲ್ಲಿ ಅಚ್ಚುಕಟ್ಟಾಗಿ ಕೆಲವು ಮನೆಗಳನ್ನು ಕಟ್ಟಿಸುತ್ತಿದ್ದ. ಆ ಪೈಕಿ ತನ್ನ ಸ್ನೇಹಿತನಿಗೆ ಒಂದು ಮನೆ ಬೇಕಾಗುತ್ತದೆಂದು ಸುಬ್ಬಕೃಷ್ಣ ಚಿನ್ನಪ್ಪನ ಕಿವಿಯ ಮೇಲೆ ಮೊದಲೇ ಹಾಕಿದ್ದ. ಮನೆ ಮುಗಿಯುವ ಹೊತ್ತಿಗೆ ಹೋಗಿ ನೋಡಿಕೊಂಡು, ಬಾಡಿಗೆ ಮಾತನಾಡಿ ಬಿಡುವುದೆಂದು ತೀರ್ಮಾನವಾಗಿತ್ತು.

ಒಂದು ದಿನ ಬೆಳಗ್ಗೆ ಮಧುಸೂದನ ಒಂಟಿಕೊಪ್ಪಲಿನ ಪಾಠ ಮುಗಿಸಿ ಕೊಂಡು ಬರುತ್ತಿದ್ದಾಗ ಸುಬ್ಬಕೃಷ್ಣ ಎದುರಿಗೇ ಸಿಕ್ಕಿದ. ಇಬ್ಬರೂ ಕೂಡಿ ಮನೆಯ ಹತ್ತಿರ ಹೋದರು. ಅಲ್ಲೇ ಕೆಲಸ ಮಾಡುತ್ತಿದ್ದ ಚಿನ್ನಪ್ಪನಿಗೆ ಸುಬ್ಬಕೃಷ್ಣ ತನ್ನ ಗೆಳೆಯನ ಪರಿಚಯ ಮಾಡಿಸಿದ.

"ಇವರೇ ಸಾಹುಕಾರರೇ, ನನ್ನ ಸ್ನೇಹಿತರು."

"ಓಹೋ, ನಮಸ್ಕಾರ ದ್ಯಾವರೂ"

ಚಿನ್ನಪ್ಪ ಕೃತಕ ವಿಶ್ವಾಸ ಪ್ರದರ್ಶಿಸುತ್ತ ಕೈಜೋಡಿಸಿದ. ಸುಬ್ಬಕೃಷ್ಣ, "ಇವರಿಗೇ ಮನೆ ಬೇಕು ಅಂತ ನಾನು ಹೇಳಿದ್ದು."

ಚಿನ್ನಪ್ಪ ಬಿಗುಮಾನದಿಂದ,

"ಮನೆ ನೋಡಲಿ. ಅವರಿಗೆ ಅನುಕೂಲವಾಗೈತೆ ಅಂದರೆ ಮುಂದಿನ ಮಾತು"

ಎಂದ. ಮನೆ ಅನುಕೂಲವಾಗಿಯೇ ಇತ್ತು. ಸಣ್ಣ ವರಾಂಡ, ಒಂದು ಪಕ್ಕದಲ್ಲಿ ರೂಮು. ಗಾಳಿ ಬೆಳಕು ಪ್ರಶಸ್ತವಾಗಿ ಬರುತ್ತಿತ್ತು. ಒಳಗಡೆ ತಕ್ಕಮಟ್ಟಿಗೆ ದೊಡ್ಡ ಹಜಾರ. ಒಳಗೆ ಅಡುಗೆಮನೆ, ಅದರ ಎದುರಿಗೆ ಉಗ್ರಾಣ, ಪಕ್ಕದಲ್ಲೇ ಸ್ನಾನದ ಮನೆ, ಹಿಂದುಗಡೆ ಹಿತ್ತಿಲು, ನಲ್ಲಿ. ಎಲ್ಲಾ ಚಿಕ್ಕಸಂಸಾರಕ್ಕೆ ಅನುಕೂಲವಾಗುವ ಹಾಗೆ ಇತ್ತು. ಚಿನ್ನಪ್ಪ ಹೇಳಿದ ಇಪ್ಪತ್ತೈದು ರೂಪಾಯಿ ಬಾಡಿಗೆ ಸ್ವಲ್ಪ ಹೆಚ್ಚೆಂದು ತೋರಿದರೂ ಮನೆಯನ್ನು ಬಿಡುವುದಕ್ಕೆ ಮಧು ಸೂದನನಿಗೆ ಇಷ್ಟವಿರಲಿಲ್ಲ. ಆದರೆ ಬಾಡಿಗೆ ತನ್ನ ಯೋಗ್ಯತೆಗೆ ಹೆಚ್ಚೆಂದು ಚಡಪಡಿಸಿದ. ಅವನ ಫಜೀತಿ ನೋಡಿ ಸುಬ್ಬಕೃಷ್ಣ,

"ಅಕ್ಕಿಯ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿ ಅಂತ ಮಾಡುತ್ತೀಯಲ್ಲಯ್ಯಾ ?"

"ನೀನೇ ಏನಾದರೂ ಚೌಕಾಸಿ ಮಾಡಿ ನೋಡು."

"ಚಿನ್ನಪ್ಪ ತುಂಬ ಲೆಕ್ಕಾಚಾರಸ್ಥ. ಅವನು ಹಾಗೆಲ್ಲಾ ಕಡಮೆಗೆ ಒಪ್ಪುವುದಿಲ್ಲ. ಇತರರಿಗೆ ಮೂವತ್ತು ಹೇಳುವುದನ್ನು ನಮಗೆ ದಾಕ್ಷಿಣ್ಯಕ್ಕೆ ಇಪ್ಪತ್ತೈದು ಹೇಳಿದಾನೆ."

"ನೋಡಪ್ಪಾ, ಒಂದು ಮಾತು ಹೇಳಿನೋಡು. ಸ್ವಲ್ಪ ಸ್ಥಿತಿ ಸುಧಾರಿಸಿದ ಮೇಲೆ ಇಪ್ಪತ್ತೈದು ಕೊಡಲು ಅಡ್ಡಿಯಿಲ್ಲ. ಈಗ ಇಪ್ಪತ್ತಕ್ಕೆ ನಿಲ್ಲಿಸು."

ಚಿನ್ನಪ್ಪ ಬಡಪೆಟ್ಟಿಗೆ ಒಪ್ಪಲಿಲ್ಲ. ತುಂಬ ಕೊಸರಾಡಿದ.

"ಮನೆಯ ಮೇಗೆ ಸುರಿದಿರೋ ಅಣಕ್ಕೆ ಬಡ್ಡಿಯಾದರೂ ಗಿಟ್ಟದಿದ್ದರೆ ಎಂಗೆ ಮೇಷ್ಟ್ರೆ? ಏನೋ ನಿಮ್ಮ ಸ್ನೇಹಿತರು ಅಂತೀರ; ಸಂಗೀತಗಾರರು ಬೇರೆ ಅಂತೀರ. ಅವರ ದಾಕ್ಷಿಣ್ಯವೂ ಒಸಿ ಇರಲಿ ಅಂತ ಒಪ್ಪಿಕೋಬೇಕು ಅಷ್ಟೆ. ನಮ್ಮನೇಲೂ ಆಡು ಗೀಡು ಕಲಿಯೋ ಮಕ್ಕಳು ಅವ್ರೆ"

ಎಂದು ಅರ್ಥಗರ್ಭಿತವಾಗಿ ನುಡಿದು ದೇಶಾವರದ ನಗೆ ನಕ್ಕ.

ಬಂದ ಕೆಲಸವೇನೋ ಆದ ಹಾಗಾಯಿತು. ಮನೆ ಸುಣ್ಣಬಣ್ಣ ಆಗಿ ವಾಸಕ್ಕೆ ಸಿದ್ಧವಾಗಿತ್ತು. ಒಂದು ಒಳ್ಳೆಯ ದಿನ ನೋಡಿ ಬರುವುದೆಂದು ಗೊತ್ತು

ಮಾಡಿಕೊಂಡು ಮನೆಗೊಂದು ಬೀಗ ಹಾಕಿಕೊಂಡು ಮಧುಸೂದನ ಹಿಂತಿರುಗಿದ.

ಹೊಸಮನೆ ಬಾಡಿಗೆಗೆ ಗೊತ್ತು ಮಾಡಿಕೊಂಡ ಸಂಗತಿ ಕೇಳಿ ದಾಸರಿಗೆ ಸಂತೋಷವಾಯಿತು. ವೆಂಕಮ್ಮನವರು ನರಸಕ್ಕನೊಡಗೂಡಿ ಬಂದು ಮನೆ ನೋಡಿಕೊಂಡು ಹೋದರು. ಗಾಳಿ ಬೆಳಕುಗಳಿಂದ ಕೂಡಿ ಸ್ವಚ್ಛವಾಗಿದ್ದ ಮನೆ ನೋಡಿ ಅವರಿಗೆ ಹಿಡಿಸಲಾರದಷ್ಟು ಹಿಗ್ಗು.

"ಅರಮನೆ ಇದ್ದ ಹಾಗೆ ಇದೆ ಕಣ್ರೇ, ನರಸಕ್ಕ"

ಎಂದರು. ಗೊಂದಿಯ ಮುರುಕು ಮನೆಯಲ್ಲಿ ಅರ್ಧ ಜೀವಮಾನವನ್ನೇ ಮುಗಿಸಿದ್ದ ಅವರ ಭಾಗಕ್ಕೆ ಜನದ ಸದ್ದು ಗಲಭೆಗಳಿಗೆ ಅವಕಾಶವಿಲ್ಲದೆ, ಎತ್ತರವಾಗಿದ್ದ ಸ್ಥಳದಲ್ಲಿದ್ದ ಮನೆ ನೋಡಿ ಅತ್ಯಾನಂದವಾಗಿತ್ತು.

ಪುಣ್ಯಾಹ ಮಾಡಿಸಿ ಒಂದು ಒಳ್ಳೆಯ ದಿನದಲ್ಲಿ ಮನೆಗೆ ಬಂದದ್ದಾಯಿತು. ಅವತ್ತು ದಾಸರಿಗೂ ನರಸಕ್ಕನಿಗೂ ಔತಣ ಬಂದಿತ್ತು. ಮಧುಸೂದನ ಸುಬ್ಬಕೃಷ್ಣನಿಗೂ ಅವನ ಹೆಂಡತಿಗೂ ಊಟಕ್ಕೆ ಹೇಳಿದ್ದ.

"ನಾನೇ ಕರೆಯುತ್ತಿರುವುದಕ್ಕೆ ಅಸಮಾಧಾನಪಟ್ಟುಕೊಳ್ಳಬೇಡಪ್ಪಾ. ನಮ್ಮ ತಾಯಿ ಬರುವ ಹಾಗಿಲ್ಲ. ನಿಮ್ಮ ಶ್ರೀಮತಿಯವರನ್ನೂ ತಪ್ಪದೆ ಕರೆದು ಕೊಂಡು ಬಾ"

ಎಂದ. ಸುಬ್ಬಕೃಷ್ಣ ಹುಸಿಮುನಿಸಿನಿಂದ ನಗುತ್ತ,

"ಈ ಸಲವೇನೋ ಕರೆದುಕೊಂಡು ಬರುತೇನಪ್ಪಾ. ಇನ್ನೊಂದು ಸಲ ಆಹ್ವಾನ ಕೊಡಬೇಕಾದರೆ ನೀನು ಪತ್ನೀ ಸಮೇತನಾಗಿ ಬಂದು ಕರೆದರೇ ಬರುವುದು. ಇಲ್ಲದಿದ್ದರೆ ನಾನಂತೂ ಬಿಲ್‌ಖುಲ್ ಬರೊಲ್ಲ."

"ಅಲ್ಲಿಯವರೆಗೂ ನೋಡಿಕೊಳ್ಳೋಣ"

ಎಂದು ಮಧು ನುಡಿದ.

ಅಗ್ರಹಾರದ ಮನೆಬಿಟ್ಟು ಬಂದದ್ದರಿಂದ ವೆಂಕಮ್ಮನವರಿಗೆ ಸಂತೋಷವೂ ಆಗಿತ್ತು, ದುಃಖವೂ ಆಗಿತ್ತು. ಆ ಮನೆ ಅವರಿಗೆ ಕಹಿ–ಸವಿ ನೆನಪುಗಳ ಆಗರವಾಗಿತ್ತು. ತಮ್ಮ ಬಾಳಿನ ದೀರ್ಘಕಾಲದ ಸಂಗಾತಿಯಂತಿದ್ದ ಆ ಮನೆಯಲ್ಲಿ ಆಕೆ ಎಷ್ಟೋ ಕಷ್ಟಸುಖಗಳನ್ನು ಕಂಡಿದ್ದರು. ಅದರೊಡನೆ ಬೆಳೆದಿದ್ದ ಮಾನಸಿಕ ಸಂಬಂಧವನ್ನು ಒಂದೇ ಸಲಕ್ಕೆ ಕಡಿದು ಹಾಕಿ ಬಂದುಬಿಡುವುದು

ಅಷ್ಟು ಸುಲಭವಾಗಿರಲಿಲ್ಲ. ಜೊತೆಗೆ ಹತ್ತಿರದಲ್ಲೇ ದಾಸರ ಮನೆಯಿತ್ತು. ಬೇಸರವಾದಾಗ ಹೋಗಿ ನರಸಕ್ಕನೊಡನೆ ಮಾತಿಗೆ ಕೂಡುತ್ತಿದ್ದರು. ನೆರೆ ಹೊರೆಯ ಜನ ಅನುಬಂಧಿಗಳಿಗಿಂತ ಹೆಚ್ಚಾಗಿದ್ದರು. ಹೊಸ ಸನ್ನಿವೇಶಕ್ಕೆ ಒಗ್ಗಿಕೊಳ್ಳುವುದು ವೆಂಕಮ್ಮನವರಿಗೆ ಸ್ವಲ್ಪ ಮುಜಗರವಾಗಿಯೇ ಇತ್ತು.

ಆದರೆ ಮನೆ ಬದಲಾಯಿಸಿದ್ದರಿಂದ ಮಧುಸೂದನನಿಗೆ ಹೆಚ್ಚಿನ ಅನುಕೂಲವಾಯಿತು. ಅವನಿಗೆ ಒಂಟಿಕೊಪ್ಪಲಿನಲ್ಲಿ ಎರಡುಮೂರು ಪಾಠ ಗಳಿದ್ದವು. ಅಗ್ರಹಾರದಲ್ಲಿ ಎರಡು ಪಾಠವಿತ್ತು. ಗುರುಗಳನ್ನು ನೋಡಲು ಎರಡಕ್ಕೆ ಮೂರಕ್ಕೆ ಊರೊಳಗೆ ಬರುತ್ತಲೇ ಇದ್ದ. ಅವರ ಆರೋಗ್ಯವೂ ಈಚಿಗೆ ಅಷ್ಟು ಚೆನ್ನಾಗಿರಲಿಲ್ಲ.

ಪಾಠಗಳಿಲ್ಲದಿದ್ದ ವೇಳೆಗಳಲ್ಲಿ ಮಧು ತನ್ನ ಅಭ್ಯಾಸಕ್ಕೆ ಗಮನ ಕೊಡುತ್ತಿದ್ದ. ಸುಬ್ಬಕೃಷ್ಣ ಬೇಸಗೆ ರಜದಲ್ಲಿ ಪುಣೆಗೆ ಹೋಗಿದ್ದಾಗ ಒಂದು ಸೊಗಸಾದ ಮಿರಜ್ ತಂಬೂರಿ ತಂದುಕೊಟ್ಟಿದ್ದ. ತಂಬೂರಿಯನ್ನು ಶ್ರುತಿ ಮಾಡಿ, ಅದರ ನಾದದಲ್ಲಿ ಶಾರೀರವನ್ನು ಸಮರಸವಾಗಿ ಬೆರಸಿ, ಆ ಲಯಸುಖ ದಿಂದ ಮೈಮರೆತು ಹಾಡುತ್ತ ಕುಳಿತುಬಿಟ್ಟರೆ ಹೊರಗಿನ ಪರಿವೆಯೇ ಅವನಿಗೆ ಇರುತ್ತಿರಲಿಲ್ಲ. ಕಾಫಿಗೆ, ಊಟಕ್ಕೆ ಎಚ್ಚರಿಸಿ ಎಚ್ಚರಿಸಿ ವೆಂಕಮ್ಮನವರಿಗೆ ಸಾಕಾಗುತ್ತಿತ್ತು.

"ನೀನು ಊಟಮಾಡಿಬಿಡಮ್ಮಾ. ನಾನು ಆಮೇಲೆ ಬರುತ್ತೇನೆ"

ಎನ್ನುತ್ತಿದ್ದ. ಆದರೆ ಮಗನಿಗೆ ಬಡಿಸದೆ ಒಂದು ದಿನವಾದರೂ ಆ ಪ್ರಾಣಿ ಊಟ ಮಾಡುತ್ತಿರಲಿಲ್ಲ.

ಅವನು ಹಾಗೆನ್ನುವುದೂ ತಪ್ಪುತ್ತಿರಲಿಲ್ಲ; ಇವರು ಹೀಗೆ ಮಾಡುವುದೂ ತಪ್ಪುತ್ತಿರಲಿಲ್ಲ.

ಒಂದೊಂದು ಸಲ ಹಾಡುತ್ತ ಯಾವುದೋ ರಸಸನ್ನಿವೇಶದಲ್ಲಿ ಮುಳುಗಿರುತ್ತಿದ್ದ ಅವನಿಗೆ ತಾಯಿ ಬಂದು ಕೂಗಿದರೆ ಬೇಸರವಾಗುತ್ತಿತ್ತು; ಏಕಾಗ್ರತೆಗೆ ಭಂಗ ಬರುತ್ತಿತ್ತು.

"ಮನೋಧರ್ಮ ಹೋಗಿಬಿಡತ್ತಮ್ಮಾ, ಮನೋಧರ್ಮ ಹೋಗಿ ಬಿಡತ್ತೆ"

ಎಂದು ರೇಗುತ್ತಿದ್ದ. ಆದರೆ ತಾಯಿಗೆ ಅರ್ಥವಾಗುತ್ತಿದ್ದ ಮನೋಧರ್ಮ ಮಮತೆಯೊಂದೇ. ಅದನ್ನವರು ಬಿಡದೆ ಚಲಾಯಿಸುತ್ತಿದ್ದರು.

ಮಧ್ಯೆ ಮಧ್ಯೆ ಎಲ್ಲಾದರೂ ಒಂದೊಂದು ಕಚೇರಿ ಬೀಳುತ್ತಿತ್ತು. ಕರೆದ ಕಡೆ ಜಂಬ ಮಾಡದೆ ಹೋಗುತ್ತಿದ್ದ. ಕೊಟ್ಟದ್ದನ್ನು ಸಂತೋಷದಿಂದ ಸ್ವೀಕರಿಸುತ್ತಿದ್ದ. ವಿದ್ಯೆಯಿಂದ ಗರ್ವ ಬರಬಾರದೆಂದೂ ವಿನಯ ಮೂಡ ಬೇಕೆಂದೂ ಗುರುಗಳು ಪದೇ ಪದೇ ಹೇಳಿ ಎಚ್ಚರಿಸುತ್ತಿದ್ದುದನ್ನು ಮರೆಯದೆ ಸಾಧ್ಯವಾದಷ್ಟುಮಟ್ಟಿಗೆ ನಿತ್ಯಾನುಷ್ಠಾನದಲ್ಲಿ ತರಲು ಯತ್ನಿಸುತ್ತಿದ್ದ.

ಸಂಗೀತಗಾರರ ಪ್ರಪಂಚವೇ ವಿಚಿತ್ರವಾಗಿತ್ತು. ಅನೇಕ ವಿದ್ವಾಂಸರಿಗೆ ತಮ್ಮ ಕ್ಷೇತ್ರದ ಹೊರಗಡೆ ಏನಿದೆಯೆಂಬುದರ ಅರಿವೇ ಇರಲಿಲ್ಲ. ಗುರುಮುಖೇನ ಕಲಿತ ಸಂಗೀತ ವಿದ್ಯೆಯಲ್ಲದೆ ಬೇರೆ ವಿದ್ಯೆಯ ಪರಿಚಯವಿರಲಿಲ್ಲ. ಹಲವರಿಗೆ ಇಂಗ್ಲಿಷಿನ ಮಾತಿರಲಿ, ಕನ್ನಡದ ಓದು ಬರಹವೇ ಸರಿಯಾಗಿ ಬರುತ್ತಿರಲಿಲ್ಲ. ಯಾವ ವೈಶಿಷ್ಟ್ಯವೂ ಇಲ್ಲದೆ ಸಂಗೀತದಲ್ಲಿ ತಾವು ಕಲಿತದ್ದನ್ನು ಗಿಣಿಪಾಠವಾಗಿ ಒಪ್ಪಿಸುವುದೊಂದು ಬಿಟ್ಟು ಅವರಿಗೆ ಬೇರೇನೂ ಗೊತ್ತಿರಲಿಲ್ಲ. ಬೆರಳಿನಲ್ಲಿ ಎಣಿಸ ಬಹುದಾದಷ್ಟು ಜನವನ್ನು ಬಿಟ್ಟರೆ ಉಳಿದ ವಿದ್ವಾಂಸರಿಗೆ ಶಾಸ್ತ್ರದ ಪ್ರತ್ಯಕ್ಷ ಪರಿಚಯವಿರಲಿಲ್ಲ. ಸಂಸ್ಕೃತದಲ್ಲಿದ್ದ ಲಕ್ಷಣ ಗ್ರಂಥಗಳೆಲ್ಲಾ ಅವರ ಭಾಗಕ್ಕೆ ಕನಸಿನ ಗಂಟಾಗಿದ್ದವು. ಹೇಳಿದ್ದು ಕೇಳಿದ್ದು ಎನ್ನುವಂತಾಗಿತ್ತೇ ವಿನಾ ಶಾಸ್ತ್ರದಲ್ಲಿ ಸ್ವಂತ ಆಲೋಡನೆಯ ಅವಕಾಶವೇ ಅವರಿಗಿರಲಿಲ್ಲ.

ಸಂಗೀತದ ಭಾಷೆಯೆಂದರೆ ತೆಲುಗೊಂದೇ ಎನ್ನುವ ತಪ್ಪುತಿಳಿವಳಿಕೆಯೂ ಕೆಲವರಲ್ಲಿತ್ತು. ಸಂಸ್ಕೃತದಲ್ಲೋ ತೆಲುಗಿನಲ್ಲೋ ಇರುವ ಕೃತಿಗಳನ್ನು ಬಿಟ್ಟರೆ ಉಳಿದವು ಸಂಗೀತದ ಘನತೆಗೆ ತೂಗಲಾರವು ಎಂಬ ಭ್ರಾಂತಿಯೂ ಇತ್ತು. ಕನ್ನಡದ ದೇವರ ನಾಮುಗಳನ್ನು ಹಾಡುವುದೆಂದರೆ ಅನೇಕ ವಿದ್ವಾಂಸರಿಗೇ ಸಹ್ಯವಾಗುತ್ತಿರಲಿಲ್ಲ. ಕನ್ನಡದಲ್ಲೇನಿದೆ ಎಂದು ಮೂಗು ಮುರಿಯುವ ಚಾಳಿಯಿತ್ತು. ಜನರ ತೃಪ್ತಿಗಾಗಿ ದೇವರನಾಮುಗಳನ್ನು ಹಾಡಬೇಕಾಗಿ ಬಂದರೆ ಕಚೇರಿಯ ಕೊನೆಯಲ್ಲಿ ಒಂದೋ ಎರಡೋ ಹಾಡುತ್ತಿದ್ದರು. ಆಗಲೂ ಸಾಹಿತ್ಯದ ಗಂಧ ತಿಳಿಯದೆ ತಾಳದ ಸರ್ಕಸ್ಸಿನಲ್ಲಿ ಅರ್ಥದ ಕತ್ತು ಕಿವುಚುತ್ತಿದ್ದರು. ತ್ಯಾಗ ರಾಜರ ಮತ್ತು ದೀಕ್ಷಿತರ ಘನಕೃತಿಗಳ ಮಟ್ಟಕ್ಕೆ ಅವು ಬರಲಾರವೆಂಬ ಕಲ್ಪನೆ

ಅವರಲ್ಲಿ ಬೇರೂರಿತ್ತು. ಆ ತಪ್ಪು ಕಲ್ಪನೆಯಲ್ಲಿ ತೊಳಲುತ್ತಿದ್ದ ಅವರ ಭ್ರಾಂತಿ ನಿವಾರಿಸಲು ಯಾರೂ ಪ್ರಯತ್ನ ಪಟ್ಟಿರಲಿಲ್ಲ.

ಜೊತೆಗೆ ಸಂಗೀತಗಾರರಲ್ಲೇ ಪರಸ್ಪರ ದ್ವೇಷಾಸೂಯೆಗಳಿದ್ದವು. ಒಬ್ಬರ ಶ್ರೇಯಸ್ಸನ್ನು ಕಂಡರೆ ಇನ್ನೊಬ್ಬರಿಗೆ ಆಗುತ್ತಿರಲಿಲ್ಲ. ಆತ್ಮಪ್ರಶಂಸೆ ಪರ ನಿಂದನೆಗಳು ಅಂಥವರಲ್ಲಿ ಸರ್ವ ಸಾಮಾನ್ಯವಾಗಿದ್ದವು. ಕೆಲವರಂತೂ ಅಹಂ ಭಾವ ಠೇಂಕಾರಗಳ ಮೊಟ್ಟೆಗಳಾಗಿದ್ದರು. ಅಲ್ಪ ವಿದ್ಯೆಯಿದ್ದರೂ ಸರ್ವಜ್ಞತ್ವದ ಶಿಖರವನ್ನಡರಿದ್ದೇವೆಂಬ ಹೆಮ್ಮೆ ಹಲವರಿಗಿತ್ತು. ವಿನಯ ಸೌಜನ್ಯಗಳಂತೂ ಅಂಥವರ ಬಾಗಿಲಿಗೇ ಸುಳಿಯುತ್ತಿರಲಿಲ್ಲ. ಹಲಕೆಲವು ವಿದ್ವನ್ಮಣಿಗಳು ನಾನಾ ದುರ್ವ್ಯಸನಗಳಿಗೆ ಪಕ್ಕಾಗಿ ಸಂಗೀತಗಾರರ ಪೀಳಿಗೆಗೇ ಕೆಟ್ಟ ಹೆಸರು ತಂದಿದ್ದರು.

ಈ ಗುಂಪಿನಿಂದ ಭಿನ್ನವಾಗಿ ವಿದ್ವಾಂಸರ ವಿರಳ ಪಂಕ್ತಿಯೊಂದಿತ್ತು. ಅವರು ನಿಜವಾಗಿ ಜ್ಞಾನಪಂಡಿತರಾಗಿದ್ದರು. ವೃತ್ತಿ ವಿದ್ಯೆಯೊಡನೆ ಅವರಿಗೆ ಕಾಲೋಚಿತವಾದ ವ್ಯವಹಾರಜ್ಞಾನವೂ ಇತ್ತು. ದೇಶದ ಆಗು ಹೋಗು ಗಳನ್ನವರು ಚೆನ್ನಾಗಿ ಅರಿತಿದ್ದರು. ಕನ್ನಡದ ಚಳವಳಿಯ ಪರಿಣಾಮ ಅವರ ಮೇಲೂ ಆಗದೆ ಇರಲಿಲ್ಲ. ಕನ್ನಡನಾಡಿನಲ್ಲಿ ಕನ್ನಡಕ್ಕೆ ಮಾನ್ಯತೆ ಕೊಡ ಬೇಕಾದದ್ದು ಸಂಗೀತಗಾರರ ಕರ್ತವ್ಯವೂ ಹೌದೆಂಬ ಔಚಿತ್ಯಜ್ಞಾನವನ್ನೂ ಅವರು ಹೊಂದಿದ್ದರು.

ಸಂಗೀತ ಕಚೇರಿಯಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದ ಹಾಗೆ ತೆಲುಗುಕೃತಿಗಳನ್ನು ಹಾಡಬೇಕಾಗಿದ್ದರೂ ಅವಕಾಶ ಸಿಕ್ಕಿದಾಗಲೆಲ್ಲಾ ದೇವರ ನಾಮಗಳನ್ನೂ ಇತರ ಕನ್ನಡ ಕೃತಿಗಳನ್ನು ಪ್ರಾಮುಖ್ಯವಾಗಿ ಹಾಡುವ ಅಭಿಮಾನಿಗಳಿದ್ದರು. ಕನ್ನಡದ ಕೃತಿಗಳನ್ನು ಸ್ವರಸಹಿತ ಹಾಡಿಯೇ ಇಡೀ ಕಚೇರಿಯನ್ನು ತೂಗಿಸಬಲ್ಲ ಧೀರರಿದ್ದರು. ಅಂಥವರ ಮೇಲೆ ಉಳಿದ ವಿದ್ವಾಂಸರ ವಕ್ರದೃಷ್ಟಿ ಬೀಳದೆ ಇರುತ್ತಿರಲಿಲ್ಲ. ಸಂಗೀತ ಪ್ರಪಂಚದಲ್ಲಿ ಹೊಸದೇನೋ ಆವಿರ್ಭವಿಸುತ್ತಿದೆಯೆಂದು ಅವರು ಹೆದರುತ್ತಿದ್ದರು. ಅಜ್ಜ ಹಾಕಿದ ಆಲದ ಮರಕ್ಕೇ ಜೋತುಬಿದ್ದಿದ್ದ ಅವರಿಗೆ ನವ್ಯತೆ ಸಹ್ಯವಾಗುತ್ತಿರಲಿಲ್ಲ. ಜೊತೆಗೆ ಅದೊಂದು ದೋಷವೂ ಆಗಿಪರಿಣಮಿಸಿತ್ತು.

ಗಾಯನ ಪ್ರಪಂಚದ ಈ ವಿದ್ಯಮಾನದ ಪರಿಚಯ ಮಧುಸೂದನನಿಗೆ ಸಾಕಷ್ಟು ಇತ್ತು. ಸಂಗೀತಗಾರರನ್ನಾವರಿಸಿರುವ ಮೌಢ್ಯಗಳನ್ನು ನೋಡಿ

ಅವನಿಗೆ ವ್ಯಥೆಯಾಗುತ್ತಿತ್ತು. ಕಲಾವಿದನಿಗೆ ತನ್ನ ಕಲೆಯ ನಿಕಟ ಪರಿಚಯ ವಲ್ಲದೆ ಲೋಕವ್ಯವಹಾರಜ್ಞಾನವೂ ಕಾಲೋಚಿತ ನಡವಳಿಕೆಗಳೂ ಅಗತ್ಯ ವೆಂದು ಅವನಿಗೆ ಅರ್ಥವಾಗಲು ಹೆಚ್ಚುಕಾಲ ಬೇಕಾಗಲಿಲ್ಲ. ಕೂಪ ದಲ್ಲೊಂದು ಕೂರ್ಮವಾಗಿದ್ದರೆ ಸಾಕೆಂದು ಅವನು ಬಯಸಿರಲಿಲ್ಲ. ಕಲಾವಿದ ಬೌದ್ಧಿಕವಾಗಿ ಬೆಳೆಯಬೇಕಾದರೆ ತನ್ನ ಜ್ಞಾನಕ್ಷೇತ್ರವನ್ನು ವಿಸ್ತರಿಸಿ ಕೊಳ್ಳ ಬೇಕಾದ್ದು ಅನಿವಾರ್ಯವೆಂಬ ಭಾವನೆ ಅವನಲ್ಲಿ ಬೆಳೆಯಲು ತೊಡಗಿತ್ತು. ಪ್ರಪಂಚದ ಕಲೆ ಸಾಹಿತ್ಯಗಳ ಅಲ್ಪ ಸಂದರ್ಶನವಾಗಬೇಕಾದರೂ ಇಂಗ್ಲಿಷಿನ ಮೊರೆ ಹೊಗದಿದ್ದರೆ ಸಾಧ್ಯವಾಗುತ್ತಿರಲಿಲ್ಲ. ಅಂತೆಯೇ ಕನ್ನಡದಲ್ಲೂ ಸಾಕಷ್ಟು ಪರಿಣತಿ ಅಗತ್ಯವಾಗಿತ್ತು. ಜ್ಞಾನದ ಕಿಟಕಿ ತೆರೆದರೆ ಕಾಣದಿದ್ದ ಭವ್ಯ ದೃಶ್ಯವೇ ಇರಲಿಲ್ಲ.

ಮಧುಸೂದನನಿಗೆ ಸಾಹಿತ್ಯದ ಹುಚ್ಚು ಹಿಡಿಸಿದವನೇ ಸುಬ್ಬಕೃಷ್ಣ. ಕಾಲೇಜಿನಲ್ಲಿ ಕನ್ನಡ ಲೆಕ್ಚರರಾಗಿದ್ದ ಅವನಿಗ ಕನ್ನಡದ ಅಭಿಮಾನ ನೈಸರ್ಗಿಕ ವಾಗಿತ್ತು. ಭಾಷಾ ಶುದ್ಧಿಯಿಂದ, ಅರ್ಥವತ್ತಾಗಿ ಹಾಡುವುದರಲ್ಲಿ ಸಂಗೀತಕ್ಕೆ ಎಂಥ ಸೊಗಸು ಬರುತ್ತದೆಂಬುದನ್ನು ಅವಕಾಶ ಸಿಕ್ಕಿದಾಗಲೆಲ್ಲಾ ಸುಬ್ಬಕೃಷ್ಣ ಗೆಳೆಯನಿಗೆ ಹೇಳುತ್ತಿದ್ದ. ಕನ್ನಡದ ಅನೇಕ ಹೊಸ ಕೃತಿಗಳನ್ನು ತಂದು ಕೊಟ್ಟು ಅವಕ್ಕೆಲ್ಲಾ ಪ್ರಸ್ತಾರ ಹಾಕಿ ಹಾಡುವಂತೆ ಪ್ರೇರಿಸುತ್ತಿದ್ದ.

ಇದೆಲ್ಲಾ ಮಧುಸೂದನನ ತಲೆಯಲ್ಲಿ ಹೊಸ ಹೊಸ ಭಾವನೆಗಳನ್ನು ಮೂಡಿಸುತ್ತಿತ್ತು. ಸುಬ್ಬಕೃಷ್ಣ ತಂದುಕೊಡುತ್ತಿದ್ದ ಗ್ರಂಥಗಳನ್ನು ತಪ್ಪದೆ ಓದುತ್ತಿದ್ದ. ಸಂಗೀತ ಪಾಠ, ಸ್ವಂತದ ಅಭ್ಯಾಸ, ಗ್ರಂಥವ್ಯಾಸಂಗಗಳಿಗೆ ಅವನಿಗೆ ಹೊತ್ತು ಏನೇನೂ ಸಾಕಾಗುತ್ತಿರಲಿಲ್ಲ. ಓದಿದಷ್ಟೂ ಜ್ಞಾನದ ಹಸಿವು ಹೆಚ್ಚಾಗುತ್ತಿತ್ತು ಮಧುಸೂದನ ದೇಹದ ಸುಖವನ್ನು ನಿರ್ಲಕ್ಷಿಸಿ ಕೆಲಸ ಮಾಡತೊಡಗಿದ.

ಅವನ ಸ್ವಭಾವದಲ್ಲಿ ದಿನೇ ದಿನೇ ಆಗುತ್ತಿದ್ದ ಬದಲಾವಣೆಗಳನ್ನು ವೆಂಕಮ್ಮನವರು ಗಮನಿಸದೆ ಇರಲಿಲ್ಲ. ಮಗ ಶಕ್ತಿಮೀರಿ ದುಡಿಯು ತ್ತಿದ್ದಾನೆಂಬ ಭಾವನೆ ಅವರಿಗೆ ಬರಲಾರಂಭಿಸಿತು. ಬೆಳಗ್ಗೆ ಅಷ್ಟುಹೊತ್ತಿಗೇ ಎದ್ದರೆ ರಾತ್ರಿ ಹನ್ನೆರಡು ಘಂಟೆಯವರೆಗೂ ದೇಹವನ್ನು ಒಂದೇ ಸಮನಾಗಿ

ಬಳಲಿಸುತ್ತಿದ್ದ ಅವನನ್ನು ನೋಡಿ ಅವರ ಕರುಳು ಹಿಂಡುತ್ತಿತ್ತು. ಒಂದೊಂದು ಸಲ ಅವನ ದುಡಿತ ನೋಡಿ ಸಹಿಸಲಾರದೆ,

"ಮಧೂ, ನಿದ್ದೆ ನೀರಡಿಕೆ ಇಲ್ಲದೆ ಹೀಗೆ ದುಡಿದರೆ ಏನು ಗತಿಯಾಗ ಬೇಕಪ್ಪಾ? ಒಂದು ಕ್ಷಣವಾದರೂ ವಿಶ್ರಾಂತಿ ಬೇಡವೇನೋ?"

ಎನ್ನುತ್ತಿದ್ದರು. ಅವರ ಮಾತಿಗೆ ಉತ್ತರವಾಗಿ ಅವನು ಸುಮ್ಮನೆ ನಕ್ಕು ಬಿಡುತ್ತಿದ್ದ. ತುಂಬ ಛೇಡಿಸಿದರೆ,

"ವಿದ್ಯೆ ಅಗಾಧ ಪರ್ವತವಮ್ಮಾ, ತೋಡಿದಷ್ಟೂ ಇದೆ. ಒಂದು ಜೀವ ಮಾನವೆಲ್ಲಾ ಸವೆಸಿದರೂ ಅದರಲ್ಲಿ ಕಣದಷ್ಟಾದರೂ ನಮ್ಮ ಕೈಸೇರಿರುವುದಿಲ್ಲ"

ಎಂದು ಉತ್ತರ ಕೊಡುತ್ತಿದ್ದ.

"ಏನು ಸವೆಸುವುದೋಪ್ಪ. ನನಗೆ ಬೇರೆ ಅರ್ಥವಾಗುವುದಿಲ್ಲ. ಹೀಗೆ ಹೊತ್ತಿಗೆ ಗೊತ್ತಿಗೆ ಅನ್ನ ನೀರಿಲ್ಲದೆ ಮೈ ಸವೆಸಿ ಸವೆಸಿ ಯಾವ ಪುರುಷಾರ್ಥ ಸಾಧಿಸಬೇಕೋ ನಾನು ಬೇರೆ ಕಾಣೆ."

ತಾಯಿಯ ಬುದ್ಧಿ ಹಿಡಿಯುವ ಜಾಡನ್ನು ನೋಡಿ ಮಧು ನಗುತ್ತಿದ್ದ. 'ಪುರುಷಾರ್ಥ' ಕ್ಕೆ ವೆಂಕಮ್ಮನವರು ಕಲ್ಪಿಸುತ್ತಿದ್ದ ಮೇರೆ ಅವನ ಮನಸ್ಸಿನಲ್ಲಿ ವಿಚಾರ ತರಂಗಗಳನ್ನೆಬ್ಬಿಸುತ್ತಿತ್ತು. ಹೊಟ್ಟೆಬಟ್ಟೆಗಳೇ ಮಾನವನ ಜೀವಿತದ ಮಿತಿಯೆ? ಅದಕ್ಕೋಸ್ಕರವೇ ಇಷ್ಟೆಲ್ಲ ಹೊಡೆದಾಟವೆ? ಅದನ್ನು ಮೀರಿದ ಪ್ರಪಂಚವೇ ಇಲ್ಲವೆ? ತನ್ನ ದೃಷ್ಟಿದಿಗಂತದಾಚೆ ಬೇರೆ ಪ್ರಪಂಚವೇ ಇಲ್ಲವೆಂದು ಭಾವಿಸುವ ತಿಳಿಗೇಡಿಯಂತೆ ಮನುಷ್ಯ ತನ್ನ ವ್ಯಾಪ್ತಿಯನ್ನು ತಾನೇ ಕಿರಿದು ಮಾಡಿಕೊಂಡು, ಹೊಳೆಯಲ್ಲಿ ಈಜುವ ಅವಕಾಶವಿದ್ದರೂ ಕುಂಟೆಯ ನೀರಿಗೇ ಹಾತೊರೆಯುವ ಎಮ್ಮೆಯ ಹಾಗೆ ತೊಳಲುತ್ತಿಲ್ಲವೆ – ಎನ್ನಿಸುತ್ತಿತ್ತು. ಒಂದು ಪ್ರಶ್ನೆ ಇನ್ನೊಂದಕ್ಕೆ ಕೊಂಡಿ ಹಾಕಿ ಪ್ರಶ್ನೆಗಳ ಮಾಲೆಯೇ ಮನಸ್ಸಿನ ಮುಂದೆ ತೂಗುತ್ತಿತ್ತು.

ದಿನದಿನಕ್ಕೂ ಅವನಿಗೆ ಜ್ಞಾನತೃಷೆ ಹೆಚ್ಚುತ್ತಿತ್ತು. ಪ್ರಶ್ನೆಗಳನ್ನು ಮಥಿಸಿ ನೋಡುವ, ಪೂರ್ವಾಪರಗಳನ್ನು ವಿವೇಚಿಸುವ ಬುದ್ಧಿ ಹರಿತವಾಗುತ್ತಿತ್ತು. ಅವಕಾಶ ಸಿಕ್ಕಿದಾಗಲೆಲ್ಲಾ ಸುಬ್ಬಕೃಷ್ಣನೊಡನೆ ಜೀವನದ ಮೂಲಪ್ರಶ್ನೆಗಳನ್ನು ಕುರಿತು ಚರ್ಚಿಸುತ್ತಿದ್ದ. ವಿಷಯ ಆಧ್ಯಾತ್ಮಿಕಕ್ಕೆ ತಿರುಗಿ ಒಮ್ಮೊಮ್ಮೆ ಗಂಭೀರ ವಾಗುತ್ತಿತ್ತು. ರಾಮಾಯಣ, ಗೀತೆ, ಉಪನಿಷತ್ತುಗಳ ವಿಷಯವೂ ಚರ್ಚೆಗೆ

ಬರುತ್ತಿತ್ತು. ಅದರ ಕ್ಷಣ ದರ್ಶನದಿಂದ ಅವನ ಅಂತರಂಗ ಪುಲಕಿತವಾಗುತ್ತಿತ್ತು. ಸೃಷ್ಟಿಯ ಅಮೇಯತೆಯಂತೆ ಅವರು ನಡೆಸುತ್ತಿದ್ದ ಚರ್ಚೆಗಳಿಗೆ ಆದಿ-ಅಂತ್ಯ ಗಳೇ ಇರುತ್ತಿರಲಿಲ್ಲ.

ರಾತ್ರಿ ಮಲಗಿದ್ದಾಗ ಅನೇಕ ಪ್ರಶ್ನೆಗಳು ಮೈತಾಳಿ ಬಂದು ಮುಂದೆ ನಿಲ್ಲುತ್ತಿದ್ದುವು. ಹೊಸದಾಗಿ ನೋಡಿ, ಮನಸ್ಸಿಗೆ ಇಳಿಸಿಕೊಳ್ಳಲೆತ್ನಿಸುತ್ತಿದ್ದ ಶ್ಲೋಕ ಭಾಗಗಳು ತಮಗೆ ತಾವೇ ಮನಸ್ಸಿನಲ್ಲಿ ಉದ್ಧೃತವಾಗುತ್ತಿದ್ದವು.

"ಶ್ರದ್ಧಾವಾನ್ ಲಭತೇ ಜ್ಞಾನಂ"
"ನಹಿ ಜ್ಞಾನೇ ನ ಸದೃಶಂ"
"ನಾಯಮಾತ್ಮಾ ಬಲಹೀನೇ ನ ಲಭ್ಯಃ"

ಹೌದು ಎಂದು ಆ ಮಾತಿಗೆ ಉತ್ತರ ಹೇಳುವನಂತೆ ಧಿಗ್ಗನೆದ್ದು ಕುಳಿತು ಕೊಳ್ಳುತ್ತಿದ್ದ. ಹೊರಗೆ ಮಲಗಿರುವ ತಾಯಿಗೆ ನಿದ್ರಾಭಂಗವಾದೀತೆಂಬ ಶಂಕೆಯೂ ಇಲ್ಲದೆ ತಂಬೂರಿಯನ್ನು ಕೈಗೆತ್ತಿಕೊಂಡು ಅದರ ನಾದದಿಂದ ಉದ್ದೀಪ್ತನಾಗಿ, ಮಾತಿನಲ್ಲಿ ಬಣ್ಣಿಸಲಾಗದ ಹೃದಯದ ನಾನಾ ನಿಗೂಢ ಸಂವೇದನೆಗಳನ್ನು ಆಲಾಪನೆಯಲ್ಲಿ ತೋಡಿಕೊಂಡು ಅದರಲ್ಲೇ ಕರಗಿ ಹೋಗುತ್ತಿದ್ದ.

# ೧೪

ಮಧುಸೂದನನಲ್ಲಿ ಆಗುತ್ತಿದ್ದ ಮಾರ್ಪಾಡುಗಳನ್ನು ಚಾಣಾಕ್ಷ ಸುಬ್ಬಕೃಷ್ಣ ಗಮನಿಸದೆ ಇರಲಿಲ್ಲ. ಮಧು ಚಿಲ್ಲರೆ ಸಂಗೀತಗಾರರ ದರ್ಜೆಗೆ ಸೇರಿ ಹತ್ತರಲ್ಲಿ ಹನ್ನೊಂದಾಗುವುದು ಸುಬ್ಬಕೃಷ್ಣನಿಗೆ ಇಷ್ಟವಿರಲಿಲ್ಲ. ತನ್ನ ಗೆಳೆಯನಲ್ಲಿ ಅಪೂರ್ವವಾದ ಯಾವುದೋ ಶಕ್ತಿಯಿರಬೇಕೆಂಬ ಸಂದೇಹ ಆಗಾಗ ಅವನಿಗೆ ಬರುತ್ತಿತ್ತು. ಅವನ ಹಾಡಿಕೆ ಕೇಳಿದಾಗಲೆಲ್ಲಾ ಸುಬ್ಬಕೃಷ್ಣನಿಗೆ 'ಇದರಲ್ಲೇನೋ ಹೊಸತನವಿರುವ ಹಾಗೆ ಕಾಣುವುದಲ್ಲಾ, ಏನೆಂದು ಅರ್ಥವಾಗುವುದಿಲ್ಲವೇ' ಎನಿಸುತ್ತಿತ್ತು. ಸ್ವತಃ ಸಂಗೀತಗಾರನಲ್ಲದಿದ್ದರೂ ಸುಬ್ಬಕೃಷ್ಣ ಮೇಲಿಂದ ಮೇಲೆ ಕಚೇರಿ ಕೇಳಿ ಕೇಳಿ ಒಂದು ಶ್ರವಣಪಕ್ವತೆ ಗಳಿಸಿಕೊಂಡಿದ್ದ. ಶಾಸ್ತ್ರಜ್ಞನಲ್ಲದಿದ್ದರೂ ರಸಜ್ಞನಾದ ಅವನಿಗೆ ಮಧು ದೊಡ್ಡ ಸಂಗೀತಗಾರನೆನ್ನಿಸಿಕೊಳ್ಳಬೇಕೆಂಬ ಹಂಬಲವಿತ್ತು. ಅವಕಾಶ ಸಿಕ್ಕಿದಾಗಲೆಲ್ಲಾ ಸ್ನೇಹಿತನ ಕಿವಿಗೆ ತನ್ನ ವಾಂಛೆಯನ್ನು ತುಂಬುತ್ತಿದ್ದ; ಅವನ ಹಾಡಿಕೆಯ ವಿಮರ್ಶೆ ಮಾಡುತ್ತಿದ್ದ.

ಮಧು ಕೀರ್ತಿಶಾಲಿಯಾಗಬೇಕೆಂದು ನಿರ್ವಂಚನೆಯಿಂದ ಬಯಸುತ್ತಿದ್ದ ಸುಬ್ಬಕೃಷ್ಣ ಗೆಳೆಯನ ಏಳಿಗೆಯ ಜಾಡನ್ನು ಸೂಕ್ಷ್ಮವಾಗಿ ಪರಿಶೀಲಿಸುತ್ತಿದ್ದ. ಸಂಗೀತ ಕಚೇರಿಗಳಲ್ಲಿ ಗೆಳೆಯನಿಗೆ ಶಹಭಾಸ್‌ಗಿರಿ ಬಂದರೆ, ಸಂಘ ಸಂಸ್ಥೆಗಳಿಂದ ಪ್ರಶಂಸೆ ಬಂದರೆ, ಪತ್ರಿಕೆಗಳಲ್ಲಿ ಅವನ ಸುದ್ದಿ ಬಂದರೆ ಮೊದಲು ಸಂಭ್ರಮಿಸುತ್ತಿದ್ದವನು ಸುಬ್ಬಕೃಷ್ಣ. ಮಿತ್ರನ ಸಂಕಟದ ಬಾಳನ್ನು ಕಂಡು

ಅವನು ಸಂಗೀತಕ್ಕಾಗಿ ಪಟ್ಟ ಶ್ರಮಗಳನ್ನು ಅರಿತಿದ್ದ ಸುಬ್ಬಕೃಷ್ಣನಿಗೆ ಸ್ನೇಹಿತನನ್ನು ಕುರಿತು ಬರುವ ಪ್ರಶಂಸೆಗಳೆಲ್ಲವೂ ತನಗೇ ಬಂದಹಾಗೆ ಚತುರ್ಭುಜವಾಗುತ್ತಿತ್ತು.

ಅಂತೆಯೆ, ಮದರಾಸ್ ರೇಡಿಯೋ ನಿಲಯದಿಂದ ಮಧುಸೂದನನಿಗೆ ಆಹ್ವಾನ ಬಂದಾಗ ಅವನಿಗಿಂತ ಹೆಚ್ಚಾಗಿ ಸುಬ್ಬಕೃಷ್ಣನಿಗೆ ಸಂತೋಷವಾಗಿತ್ತು. ನಿಲಯದವರು ಒಂದು ಘಂಟೆಯ ಕಚೇರಿ ಕೋರಿ ಪ್ರಾರ್ಥನಾ ಪತ್ರ ಕಳಿಸಿದ್ದರು. ಪತ್ರ ಬಂದ ಮರುದಿನವೇ ಮಧು ಅದನ್ನು ಸುಬ್ಬಕೃಷ್ಣನ ಕೈಯಲ್ಲಿಟ್ಟ. ಸುಬ್ಬಕೃಷ್ಣನ ಅದನ್ನು ಆಮೂಲಾಗ್ರವಾಗಿ ಓದಿ,

"ಹೋಗಿಬಿಟ್ಟು ಬಾ. ಒಳ್ಳೇ ಅವಕಾಶ"

ಎಂದ.

"ನೀನು ?"

"ನಾನೇಕೆ? ನೀನೊಬ್ಬನೇ ಹೋಗಿ ಬಂದರೆ ಸಾಲದೆ?"

"ಜೊತೆಗೆ ನೀನೂ ಬಂದರೆ ಚೆನ್ನಾಗಿರತ್ತೆ. ಮದರಾಸಿನಲ್ಲಿ ಎರಡು ದಿನ ಓಡಾಡಿಕೊಂಡು ಬರಬಹುದು."

"ಬರುವುದಕ್ಕೇನೂ ಅಡ್ಡಿ ಇಲ್ಲ. ಆದರೆ ರಜಾ ಸಿಕ್ಕುವುದೋ ಇಲ್ಲವೋ ಹೇಳುವುದು ಕಷ್ಟ. ಮೊನ್ನೆತಾನೆ ಕಾಲೇಜ್ ಬಾಗಿಲು ತೆಗೆದಿದೆ. ಸಿಕ್ಕಿದರಂತೂ ಬರುತ್ತೇನೆ. ಇಲ್ಲದಿದ್ದರೆ ಒಬ್ಬನೇ ಹೋಗಿ ಬಾ. ಮದರಾಸೇನೂ ಹುಲಿಯಲ್ಲ."

ಮಧುಸೂದನನಿಗೆ ಅತೃಪ್ತಿಯಾಯಿತು. ಸುಬ್ಬಕೃಷ್ಣ ಏಕೋ ಹಿಂದೇಟು ಹಾಕುತ್ತಿದಾನೆಂಬ ಸಂಶಯ ಅವನಿಗೆ ಬಂದಿತು. ಹೆಂಡತಿಯನ್ನು ಬಿಟ್ಟು ಒಬ್ಬನೇ ಪ್ರವಾಸ ಬರಲು ಅವನು ಹಿಂತೆಗೆಯುತ್ತಿರಬಹುದೇ ಎಂಬ ಸಂಶಯವೂ ಬಾರದಿರಲಿಲ್ಲ. ಮನಸ್ಸಿಗೆ ಕಸಿವಿಸಿಯಾಯಿತು.

ಸುಬ್ಬಕೃಷ್ಣನಿಗೆ ಮಿತ್ರನ ಮನಸ್ಸಿನಲ್ಲಿ ಏನೋ ನಡೆಯುತ್ತಿದೆಯೆಂಬುದು ಅರ್ಥವಾಗದೆ ಇರಲಿಲ್ಲ. ಸ್ವಲ್ಪ ಸತಾಯಿಸಿ ನೋಡೋಣವೆಂದೇ ಅವನು ಹಾಗೆಂದಿದ್ದ. ಆದರೆ ಅವನ ಮನಸ್ಸಿಗೆ ಕಿರಿಕಿರಿಯಾದದ್ದು ನೋಡಿ ಸುಬ್ಬಕೃಷ್ಣನಿಗೆ ಚುರುಕ್ ಎಂದಿತು.

" ಬರುತ್ತೇನೆ ಮಹರಾಯ, ಬರುತ್ತೇನೆ. ಸದ್ಯ, ನೀನು ಕೋಪಿಸಿಕೊಳ್ಳ ಬೇಡ. ಆದರೆ ಮದರಾಸಿನಲ್ಲಿ ಹೆಚ್ಚು ದಿನ ನಿಲ್ಲಲು ಅವಕಾಶವಿರುವುದಿಲ್ಲ. ನನ್ನಿಂದ ನೀನು ಮೈಸೂರಿಗೆ ಬೇಗ ಓಡಿ ಬರಬೇಕಾಗತ್ತೆ."

ಮಧುಸೂದನನಿಗೆ ಬೇಕಾಗಿದ್ದದ್ದೂ ಅದೇ. ಅವನಿಗೂ ಮದರಾಸಿನಲ್ಲಿ ಹೆಚ್ಚು ದಿನ ವೃಥಾ ಕಳೆಯುವುದಕ್ಕೆ ಇಷ್ಟವಿರಲಿಲ್ಲ.

ರೇಡಿಯೋ ಕಾರ್ಯಕ್ರಮ ಶನಿವಾರವೇ ಇದ್ದದ್ದರಿಂದ ಅನುಕೂಲವಾಗಿಯೇ ಇತ್ತು. ಗೆಳೆಯರಿಬ್ಬರೂ ಶುಕ್ರವಾರ ಬೆಳಗ್ಗೆ ಮೈಸೂರು ಬಿಟ್ಟವರು ಶನಿವಾರ ಬೆಳಗ್ಗೆ ಮದರಾಸ್ ಸೆಂಟ್ರಲ್ ಸ್ಟೇಷನ್ನಿನಲ್ಲಿಳಿದರು. ನೇರವಾಗಿ ತಂಬೂಚೆಟ್ಟಿ ರಸ್ತೆಯಲ್ಲಿದ್ದ 'ಮೈಸೂರು ಕೆಫೆ'ಗೇ ರಿಕ್ಷಾ ಹೊಡೆಸಿದರು. ಹೋಟೆಲಿನ ಮೂರನೇ ಅಂತಸ್ತಿನಲ್ಲಿ ಹೆಚ್ಚು ಗಲಭೆಯಿಲ್ಲದಿದ್ದ ಕಡೆ ಪ್ರತ್ಯೇಕವಾಗಿ ಒಂದು ರೂಮೂ ಸಿಕ್ಕಿತು. ಸ್ನಾನ ಫಲಾಹಾರ ಮುಗಿಸಿಕೊಂಡು ತಿರುಗಾಡಿಕೊಂಡು ಬರುವುದಕ್ಕೆ ಹೊರಟರು.

ಎಲ್ಲೆಲ್ಲೋ ಸುತ್ತಿಕೊಂಡು ಅಡ್ಯಾರ್‌ಗೆ ಹೋಗಿ ಅಲ್ಲಿಂದ ಹಿಂತಿರುಗಿ ಬರುವ ಹೊತ್ತಿಗೆ ಹನ್ನೆರಡು ಘಂಟೆಯಾಗಿತ್ತು. ಮದರಾಸಿನ ಬೆಂಕಿಯ ಬಿಸಿಲಿನಲ್ಲಿ ಬೆಳಗ್ಗೆ ಬಿದ್ದಿದ್ದ ಇಡ್ಲಿ ವಡೆ ಹೇಳಹೆಸರಿಲ್ಲವಾಗಿದ್ದವು. ಹೊಟ್ಟೆ ಹಪಹಪ ಎನ್ನುತ್ತಿತ್ತು. ಇಬ್ಬರೂ ಊಟಕ್ಕೆ ಕುಳಿತು ಪೊಗದಸ್ತಾಗಿ ಭೋಜನ ಮಾಡಿದರು. ಸೊಗಸಾದ ಊಟ. ಮೈಸೂರಿನವರೆಂದು ತಿಳಿದ ಮೇಲೆ ಹೆಚ್ಚು ಉಪಚಾರವೇ ನಡೆಯಿತು.

ಊಟದ ಭಾರಕ್ಕೆ ಕಣ್ಣೆಳೆದುಕೊಂಡು ಹೋಗುತ್ತಿತ್ತು. ಇಬ್ಬರೂ ಕೈತೊಳೆದುಕೊಂಡು ರೂಮು ಸೇರಿ ಹಾಸಿಗೆಯ ಮೇಲೆ ಉರುಳಿಕೊಂಡರು. ಬಿಸಿಲು ಭಯಂಕರವಾಗಿದ್ದರೂ ಮಹಡಿಯ ಮೇಲೆ ಗಾಳಿ ಹೊಡೆಯುತ್ತಿತ್ತು. ಒಂದು ಗಳಿಗೆಯಲ್ಲಿ ನಿದ್ದೆ ಹತ್ತಿಬಿಟ್ಟಿತು. ಎಚ್ಚರವಾದಾಗ ಐದು ಘಂಟೆ.

ಉಪಾಹಾರ ಮುಗಿಸಿಕೊಂಡು ಎಗ್ಮೋರಿನಲ್ಲಿದ್ದ ರೇಡಿಯೋ ನಿಲಯದ ಕಡೆ ಹೊಟರು. ಅಲ್ಲಿಗೆ ಸೇರಿದಾಗ ಏಳು ಘಂಟೆ. ನಿಲಯದ ಮುಖ್ಯಸ್ಥ ಕುಪ್ಪುಸ್ವಾಮಿ ನಗುಮುಖದಿಂದ ಸ್ವಾಗತಿಸಿದರು.

" ನಿಮ್ಮ ವಿಚಾರ ತುಂಬ ಕೇಳಿದ್ದೇನೆ. ಭೇಟಿಯಾದದ್ದು ಸಂತೋಷ "

ಎಂದು ಕಾಫಿ ತರಿಸಿಕೊಟ್ಟು ಉಪಚರಿಸಿದರು. ಮಧುಸೂದನ ಸುಬ್ಬ ಕೃಷ್ಣನನ್ನು ಕುಪ್ಪುಸ್ವಾಮಿಗೆ ಪರಿಚಯ ಮಾಡಿಸಿಕೊಡುತ್ತ,

"ಇವರು ನನ್ನ ಸ್ನೇಹಿತರು ಮಿ॥ ಸುಬ್ಬಕೃಷ್ಣ. ಮೈಸೂರು ಕಾಲೇಜಿನಲ್ಲಿ ಕನ್ನಡದ ಲೆಕ್ಚರರಾಗಿದ್ದಾರೆ."

"ಬಹಳ ಸಂತೋಷ"

ಎಂದು ಕುಪ್ಪುಸ್ವಾಮಿ ಸುಬ್ಬಕೃಷ್ಣನ ಕೈಕುಲುಕಿಸಿದರು.

ಕಾರ್ಯಕ್ರಮ ಆರಂಭವಾಗುವುದಕ್ಕೆ ಇನ್ನೂ ಒಂದು ಘಂಟೆಯಿತ್ತು. ಗೆಳೆಯರು ನಿಲಯದ ಮುಂದಿನ ತೋಟದಲ್ಲಿ ಮಾತಾಡುತ್ತ ಕುಳಿತರು. ಮಧು ಸೂದನನಿಗೆ ಒಂದು ಸಮಸ್ಯೆ ಬಗೆಹರಿಯದೆ ಇತ್ತು. ಅದನ್ನು ಪರಿಹರಿಸಿ ಕೊಳ್ಳಲೆಳಸಿ,

"ರೇಡಿಯೋ ನಿಲಯದಿಂದ ನನಗೆ ಆಹ್ವಾನ ಬಂದಾಗ ನನಗೆ ಅಚ್ಚರಿ ಯಾಯಿತು. ನನ್ನ ವಿಚಾರ ಕೇಳಿದ್ದೀರೆಂದು ನೀವು ಹೇಳಿದ್ದು ಕೇಳಿ ಇನ್ನೂ ಆಶ್ಚರ್ಯವಾಯಿತು. ಮೈಸೂರಿನ ಹೊರಗಿರುವವರ ಮಾತಿರಲಿ, ಅಲ್ಲಿರುವವರಿಗೇ ಅನೇಕರಿಗೆ ನನ್ನ ಪರಿಚಯವಿಲ್ಲ. ನಿಮಗೆ ಗೊತ್ತಾದದ್ದು ಹೇಗೆ? ನನ್ನ ವಿಳಾಸ ಹೇಗೆ ತಿಳಿಯಿತು?"

ಕುಪ್ಪುಸ್ವಾಮಿ ಅರ್ಥಗರ್ಭಿತವಾಗಿ ಮುಗುಳ್ನಗೆ ಬೀರಿದರು.

"ನಿಮ್ಮ ಗುರುಗಳ ಹೆಸರು ಈ ಕಡೆ ಚೆನ್ನಾಗಿದೆ. ಅವರ ಹಾಡಿಕೆಯನ್ನು ಈ ಪ್ರಾಂತದ ಜನ ಬಹಳ ಮೆಚ್ಚುತ್ತಾರೆ. ನೀವು ಅವರ ಶಿಷ್ಯರೆಂದು ನಮಗೆ ಈಚೆಗೆ ಗೊತ್ತಾಯಿತು. ನಿಮ್ಮ ಹಾಡಿಕೆಯನ್ನು ಕುರಿತು ಈಚೆಗೆ "ಕಲ್ಕಿ" "ಕಲಾವಿದ" ಮುಂತಾದ ತಮಿಳು, ಕನ್ನಡ ಪತ್ರಿಕೆಗಳಲ್ಲಿ ಲೇಖನಗಳನ್ನು ನೋಡಿದ್ದೆವು. ದೇವರನಾಮುಗಳ ಹಾಡಿಕೆಯಲ್ಲಿ ನಿಮ್ಮ ಶೈಲಿ ಚೆನ್ನಾಗಿದೆ ಯೆಂದು ತಿಳಿದುಬಂತು. ರೇಡಿಯೋ ಶ್ರಾವಕರಿಗೆ ಇದಕ್ಕಿಂತ ಬೇರೆ ಅವಕಾಶ ಬೇಕೆ ಎಂದು ಯೋಚಿಸಿ ನಿಮಗೆ ತೊಂದರೆ ಕೊಟ್ಟೆವು."

"ಈ ಪ್ರಶಂಸೆಗೆ ನಾನು ಅರ್ಹನೇ?"

"ಅರ್ಹರೆಂಬುದನ್ನು ನೀವೇ ಇವತ್ತು ತೋರಿಸುತ್ತೀರಿ"

ಎಂದು ಕುಪ್ಪುಸ್ವಾಮಿ ನಕ್ಕರು. ಸುಬ್ಬಕೃಷ್ಣನೂ ಅವರ ಮಾತಿಗೆ ತಲೆ ದೂಗಿದ. ಹೊತ್ತಾಗುತ್ತ ಬರಲು ಕುಪ್ಪುಸ್ವಾಮಿ ಮಧುಸೂದನನನ್ನು ಕರೆದು

ಕೊಂಡು ಸ್ಟುಡಿಯೋ ಪ್ರವೇಶಿಸಿದರು. ಸುಬ್ಬಕೃಷ್ಣ ಹೊರಗಿನ ಶ್ರಾವಕ ಮಂದಿರದಲ್ಲಿ ಹಾಕಿದ್ದ, ಸೋಫಾದ ಮೇಲೆ ಕುಳಿತು ಟೀಪಾಯ್ ಮೇಲಿದ್ದ 'ಲಿಸ್ನರ್' ತಿರುವಿ ಹಾಕತೊಡಗಿದ.

ಮಧುಸೂದನನ ಹಾಡಿಕೆಗೆ ನಿಲಯದ ವಿದ್ವಾಂಸರೇ ಪಕ್ಕವಾದ್ಯ ನುಡಿಸಲು ಸಿದ್ಧವಾಗಿದ್ದರು.

ಎಂಟು ಘಂಟೆಗೆ ಸರಿಯಾಗಿ ಕಾರ್ಯಕ್ರಮ ಪ್ರಾರಂಭವಾಯಿತು. ಮಧು ಮೋಹನದಲ್ಲಿ ಒಂದು ವರ್ಣ ಹಾಡಿದ. ರೀತಿಗೌಳ ರಾಗವನ್ನು ಆಲಾಪಿಸಿ ಅದರಲ್ಲಿ ಒಂದು ಕೃತಿ ಹಾಡಿದ. ಸುರಟಿ, ಬಲಹಂಸ, ಹುಸೇನಿ ರಾಗಗಳಲ್ಲಿ ಮೂರು ಕೃತಿಗಳಾದವು. ಸಂಸ್ಕೃತದ ಒಂದು ಶ್ಲೋಕವನ್ನು ಮಲಯಮಾರುತ, ಸಿಂಧುಭೈರವಿ, ಕೇತಾರಗೌಳ, ಪೂರ್ವಕಲ್ಯಾಣಿಗಳಲ್ಲಿ ರಸವತ್ತಾಗಿ ಹಾಡಿದ. ದೇವರನಾಮಗಳ ಪೈಕಿ "ನಾ ನಿನ್ನ ಧ್ಯಾನದೊಳಿರಲು" ಎಂಬುದನ್ನು ಬೇಗಡೆ ಯಲ್ಲಿಯೂ "ಕನಕಮುನಿ ಕರಕಮಲ" ಎಂಬುದನ್ನು ಆನಂದಭೈರವಿಯಲ್ಲಿಯೂ ಹಾಡಿದ.

ಒಂಬತ್ತು ಘಂಟೆಯ ಹೊತ್ತು ಸಮಿಾಪಿಸುತ್ತಿತ್ತು. ಅವನ ದೃಷ್ಟಿ ಗಡಿಯಾರದ ಮೇಲೆಯೇ ಇತ್ತು. ಮಂಗಳ ಹಾಡಿ ಮುಗಿಸುವ ಹೊತ್ತಿಗೆ ಒಂಬತ್ತಕ್ಕೆ ಒಂದು ನಿಮಿಷ ಉಳಿದಿತ್ತು.

ಕಾರ್ಯಕ್ರಮ ಮುಗಿಸಿಕೊಂಡು ಹೊರಗೆ ಬಂದಾಗ ಸುಬ್ಬಕೃಷ್ಣ ನಗುತ್ತ ಸ್ವಾಗತಿಸಿದ. 'ನಾನು ಏನು ಹೇಳಿದೆ ನೋಡಿದೆಯಾ?' ಎನ್ನುವ ಭಾವ ಅವನ ಮುಖದ ಮೇಲಿತ್ತು.

"ಭರ್ಜರಿ ಕಚೇರಿ ಮಾಡಿಬಿಟ್ಟರು. ಇಂಥ ಕಾರ್ಯಕ್ರಮಕ್ಕೆ ಒಂದು ಘಂಟೆ ಏನೇನೂ ಸಾಲದು"

ಎಂದು ಕುಪ್ಪುಸ್ವಾಮಿ ಪೇಚಾಡಿಕೊಂಡರು.

ನಿಲಯದ ಅಸಿಸ್ಟೆಂಟ್ ಡೈರೆಕ್ಟರ್ ಷಣ್ಮುಖಂ ಪಿಳ್ಳೆ ಕಾರ್ಯಕ್ರಮವನ್ನು ಮೆಚ್ಚಿಕೊಂಡರು.

"ನಾವು ಇನ್ನು ನಿಮ್ಮನ್ನು ಬಿಡುವಹಾಗಿಲ್ಲ. ಪದೇ ಪದೇ ಹೀಗೇ ತೊಂದರೆ ಕೊಡುತ್ತಿರುತ್ತೇವೆ"

ಎಂದು ಆದರದಿಂದ ನುಡಿದು ಚೆಕ್ ಕೊಟ್ಟು ಬೀಳ್ಕೊಟ್ಟರು.

ಗೆಳೆಯರು ಗೆಲುವಿನಿಂದ ಕೂಡಿ ಹೊಟೆಲಿಗೆ ಹಿಂತಿರುಗಿದರು.

ಸೋಮವಾರ ಮೈಸೂರು ತಲಪಿದಾಗ ಒಳ್ಳೆಯ ಸ್ವಾಗತವೇ ಸಿದ್ಧವಾಗಿತ್ತು.

# ೧೫

'ರಾಷ್ಟ್ರಜ್ಯೋತಿ' ಪತ್ರಿಕೆಯಲ್ಲಿ 'ವಜ್ರಧರ' ಎಂಬ ಗುಪ್ತನಾಮ ಧೇಯದಲ್ಲಿ ಒಂದು ಲೇಖನ ಪ್ರಕಟವಾಗಿತ್ತು.

"ಶನಿವಾರ ರಾತ್ರಿ ಮದರಾಸ್ ರೇಡಿಯೋ ನಿಲಯದಿಂದ ಮೈಸೂರಿನ ಸಂಗೀತ ವಿದ್ವಾನ್ ಮಧುಸೂದನರು ಹಾಡಿದರು. ಅವರ ಹಾಡಿಕೆ ನಮ್ಮ ತರುಣ ಸಂಗೀತಗಾರರು ಯಾವ ದಾರಿ ಹಿಡಿಯುತ್ತಿದಾರೆಂಬುದಕ್ಕೆ ಸಾಕ್ಷಿಯಾಗಿತ್ತು. ಸಂಪ್ರದಾಯವನ್ನು ಉಲ್ಲಂಘಿಸುವುದೇ ಶ್ರೀಯುತರ ವೈಶಿಷ್ಟ್ಯವಾಗಿರುವಂತೆ ಕಾಣುತ್ತದೆ. ಅವರ ಶಾರೀರ ಶೈಲಿಗಳು ಚೆನ್ನಾಗಿದ್ದರೂ ಹಾಡಿಕೆಯಲ್ಲಿ ಅಂಗೀಕೃತ ಮಾರ್ಗವನ್ನು ಬಿಟ್ಟು ನಡೆಯುವ ಸ್ವಚ್ಛಂದ ಧೋರಣೆ ಕಂಡು ಬರುತ್ತಿತ್ತು. ಸ್ವರಸಂಚಾರ ವಿಚಿತ್ರವಾಗಿತ್ತು. ಅವರು ದಾಸರ ಕೀರ್ತನೆ ಗಳಿಗೆ ಕೊಟ್ಟ ಪ್ರಾಶಸ್ತ್ಯ ಸಲ್ಲದೆನಿಸುತ್ತದೆ."

"ಪ್ರಸಿದ್ಧ ವಾಗ್ಗೇಯಕಾರರ ತೆಲುಗು ಕೃತಿಗಳನ್ನು ನಿರ್ಲಕ್ಷಿಸಿ, ಸಂಗೀತ ಲಕ್ಷಣ ಶಯ್ಯೆಗಳಿಗೆ ಅಷ್ಟಾಗಿ ಒಗ್ಗದ ಕನ್ನಡದ ಹಾಡುಗಳನ್ನು ಮೆರೆಸುವ ಚಾಳಿ ಈಚೆಗೆ ಕೆಲವು ವಿದ್ವಾಂಸರಲ್ಲಿ ಕಂಡು ಬರುತ್ತಿದೆ. ಹೀಗೆ ಸಾಮಾನ್ಯವಾದ ದಾಸರ ಪದಗಳನ್ನು ಸಂಗೀತ ಕಚೇರಿಯ ಮಟ್ಟಕ್ಕೇರಿಸುತ್ತಿರುವ ತರುಣ ವಿದ್ವಾಂಸರಲ್ಲಿ ಮಧುಸೂದನರೂ ಒಬ್ಬರೆಂದು ವಿಷಾದದಿಂದ ಹೇಳಬೇಕಾಗಿದೆ. ದಕ್ಷಿಣಾದಿ ಸಂಗೀತದ ನಾಲ್ಕು ದಿಗ್ಗಜಗಳಂತಿರುವ ತ್ಯಾಗಯ್ಯ, ಶ್ಯಾಮಶಾಸ್ತ್ರಿ, ಮುತ್ತು ಸ್ವಾಮಿ ದೀಕ್ಷಿತರು ಮತ್ತು ಸ್ವಾತಿ ತಿರುನಾಳರ ರಸರಮ್ಯವಾದ ಕೃತಿಗಳಿರುವಲ್ಲಿ

ನಿರ್ಜೀವವಾದ ಕನ್ನಡದ ಹಾಡುಗಳಿಗೇಕೆ ಜೋತುಬೀಳಬೇಕೋ ಅರ್ಥವಾಗು ವುದಿಲ್ಲ. ಈ ದೃಷ್ಟಿಯಿಂದ ವಿದ್ವಾನ್ ಮಧುಸೂದನರ ರೇಡಿಯೋ ಕಾರ್ಯಕ್ರಮ ಶ್ರಾವಕರಿಗೆ ಅತೃಪ್ತಿಯನ್ನುಂಟುಮಾಡಿತೆಂದು ಹೇಳದೆ ವಿಧಿಯಿಲ್ಲ."

ಲೇಖನವನ್ನು ಓದಿದ ಸುಬ್ಬಕೃಷ್ಣನ ಮುಖ ಕೋಪದಿಂದ ಕೆಂಪಡರಿತು. ಅವನು ಪತ್ರಿಕೆಯನ್ನು ಮಧುಸೂದನನ ಕೈಗಿತ್ತು,

"ಈ ವಜ್ರಧರ ಯಾರು ?"

ಎಂದ. ಮಧುಸೂದನನ ಮುಖವೂ ಗಂಭೀರವಾಗಿತ್ತು.

"ಬೆಂಗಳೂರಿನಲ್ಲಿ ಶರ್ಮ ಎಂದು ಒಬ್ಬ ಸಂಗೀತ ವಿಮರ್ಶಕನಿದ್ದಾನೆ. ಅವನಿರಬಹುದು."

"ಹೀಗೆ ಬರೆಯುವುದಕ್ಕೆ ಅವನಿಗಿರುವ ಅಧಿಕಾರವಾದರೂ ಏನು ?"

"ಕೈಯಲ್ಲಿ ಲೇಖನಿಯಿರುವುದೇ ಅಧಿಕಾರ. ಬರೆದದ್ದನ್ನೆಲ್ಲಾ ಪ್ರಕಟಿಸುವ ಜನ ಇರುವಾಗ ಇಂಥ ಲೇಖನವೇ ಏಕೆ, ಇದಕ್ಕಿಂತ ಕಠಿನವಾಗಿರುವುದೂ ಪ್ರಕಟವಾಗಬಹುದು."

"ಇದು ಕಠಿನವಾಗಿಲ್ಲವೆನ್ನುತ್ತೀಯಾ ?"

"ಸಾಕಷ್ಟು ಮಾರ್ಮಿಕವಾಗಿದೆ."

"ಪತ್ರಿಕೆಗೆ ನಾನು ಉತ್ತರ ಬರೆದು ಕಳಿಸಲೆ ?"

"ಬೇಡ. ಅಂಥವರೊಡನೆ ಗುದ್ದಾಡಿ ನಿನ್ನ ಮೈಯನ್ನೂ ಏಕೆ ಕೆಸರು ಮಾಡಿಕೊಳ್ಳಬೇಕು."

"ಅವನ ಸಂಗೀತ ವಿಮರ್ಶಜ್ಞಾನ ಎಂಥದೆಂಬುದನ್ನು ಬಯಲಿಗೆಳೆಯು ತ್ತೇನೆ. ಇಂಥ ದ್ರೋಹಿಗಳಿರುವುದರಿಂದಲೇ ಕನ್ನಡನಾಡು ತನ್ನವರನ್ನು ಮರೆತು ಹೆರವರಿಗೆ ಸಲ್ಲದ ಮನ್ನಣೆ ನೀಡುತ್ತಿರುವುದು."

"ನನ್ನ ವಿಚಾರ ಅವನು ಏನಾದರೂ ಬರೆದುಕೊಳ್ಳಲಿ. ಕನ್ನಡದ ದೇವರನಾಮಗಳನ್ನು ಅಷ್ಟು ಲಾಘವವಾಗಿ ಕಾಣಬಾರದಾಗಿತ್ತು. ಪುರಂದರ ದಾಸರು, ಜಗನ್ನಾಥದಾಸರು ತ್ಯಾಗಯ್ಯ, ದೀಕ್ಷಿತರಂತೆಯೇ ದೊಡ್ಡವ ರೆಂಬುದನ್ನು ಅವನು ಗಮನಿಸಬೇಕಾಗಿತ್ತು. ಕರ್ಣಾಟಕ ಸಂಗೀತ ಸಂಪ್ರ ದಾಯಕ್ಕೆ ದಾಸಪೀಳಿಗೆಯಿಂದ ಆಗಿರುವ ಸೇವೆ ಅಲ್ಪವಲ್ಲ. ತ್ಯಾಗರಾಜರ ಕೃತಿಗಳಲ್ಲಿ ಭಕ್ತಿಮಾರ್ದವತೆಗಳಿರುವ ಹಾಗೆಯೇ ಪುರಂದರದಾಸರ ಕೃತಿ

ಗಳಲ್ಲೂ ಇವೆ. ಜಗನ್ನಾಥದಾಸರ ಕೃತಿಗಳು ಪ್ರೌಢಿಮೆಯಿಂದ ಕೂಡಿ, ತಾಳ ಲಯಬದ್ಧವಾಗಿ ಹಾಡಿಕೆಗೆ ಚೌಕವಾಗಿ ಒದಗುತ್ತವೆ. ಶ್ಯಾಮಶಾಸ್ತ್ರಿಗಳ ಗಂಭೀರ ಮಾರ್ಗವನ್ನೂ ದೀಕ್ಷಿತರ ನಾದಮಾಧುರ್ಯವನ್ನೂ ಒಮ್ಮೊಮ್ಮೆ ಜಗನ್ನಾಥದಾಸರ ಕೃತಿಗಳಲ್ಲಿ ಕಾಣಬಹುದು. ಇದೇ ಮಾತು ಗೋಪಾಲ ದಾಸರ ಕೃತಿಗಳಿಗೂ ಅನ್ವಯಿಸುತ್ತವೆ. ವಿಜಯದಾಸರೂ ಕನಕದಾಸರೂ ಸರಳಸುಂದರವಾದ ಅನೇಕ ನಾಮಗಳನ್ನು ಮಾಡಿದ್ದಾರೆ.

"ದೇವರ ನಾಮಗಳು ಜನಸಾಮಾನ್ಯಕ್ಕೆ ಹತ್ತಿರದಲ್ಲಿವೆಯೆಂದೋ ಅಥವಾ ಅವು ಕನ್ನಡದಲ್ಲಿವೆಯೆಂದೋ ಅವುಗಳನ್ನು ಅಲ್ಲಗಳೆಯುವುದು ಯುಕ್ತವಲ್ಲ. ನಮ್ಮ ಗುರುಗಳೇ ದೇವರನಾಮಗಳನ್ನು ಕಚೇರಿಗಳಲ್ಲಿ ಹಾಡುವ ಪರಿಪಾಠ ಬೆಳೆಸಿದ್ದಾರೆ. ಬಿಡಾರಂ ಕೃಷ್ಣಪ್ಪನವರು ದೇವರನಾಮಗಳ ಹಾಡಿಕೆಯನ್ನು ವಿಶೇಷವಾಗಿ ಬಳಕೆಗೆ ತಂದರು. ಈಗ ನಮ್ಮೆದುರಿಗೇ ಇರುವ ಸುಬ್ಬರಾಮಯ್ಯ, ದೇವೇಂದ್ರಪ್ಪ ಮುಂತಾದ ವಿದ್ವಾಂಸರು ದಾಸರ ಕೀರ್ತನೆಗಳಲ್ಲೇ ಕಚೇರಿ ಮಾಡಬಲ್ಲ ಸಾಮರ್ಥ್ಯವುಳ್ಳವರಾಗಿದ್ದಾರೆ. ಪಕ್ಕಾ ಸಂಗೀತಗಾರರೆನ್ನಿಸಿಕೊಳ್ಳದೆ ಇದ್ದರೂ ದಾಸರ ಕೀರ್ತನೆಗಳನ್ನೂ ಹೊಸ ಕನ್ನಡದ ಕೃತಿಗಳನ್ನೂ ಸಭೆಗಳಲ್ಲಿ ವಿಶೇಷವಾಗಿ ಹಾಡುತ್ತ ಪ್ರಚಾರಕ್ಕೆ ತಂದಿರುವ ಸಂಪತ್ಕುಮಾರಾಚಾರ್ಯರಿದ್ದಾರೆ."

"ರೇಡಿಯೋ ನಿಲಯದಿಂದ ನೀನು ತೆಲುಗು ಕೃತಿಗಳನ್ನೂ ಹಾಡಿದೆಯಲ್ಲಾ."

"ಹೌದು, ಹಾಡಿದೆ. ಆದರೆ ವಜ್ರಧರ ಕನ್ನಡವನ್ನು ತಿರಸ್ಕಾರ ದೃಷ್ಟಿಯಿಂದ ನೋಡಿ ಕನ್ನಡ ಕೀರ್ತನೆಗಳ ಮೇಲೆ ಗದಾಘಾತ ಮಾಡಿದ್ದಾನೆ."

"ಕನ್ನಡದ ಉಪ್ಪನ್ನೇ ತಿನ್ನುವ ಜನ ಕನ್ನಡಕ್ಕೆ ಹೀಗೆ ದ್ರೋಹಮಾಡು ವುದನ್ನು ನೋಡಿದರೆ ಮೈ ಉರಿದುಹೋಗುತ್ತದೆ."

"ಅದು ನಿನ್ನ ಅಭಿಮಾನ. ಕೂಗುವವರ ಬಾಯನ್ನೆಲ್ಲ ನಾವು ಕಟ್ಟುವುದು ಸಾಧ್ಯವಿಲ್ಲ. ಅವರ ಪೊಳ್ಳುಕೂಗು ಕನ್ನಡದ ಒಂದು ಕೂದಲನ್ನೂ ಕೊಂಕಿಸುವುದಿಲ್ಲ."

"ಅನ್ಯಭಾಷೆಗಳ ಕೃತಿಗಳನ್ನು ಕನ್ನಡದವರೂ ಖಂಡಿಸಬಹುದಲ್ಲಾ."

"ಅದೇ ತಪ್ಪು. ತಿಳಿಯದವರು ಕೆಸರಿನಲ್ಲಿ ಕಾಲಿಟ್ಟರೆಂದು ನಾವು ಇಡುವುದೇಕೆ? ಅದೂ ಅಲ್ಲದೆ ಭಾಷೆಯ ಗುದ್ದಾಟ ಸಂಗೀತ ಕ್ಷೇತ್ರಕ್ಕೆ ಪ್ರವೇಶಿಸ

ಬಾರದು. ಗಾಯನಕ್ಕೆ ಭಾಷೆ ಒಂದು ವಾಹನ. ಅದನ್ನು ನಿರ್ಬಂಧಿಸುವುದರಿಂದ ನಷ್ಟವೇ ಹೊರತು ಲಾಭವಲ್ಲ. ಕನ್ನಡಿಗರು ತೆಲುಗರನ್ನೂ ತೆಲುಗರು ಕನ್ನಡಿಗರನ್ನೂ ತಮಿಳರು ಇವರಿಬ್ಬರನ್ನೂ ಬಹಿಷ್ಕರಿಸುತ್ತ ಹೋದರೆ ಸಂಗೀತವೇ ಇರದೆ ಬರೀ ಆಲಾಪನೆಯೇ ಉಳಿದುಬಿಟ್ಟೀತು. ತಮಿಳರಲ್ಲಿ ಇಸೈ ಪಂಥದವರು ಸ್ವಭಾಷಾ ಪ್ರೇಮದಿಂದ ಅನ್ಯಭಾಷೆಯ ಕೃತಿಗಳಿಗೆ ಬಹಿಷ್ಕಾರ ಹಾಕಿದರು. ಅದರಿಂದೇನಾಯಿತು ? ತಮಿಳಾದರೂ ಉದ್ಧಾರವಾಯಿತೆ ? ಅವರ ಕಚೇರಿಗಳು ಜನಪ್ರಿಯವಾದುವೆ ?

"ಭಾಷೆಗೆ ಬಡಿದಾಡುವುದು ಹಣ್ಣನ್ನು ಬಿಟ್ಟು ಸಿಪ್ಪೆಗೆ ಹೋರಾಡಿದ ಹಾಗೆ. ಹಾಗೆಂದು ನಿರಭಿಮಾನಿಗಳಾಗಬೇಕೆಂದಲ್ಲ. ಅಂಧಾಭಿಮಾನವೂ ಬೇಡ, ಅನಾದರಣೆಯೂ ಸಲ್ಲದು. ಸಂಗೀತ ಕ್ಷೇತ್ರದಲ್ಲಿ ಭಾಷೆಯ ಬಗೆಗೆ ಎಷ್ಟು ಅಭಿಮಾನವಿರಬೇಕೋ ಅಷ್ಟು ಇದ್ದೇ ಇರಬೇಕು. ಆದರೆ ಅತಿಯಾಗಬಾರದು. ಕನ್ನಡದ ವಿಚಾರದಲ್ಲಿ ತನಗೆ ಸರಿಯಾದ ತಿಳಿವಳಿಕೆಯಿಲ್ಲವೆಂಬುದನ್ನು 'ವಜ್ರಧರ' ತೋರಿಸಿಕೊಂಡಿದ್ದಾನೆ."

"ಅವನ ವಿಮರ್ಶೆಯಲ್ಲಿ ಅರ್ಥವಿಲ್ಲ. ಅವನು ಬರೀ ಹೊಟ್ಟೆಕಿಚ್ಚಿನ ಮೊಟ್ಟೆಯೆಂದು ಅವನ ಧಾಟಿಯಿಂದಲೇ ತಿಳಿಯುತ್ತದೆ. ನಿನ್ನ ಮೇಲಿನ ಯಾವುದೋ ದ್ವೇಷದಿಂದ ಹೀಗೆ ಬರೆದಿರಬಹುದೆಂದು ನನಗನ್ನಿಸುತ್ತದೆ. ತಿಳಿದವರು ಯಾರೂ ಈ ಮಾತನ್ನು ಒಪ್ಪುವುದಿಲ್ಲ. ನಿನ್ನ ರೇಡಿಯೋ ಕಾರ್ಯಕ್ರಮ ಆಲಿಸುವ ಇತರರ ಅಭಿಪ್ರಾಯ ನಿರೀಕ್ಷಿಸಿ ನೋಡೋಣ."

ಸುಬ್ಬುಕೃಷ್ಣ ನಿಜವನ್ನೇ ನುಡಿದಿದ್ದ. 'ವಜ್ರಧರ'ನ ಲೇಖನ ನೋಡಿದ ಇತರ ನಾಲ್ಕಾರು ಮಂದಿ ಅಸಮಾಧಾನ ವ್ಯಕ್ತಪಡಿಸಿದರು. 'ವಜ್ರಧರ'ನ ಅಲ್ಪ ಸ್ವಲ್ಪ ಪರಿಚಯವಿದ್ದ ವಿದ್ವಾನ್ ಶಂಕರಪ್ಪನವರು ಶರ್ಮನೇ ವಜ್ರಧರನೆಂಬುದನ್ನು ಸ್ಥಿರೀಕರಿಸಿ ಅವನ ಯೋಗ್ಯತೆಯನ್ನು ತಮಗೆ ತೃಪ್ತಿಯಾಗುವಷ್ಟು ಮಟ್ಟಿಗೆ ಜಾಲಾಡಿದರು.

ಶರ್ಮನ ಯೋಗ್ಯತೆ ಶಂಕರಪ್ಪನವರ 'ಆಶೀರ್ವಾದ'ಕ್ಕೆ ಪಾತ್ರವಾಗಿಯೇ ಇತ್ತು. ತಾನೊಬ್ಬ ದೊಡ್ಡ ಸಂಗೀತ ವಿಮರ್ಶಕನೆಂದು ಹೇಳಿಕೊಂಡು ಬೆಂಗಳೂರಿನ ಬೀದಿಗಳಲ್ಲಿ ಅಲೆಯುತ್ತಿದ್ದ ಶರ್ಮನಿಗೆ ಬೆಂದ ಮನೆ ಯಾವುದು, ಬೇಯದ ಮನೆ ಯಾವುದು ಎಂದು ಹುಡುಕುವುದಲ್ಲದೆ ಬೇರೆ ಕೆಲಸವಿರಲಿಲ್ಲ.

ರಾವೋತ್ಸವಗಳ ಸಮಯದಲ್ಲಂತೂ ಅವನ ದಿಡಗು ಯಾರಿಗೂ ಇರುತ್ತಿರಲಿಲ್ಲ. ಯಾವೂರು ದಾಸಯ್ಯ ಎಂದು ಕೇಳುವವರಿಲ್ಲದಿದರೂ ಎಲ್ಲಾ ಜವಾಬ್ದಾರಿಯೂ ತನ್ನ ಹೆಗಲಮೇಲೆಯೇ ಬಿದ್ದಿರುವವನ ಹಾಗೆ ಓಡಾಡುತ್ತಿದ್ದ.

ಶರ್ಮನಿಗೆ ಅಕ್ಷತೆ ಕೊಟ್ಟು ಆಹ್ವಾನಿಸುವವರು ಯಾರೂ ಇರಲಿಲ್ಲ. ಆದರೂ ಅವನು ಎಲ್ಲಿ ಸಂಗೀತ ಕಚೇರಿಯಾಗಲಿ ಅಲ್ಲಿಗೆ ತಪ್ಪದೆ ವಕ್ರಿಸುತ್ತಿದ್ದ. ಸಂಗೀತಗಾರರ ಜೊತೆಗೂಡಿ ಕಚೇರಿ ನಡೆಯುವ ಸ್ಥಳಗಳಿಗೆ ಬರುವುದು ಅವನ ವಾಡಿಕೆಯಾಗಿತ್ತು. ಅವನ ಮಲ್ಲು ಪಂಚೆ, ಜುಬ್ಬ, ಪಟ್ಟೆಹಿಡಿದ ಶಲ್ಯಗಳನು ನೋಡಿ ಯಾರಿಗಾದರೂ ಗಾಬರಿಯಾಗುತ್ತಿತ್ತು. ಅವನ ಠೀವಿ ನೋಡಿ ಯಾರೋ ದೊಡ್ಡ ವಿದ್ವಾಂಸನೆಂದು ಜನ ಭಾವಿಸುವುದು ಸಾಮಾನ್ಯವಾಗಿತ್ತು.

ದಕ್ಷಿಣಾದಿ ಸಂಗೀತ ವಿದ್ವಾಂಸರು ನಗರಕ್ಕೆ ಬಂದರೆ ಶರ್ಮ ಸೊಂಟ ಕಟ್ಟಿ ಅವರ ಸೇವೆದೆ ಸಿದ್ಧನಾಗುತ್ತಿದ್ದ. ಅವರ ಊಳಿಗದಲ್ಲೇ ಅವನ ಮೈ ಉಬ್ಬಿ ಹೋಗುತ್ತಿತ್ತು. ಅವರ ಹಿಂದೆ ಮುಂದೆ ಓಡಾಡಿ, ಹಲ್ಲು ಗಿಂಜುತ್ತ ಶುಶ್ರೂಷೆ ಮಾಡುವುದು ಅವನ ಸ್ವಭಾವಕ್ಕೆ ಅಂಟಬಂದಿತ್ತು. ಕಚೇರಿಗಳಲ್ಲಿ ಸಂಗೀತ ಗಾರರನ್ನೆ ಮೀರಿಸುವ ದರ್ಪದಿಂದ ಕುಳಿತು, ತನಗೆ ಸಲ್ಲದ ಮರ್ಯಾದೆಗಾಗಿ ಹಾತೊರೆಯುತ್ತಿದ್ದದ್ದು ಅವನ ಪ್ರಕೃತಿಯಾಗಿತ್ತು. ಸಂಗೀತಗಾರರ ಸಂಪರ್ಕ ರಿಂದ ಅವನಿಗೆ ಪ್ರಾಪ್ತವಾಗಿದ್ದ ಹರುಕು ಮುರುಕು ಜ್ಞಾನ ಆಗಾಗ್ಗೆ ಪತ್ರಿಕೆ ಗಳಲ್ಲಿ ಪ್ರಕಾಶವಾಗುತ್ತಾ ಇತ್ತು. ಗ್ರಹಚಾರ ಕಡಮೆಯಾದವರ ಮೇಲೆ ಅವನ ವಕ್ರದೃಷ್ಟಿಯೂ ಬೀಳದಿರುತ್ತಿರಲಿಲ್ಲ.

ಅಧಿಕ ಪ್ರಸಂಗ ಶರ್ಮನಲ್ಲಿ ಮನೆಮಾಡಿತ್ತು. ದಕ್ಷಿಣಾದಿ ವಿದ್ವಾಂಸರನ್ನು ಪತ್ರಿಕೆಗಳಲ್ಲಿ ಕಾಲಾಕಾಲವೆನ್ನದೆ ಕಾಲಂಗಟ್ಟಲೆ ಹಾಡಿ ಹೊಗಳುವುದು ಅವನು ಬೆಳಸಿಕೊಂಡಿದ್ದ ಒಂದು ಚಾಳಿಯಾಗಿತ್ತು. ಮೈಸೂರಿನ ವಿದ್ವಾಂಸರಲ್ಲಿ ಅಸಹನೆ ತೋರುತ್ತ ಕಣಿವೆಯ ಕೆಳಗಿನವರ ಚೇಲನಾಗಿ ಕುಣಿಯುತ್ತ ಉಂಡ ಮನೆಗೆ ಎರಡು ಬಗೆಯುವ ಅವನ ದ್ರೋಹ ವರ್ತನೆಯನ್ನು ಕಂಡು ಹೇಸಿ ಮರ್ಯಾದೆವಂತ ಜನ ಹುಚ್ಚನಾಯಿಯನ್ನು ಕಂಡರೆ ದೂರ ಹೋಗುವಂತೆ ಹೋಗುತ್ತಿದ್ದರು.

'ರಾಷ್ಟ್ರಜ್ಯೋತಿ'ಯಲ್ಲಿ ಶರ್ಮನ ಲೇಖನಬಂದ ಎರಡು ಮೂರು

ದಿನಗಳಲ್ಲೇ ಮದರಾಸಿನ 'ಕಲ್ಕಿ' ಪತ್ರಿಕೆ ಮಧುಸೂದನನ ರೇಡಿಯೋ ಹಾಡಿಕೆ ಕುರಿತು ಚೊಕ್ಕವಾಗಿ ನಾಲ್ಕು ಮಾತು ಬರೆದಿತ್ತು:

"ಶನಿವಾರ ರಾತ್ರಿ ಮದರಾಸ್ ರೇಡಿಯೋ ನಿಲಯದಿಂದ ಹಾಡಿದವರು ಮೈಸೂರಿನ ತರುಣ ವಿದ್ವಾಂಸ ಮಧುಸೂದನರು. ಅವರ ಗಾಯನವನ್ನು ಅನೇಕ ರಸಿಕರು ಕೇಳಿ ಆನಂದಿಸಿರಬಹುದು. ಅಚ್ಚುಗಟ್ಟಾದ ಹಾಡಿಕೆ, ಅಪೂರ್ವವಾದ ಲಯಜ್ಞಾನ, ಅದೇನು ಶರೀರವೋ ಕಂಚನ್ನು ಕರಗಿಸಿ ನಾದವಾಗಿ ಹೊಯ್ದ ಗಾರುಡಿಯೋ ಎನ್ನುವ ಹಾಗಿತ್ತು. ಅಂಥ ದಿವ್ಯ ಶರೀರ ಸಂಪತ್ತನ್ನು ಪಡೆದಿರುವುದು ಅವರ ಭಾಗ್ಯ. ಆ ಶಾರೀರಕ್ಕೆ ಸ್ವರಮೂರ್ಛನೆಗಳಲ್ಲಿ ಯಾವ ಸೂಕ್ಷ್ಮ ಭಾವವಾಗಲಿ ನವುರಾದ ಪಲುಕಾಗಲಿ ತಪ್ಪಿಸಿಕೊಳ್ಳದೆ ಒಳಪಡುತ್ತಿತ್ತು. ಹಾಡಿಕೆಯಲ್ಲಿ ನವೀನವಾದ ಒಂದು ಮನೋಧರ್ಮ ಕಂಡು ಬರುತ್ತಿತ್ತು. ಅಪ್ಪಟ ಕರ್ಣಾಟಕೀಯವಾದ ಅವರ 'ಬಾನಿ' ಅವರ ಭವಿಷ್ಯತ್ಕೀರ್ತಿಗೆ ಸಾಧಕವಾಗಿದೆಯೆಂದು ಧೈರ್ಯವಾಗಿ ಹೇಳಬಹುದು.

"ಮುಖ್ಯವಾಗಿ ಅವರು ಕನ್ನಡದ ಕೀರ್ತನೆಗಳನ್ನು ಹಾಡಿದ ಬಗೆ ಪ್ರಶಂಸನೀಯವಾಗಿತ್ತು. ಹೀಗೆ ದೇವರನಾಮಗಳನ್ನು ಸಾಹಿತ್ಯ ಶುದ್ಧಿಯಿಂದ ಭಾವವ್ಯಂಜಕವಾಗಿ ಹಾಡುವುದು ನಮ್ಮಲ್ಲಿ ಅಪರೂಪವಾಗಿದೆ. ಮೈಸೂರಿನ ವಿದ್ವಾಂಸರು ಇದಕ್ಕೆ ಒಳ್ಳೇ ಪೀಠಿಕೆ ಹಾಕಿದ್ದಾರೆ. ತಮಗೆ ಅರ್ಥವಾಗದ ಕನ್ನಡ ಭಾಷೆಯ ದೇವರನಾಮಗಳನ್ನೂ ಕಚೇರಿಯ ಅಂತ್ಯದಲ್ಲಿ ಹಾಡಿ ಸಾಹಿತ್ಯದ ಕೊಲೆ ಮಾಡುವ ದಕ್ಷಿಣಾದಿ ಸಂಗೀತಗಾರರು ಇದನ್ನು ಗಮನಿಸಬೇಕು. ಕಚೇರಿಯನ್ನು ಇನ್ನೂ ಕೇಳಬೇಕೆಂದೆನಿಸುತ್ತಿದ್ದಾಗಲೇ ರೇಡಿಯೋ ಕಾರ್ಯಕ್ರಮ ಮುಗಿಯುವಂತಾದುದು ಒಂದು ಕೊರತೆ. ಇಂಥ ಗಾಯನಕ್ಕೆ ಹೆಚ್ಚು ಕಾಲಾವಕಾಶ ಬೇಕೆಂದು ಸೂಚಿಸಬೇಕಾಗಿದೆ."

ಕಾಲೇಜಿನ ತಮಿಳು ಅಧ್ಯಾಪಕ ಶಲ್ವಪುಳ್ಳೆ ಅಯ್ಯಂಗಾರರ ಗಮನಕ್ಕೆ ಬಂದ ಈ ಲೇಖನ ಸುಬ್ಬಕೃಷ್ಣನ ಕೈಸೇರುವುದಕ್ಕೆ ತಡವಾಗಲಿಲ್ಲ. ಅವನು ಕನ್ನಡದಲ್ಲಿ ಅದರ ಒಂದು ಪ್ರತಿಮಾಡಿಸಿಕೊಂಡು ಮಧುಸೂದನನ ಹತ್ತಿರ ಓಡಿ ಬಂದ. ಪ್ರತಿಯನ್ನು ಗೆಳೆಯನ ಕೈಯಲ್ಲಿತ್ತು,

"ತಮಿಳು ಪತ್ರಿಕೆಯ ಲೇಖನದ ಧಾಟಿಯನ್ನಾದರೂ ನೋಡಯ್ಯ"

ಎಂದ. ಮಧುಸೂದನನ ಲೇಖನವನ್ನು ಸಾವಧಾನವಾಗಿ ಓದಿದ.

ಲೇಖನ ಬರೆದಿದ್ದವರು ಮದರಾಸಿನ ವಿಖ್ಯಾತ ಕಲಾವಿಮರ್ಶಕ ಚಲಂ. ಅವರ ಹೆಸರನ್ನು ಅವರು ಕೇಳಿದ್ದನೇ ಹೊರತು ಅವರ ಪ್ರತ್ಯಕ್ಷ ಪರಿಚಯ ಅವನಿಗಿರಲಿಲ್ಲ. ಮದರಾಸಿನಲ್ಲಿ ಸಂಗೀತ ಸಮ್ಮೇಳನಗಳು ಕೂಡಿ ಘನರಾಗಗಳ ಮೇಲೆ ಚರ್ಚೆ ನಡೆಯುತ್ತಿದ್ದಾಗ ಚಲಂ 'ಹಿಂದೂ' ಪತ್ರಿಕೆಯಲ್ಲಿ ಆ ಚರ್ಚೆ ಕುರಿತು ಸ್ವಾರಸ್ಯವಾಗಿ ಬರೆಯುತ್ತಿದ್ದರು.

ಲೇಖನ ಓದಿ ಸುಬ್ಬಕೃಷ್ಣ ಹಿಗ್ಗಿ ಹೋಗಿದ್ದ.

"ಹೇಗಿದೆಯಯ್ಯಾ ಲೇಖನ? ಚಲಂ ನಿಮ್ಮ ಚಿಕ್ಕಪ್ಪನ ಮಗನೇನೂ ಅಲ್ಲವಷ್ಟೆ?"

"ಚಿಕ್ಕಪ್ಪನ ಮಗನಲ್ಲದಿದ್ದರೂ 'ವಜ್ರಧರ' ನೆಂಟಸ್ತನ ಗಂಟುಹಾಕಿ ಬಿಡುತಾನಪ್ಪಾ!"

"ಅವನ ಮುಂಡ ಮೋಚಿತು. ಅವನ ಔದ್ಧತ್ಯಕ್ಕೆ ಅವರೇ ಉತ್ತರ ಕೊಟ್ಟಿದಾರಲ್ಲಾ. ತಮಿಳಗಾಯಕರ ಕನ್ನಡದ ಕೊಲೆ ಕುರಿತು ಚಲಂ ಹೇಳಿರುವ ಮಾತನ್ನು ಗಮನಿಸಿದೆಯೋ ಇಲ್ಲವೋ?"

"ಹೌದು. ಕಲೆಗ ಸಂಕುಚಿತ ಅಭಿಮಾನ ಸಲ್ಲದೆಂಬುದನ್ನು ಅವರ ಮಾತೂ ಸಮರ್ಥಿಸುತ್ತದೆ. ತಮಿಳರಾದರೂ ಮೈಸೂರಿನವನಾದ ನನ್ನನ್ನು ಪ್ರಶಂಶಿಸುವುದರಲ್ಲಿ ಹಿಂದೆಗೆದಿಲ್ಲ. ಅದು ಅವರ ಔದಾರ್ಯಕ್ಕೆ ಸಾಕ್ಷಿ. ಆ ಪ್ರಶಂಸೆಗೆ ನಾನು ಅರ್ಹನೋ ಅಲ್ಲವೋ ಎನ್ನುವುದು ಬೇರೆ ಪ್ರಶ್ನೆ. ಉತ್ತೇಜನದ ಮಾತು ಬಂದರೆ ಯಾರಿಗಾದರೂ ಸಂತೋಷವೇ. ಆದರೆ ಅದಕ್ಕಿಂತ ಹೆಚ್ಚಾಗಿ ಲೇಖನ ಅವರ ಸತ್ಯಪ್ರಿಯತೆಗೆ ಒಂದು ಉದಾಹರಣೆ. ವಿಮರ್ಶೆಯಲ್ಲಿ ಒಂದು ಯೋಗ್ಯ ಸಂಪ್ರದಾಯ ಬೆಳೆಯುವುದಕ್ಕೆ ಇಂಥ ಮನೋಧರ್ಮ ಸಹಕಾರಿಯಾಗುತ್ತದೆ. ಈ ದೃಷ್ಟಿಯಿಂದ ಅವರ ಲೇಖನವನ್ನೂ ನಾನು ಮೆಚ್ಚುತ್ತೇನೆ."

"ನೀನು ಹೇಗಾದರೂ ಮೆಚ್ಚು. ಗಣಗ್ರಾಹಿಗಳು ನಮ್ಮಲ್ಲಿಲ್ಲದಿದ್ದರೂ ಹೊರಗಡೆ ಇರುವರೆಂದ ಹಾಗಾಯಿತು. ಎಷ್ಟಾದರೂ ಹಿತ್ತಿಲ ಗಿಡ ಮದ್ದಲ್ಲ, ಹೋಗಲಿ. ಆದರೆ 'ವಜ್ರಧರ'ನಂಥ ತಿಳಿಗೇಡಿಗಳಿಂದ ಕನ್ನಡಕ್ಕೆ ಅನ್ಯಾಯವಾಗುತ್ತಿದೆಯಲ್ಲಾ ಎಂದು ಸಂಕಟವಾಗುತ್ತದೆ."

"ನೂರು ಉಳಿಯಪೆಟ್ಟು ಬಿದ್ದರೆ ಒಂದು ವಿಗ್ರಹ. ನಿಂದನೆಗೆ ಧೃತಿ

ಕೆಡುವ ಬದಲು ಅದನ್ನೇ ಒಂದು ಪ್ರಚೋದನೆಯನ್ನಾಗಿ ಉಪಯೋಗಿಸಿ ಕೊಳ್ಳುವುದೇ ಜಾಣತನ. ಕಟುಟೀಕೆಗಳು ನಮ್ಮನ್ನು ಕೆರಳಿಸದೆ ಅಂತರಂಗ ಶೋಧನೆಗೆ ಸಹಕಾರಿಯಾಗಬೇಕು."

"ನೀನೊಬ್ಬ ದೊಡ್ಡ ವೇದಾಂತಿಯಾಗಿಬಿಟ್ಟೆ. ನಿನ್ನಷ್ಟು ಸಹನೆ ನನಗಿಲ್ಲ"

ಎಂದು ಸುಬ್ಬಕೃಷ್ಣ ನುಡಿದ.

## ೧೬

ರಸಿಕರಂಜಿನೀ ಸಭೆಯವರು ಮಧುಸೂದನನ ಸಂಗೀತ ಕಚೇರಿ ಏರ್ಪಡಿಸುವುದಕ್ಕೆ ನಟರಾಜ ಅಯ್ಯರರೇ ಕಾರಣ. ಮಧುಸೂದನನ ರೇಡಿಯೋ ಹಾಡಿಕೆ ಕೇಳಿದ ಅಯ್ಯರರಿಗೆ ಅವನ ಗಾಯನವನ್ನು ವಿಸ್ತಾರವಾಗಿ ಕೇಳಬೇಕೆಂಬ ಚಪಲ ಹುಟ್ಟಿತು. ಮೈಸೂರಿನ ಸಂಗೀತಗಾರರೆಂದರೆ ಮೂಗುಮುರಿಯುತ್ತಿದ್ದ ಅವರಿಗೆ ಶೇಷಣ್ಣನವರ ವೀಣೆಯನ್ನೂ ಬಿಡಾರಂ ಕೃಷ್ಣಪ್ಪನವರ ಹಾಡಿಕೆಯನ್ನೂ ಕೇಳಿದ ಬಳಿಕ ಆ ಅಭಿಪ್ರಾಯ ಬದಲಾಯಿಸಿ ಹೋಗಿತ್ತು.

ಒಮ್ಮೆ ನವರಾತ್ರಿಯಲ್ಲಿ ಮೈಸೂರಿಗೆ ಪತ್ನೀ ಸಮೇತರಾಗಿ ಹೋಗಿದ್ದ ನಟರಾಜ ಅಯ್ಯರರನ್ನು ಅವರ ಮಿತ್ರರೊಬ್ಬರು ಶೇಷಣ್ಣನವರ ಮನೆಗೆ ಕರೆದೊಯ್ದು ವೀಣೆ ಕೇಳುವ ಸುಸಂಧಿ ಒದಗಿಸಿದ್ದರು. ಸರಸ್ವತಿಯೇ ಮೂರ್ತಿಗೊಂಡು ವೀಣೆ ನುಡಿಸಿದಂತೆ ನುಡಿಸಿದ ಶೇಷಣ್ಣನವರನ್ನೂ ಅವರ ಭಾವುಕ ವ್ಯಕ್ತಿತ್ವವನ್ನೂ ಕಂಡ ಅಯ್ಯರರು ಬೆರಗಾಗಿಹೋಗಿದ್ದರು. ವೀಣೆಯಲ್ಲಿ ಈ ಪಕ್ವತೆ, ಈ ಮಾರ್ದವತೆ ಸಾಧ್ಯವೆಂಬುದನ್ನು ಅವರು ಮನಗಂಡಿರಲಿಲ್ಲ.

ಹಾಗೆಯೇ ಬಿಡಾರಂ ಕೃಷ್ಣಪ್ಪನವರ ಹಾಡಿಕೆ ಕೇಳುವ ಸೌಭಾಗ್ಯವೂ ಲಭಿಸಿತ್ತು. ಕೃಷ್ಣಪ್ಪನವರ ಗಂಭೀರವಾದ ಗಂಡು ಹಾಡಿಕೆ ಕೇಳಿ ಅಯ್ಯರರು ಮೂಗಿನ ಮೇಲೆ ಬೆರಳಿಟ್ಟುಕೊಂಡಿದ್ದರು. ಕರ್ಣಾಟಕ ಸಂಗೀತ ಸಂಪ್ರದಾಯದ ತಿರುಳಂತಿದ್ದ ಕೃಷ್ಣಪ್ಪನವರ ಗಾಯನ ಕೇಳಿದ ಮೇಲೆ ಅಭಿಪ್ರಾಯ ಬದಲಾಯಿಸಿಕೊಳ್ಳದಿರಲು ಸಾಧ್ಯವೇ ಇರಲಿಲ್ಲ. ನವರಾತ್ರಿ ಮುಗಿಸಿಕೊಂಡು

ಮದರಾಸಿಗೆ ಹಿಂತಿರುಗಿದ ನಟರಾಜ ಅಯ್ಯರರ ಮನಸ್ಸಿನಲ್ಲಿ ಮೈಸೂರಿನ ಸಂಗೀತಗಾರರ ಬಗೆಗೆ ಇದ್ದ ಲಘುಭಾವನೆ ಕಣ್ಮರೆಯಾಗಿತ್ತು. ಮೈಸೂರಿನ ಇತರ ಘನವಿದ್ವಾಂಸರ ಕಚೇರಿಗಳನ್ನು ಕೇಳುವ ಅವಕಾಶ ಅವರಿಗೆ ಆಗದಿದ್ದರೂ ತಾವು ಕೇಳಿದ ಇಬ್ಬರ ಸಂಗೀತವೇ ಮೈಸೂರಿನವರಲ್ಲಿ ಗೌರವ ಹುಟ್ಟಿಸಲು ಸಾಕಾಗಿತ್ತು. ಅದನ್ನವರು ಮರೆತಿರಲಿಲ್ಲ.

ಅಂತೆಯೇ ಅವರಿಗೆ ಮೈಸೂರಿನ ಸಂಗೀತಗಾರರ ವಿಚಾರದಲ್ಲಿ ಏನೋ ಒಂದು ಬಗೆಯ ಆದರ ಭಾವನೆಯಿತ್ತು. ಬೆಳಕಿಗೆ ಬರುತ್ತಿದ್ದ ಅನೇಕ ತರುಣ ವಿದ್ವಾಂಸರ ವಿಚಾರ ಅಯ್ಯರರಿಗೆ ತಿಳಿದಿರಲಿಲ್ಲ. ಮೈಸೂರಿನ ತರುಣ ಕಲಾವಿದರ ವಿಷಯವೂ ಪತ್ರಿಕೆಗಳಲ್ಲಿ ಅಷ್ಟಾಗಿ ಬರುತ್ತಿರಲಿಲ್ಲ. ಎಲ್ಲೋ ಅಲ್ಲೊಂದು ಇಲ್ಲೊಂದು ಮಾತು ಕೇಳಬರುತ್ತಿತ್ತು. ಯಾರಾದರೂ ದೊಡ್ಡ ವಿದ್ವಾಂಸರು ಮದರಾಸಿಗೋ ಕಲ್ಕತ್ತಕ್ಕೊ ಮುಂಬೈಗೊ ಹೋಗಿ ಬಂದರೆ, ಅಥವಾ ರಾಜಾ ಸ್ಥಾನಗಳಲ್ಲಿ ವಿಜೃಂಭಿಸಿದರೆ ಅವರ ವಿಷಯ ಸ್ವಲ್ಪ ಪ್ರಚುರಪಡುತ್ತಿತ್ತು. ಯುವಕರ ಭಾಗಕ್ಕೆ ಆ ಪ್ರಶಸ್ತಿಯೂ ಇರಲಿಲ್ಲ.

ಕಣಿವೇ ಕೆಳಗಿನ ಸಂಗೀತಗಾರರಂತೆ ಮೈಸೂರಿನವರು ತಾವಾಗಿ ಪ್ರಚಾರ ಬಯಸದಿದ್ದುದೂ ಇದಕ್ಕೆ ಒಂದು ಕಾರಣವಾಗಿತ್ತು. ದಕ್ಷಿಣಾದಿ ಸಂಗೀತಗಾರರು ಪ್ರಸಾರವನ್ನು ತಮ್ಮ ಕಲೆಯ ಒಂದು ಅಂಗವಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಅವರಲ್ಲದಿದ್ದರೆ ಅವರ ಜನ ಪತ್ರಿಕೆಗಳಲ್ಲಿ ಅವರ ಹೆಸರುಗಳನ್ನು ಹಾಡಿ ಹೊಗಳುತ್ತಿದ್ದರು. ಆದರೆ ರಾಜಮಹಾರಾಜರಿಂದ ಸನ್ಮಾನಿತರಾದ ಮೈಸೂರಿನ ಘನ ವಿದ್ವಾಂಸರು ಪತ್ರಿಕೆಗಳಿಗೆ ದೂರವಾಗಿ ತಮ್ಮದೇ ಆದ ಬೇರೆ ಒಂದು ಪ್ರಪಂಚದಲ್ಲಿದ್ದರು. ಜನಪ್ರಿಯತೆಯೂ ಕೀರ್ತಿಯೂ ಅವರನ್ನು ಹುಡುಕಿಕೊಂಡು ಹೋಗಬೇಕಾಗಿತ್ತು.

ಮೈಸೂರಿನ ಈ ವೈಶಿಷ್ಟ್ಯವನ್ನರಿತಿದ್ದ ನಟರಾಜ ಅಯ್ಯರರಿಗೆ ಮಧುಸೂದನನ ವಿಚಾರ ಪತ್ರಿಕೆಗಳಲ್ಲಿ ಓದಿ ಅಚ್ಚರಿಯಾಯಿತು. ಮದರಾಸಿನ ಪತ್ರಿಕೆಯೇ ಅವನ ಹಾಡಿಕೆಯನ್ನು ಬಾಯಿತುಂಬ ಹೊಗಳಿತ್ತು. ರೇಡಿಯೋ ಹಾಡಿಕೆಯನ್ನು ಸ್ವತಃ ಆಲಿಸಿದ್ದ ಅಯ್ಯರರಿಗೆ ಆ ಹೊಗಳಿಕೆ ಉತ್ಪ್ರೇಕ್ಷೆಯೆಂದೇನೂ ತೋರಲಿಲ್ಲ. ಅವಕಾಶ ಸಿಕ್ಕಿದರೆ ಈ ತರುಣ ವಿದ್ವಾಂಸನನ್ನು ಒಂದು ಸಲ ಮದರಾಸಿಗೆ ಕರೆಸಬೇಕೆಂದು ಅಯ್ಯರರು ಮನಸ್ಸು ಮಾಡಿದ್ದರು.

ನಟರಾಜ ಅಯ್ಯರರಂತೆಯೇ ಅವರ ಒಬ್ಬಿಬ್ಬರು ಗೆಳೆಯರಿಗೆ ಮಧು ಸೂದನನ ಹಾಡಿಕೆಯನ್ನು ರೇಡಿಯೋದಲ್ಲಿ ಕೇಳಿದ ಬಳಿಕ ಮತ್ತೊಮ್ಮೆ ಅವನ ಸಂಗೀತ ಕೇಳಬೇಕೆಂಬ ಚಪಲ ಹುಟ್ಟಿತ್ತು. ಅಯ್ಯರರೂ ಈ ವಿಚಾರವನ್ನು ಅವರೊಡನೆ ಪ್ರಸ್ತಾಪಿಸಿದರು. ರಸಿಕರಂಜಿನೀ ಸಭೆಯ ಕಾರ್ಯಕಾರಿ ಸಮಿತಿ ಯಲ್ಲಿದ್ದ ಮಿತ್ರರಿಗೆ ಸಮಿತಿಯ ಸಭೆಯಲ್ಲಿ ಈ ಪ್ರಶ್ನೆ ಎತ್ತುವುದು ಕಷ್ಟ ವಾಗಲಿಲ್ಲ. ಸಲಹೆಗೆ ಮೊದಲು ಸ್ವಲ್ಪ ಪ್ರತಿರೋಧವೇ ಬಂದಿತು. ಹಲವು ಸದಸ್ಯರು ತೀರ್ಮಾನದ ಔಚಿತ್ಯವನ್ನು ಪ್ರಶ್ನಿಸಿದರು; ಸಭೆಯ ಘನತೆಗೆ ತಕ್ಕ ಹಾಗೆ ಕಚೇರಿ ನಡೆಯುವುದೇ ಎಂಬ ಸಂದೇಹ ವ್ಯಕ್ತಪಡಿಸಿದರು. ಮೈಸೂರಿ ನವರನ್ನೇಕೆ ಕರೆಸಬೇಕು, ದಕ್ಷಿಣದ ವಿದ್ವಾಂಸರಿಲ್ಲವೆ ಎಂಬ ಭಾವನೆಯನ್ನೂ ಒಬ್ಬಿಬ್ಬರು ವ್ಯಕ್ತಪಡಿಸಿದರು. ಆದರೆ ಪ್ರಭಾವಶಾಲಿಗಳಾದ ನಾಲ್ಕಾರು ಮಂದಿ ತಾವು ಹಿಡಿದ ಪಟ್ಟನ್ನು ಬಿಡದೆ ಕುಳಿತದ್ದರಿಂದ ಸಮಿತಿ ಅವರ ಅಸಮಾಧಾನ ಕಟ್ಟಿಸಿಕೊಳ್ಳಲಿಚ್ಛಿಸದೆ ಸಲಹೆಗೆ ಅಸ್ತು ಎಂದಿತು.

ಮಧುಸೂದನನಿಗೆ ಆಹ್ವಾನ ಹೋಗುವುದು ತಡವಾಗಲಿಲ್ಲ. ಅವನದನ್ನೂ ಅಂಗೀಕರಿಸುವುದಕ್ಕೂ ಅಡ್ಡಿಯಿರಲಿಲ್ಲ.

ಕಚೇರಿ ಗೊತ್ತಾಗಿದ್ದ ದಿವಸ ಬೆಳಗಿನ ರೈಲಿನಲ್ಲೇ ಮಧು ಬಂದಿಳಿದ. ಸಭೆಯ ಸಹಕಾರ್ಯದರ್ಶಿ ಕೃಷ್ಣನ್ ಟ್ಯಾಕ್ಸಿಯೊಡನೆ ಸೆಂಟ್ರಲ್ ಸ್ಟೇಷನ್ನಿಗೆ ಹೋಗಿ ಸ್ವಾಗತಿಸಿ ಮೈಲಾಪುರದಲ್ಲಿದ್ದ ತಮ್ಮ ಮನೆಗೆ ಕರೆದೊಯ್ದರು.

ರಸಿಕರಂಜಿನೀ ಸಭೆ ಸ್ವಲ್ಪ ಶಂಕೆಯಿಂದಲೇ ಪ್ರಕಟನ ಕಾರ್ಯ ಕೈಗೊಂಡಿತ್ತು. ಭರ್ಜರಿ ಕಚೇರಿಗಳನ್ನು ನಡೆಸಿ, ಮದರಾಸಿನ ಜನತೆಯನ್ನು ರಂಜಿಸಿ, ಹೆಸರು ಗಳಿಸಿ ದಕ್ಷಿಣಕ್ಕೆಲ್ಲಾ ಒಂದು ಆದ್ಯ ಸಂಸ್ಥೆಯೆಂದು ಹೆಸರಾಗಿದ್ದ ಸಭೆ ಕಳಪೆ ಕಲಾವಿದರನ್ನು ಎಂದೂ ಕರೆದು ಸನ್ಮಾನಿಸಿದ್ದಲ್ಲ. ಕಚೇರಿ ಕಳೆ ಕಟ್ಟುವುದೋ ಇಲ್ಲವೋ, ಒತ್ತಾಯಕ್ಕೆ ಕಟ್ಟುಬಿದ್ದು ಮಾಡುತ್ತಿರುವ ಕೆಲಸ ದಿಂದ ಸಂಘಕ್ಕೆಲ್ಲಿ ಅಪಖ್ಯಾತಿ ಬರುವುದೋ ಎಂದು ಅಧ್ಯಕ್ಷರೇ ಮುಂತಾದವರು ಬಾಯಲ್ಲಿ ಅಕ್ಕಿಯ ಕಾಳು ಹಾಕಿಕೊಂಡೇ ಇದ್ದರು. ಸಾಲದ್ದಕ್ಕೆ ಪ್ರಸಿದ್ಧ ದಕ್ಷಿಣಾದಿ ವಿದ್ವಾಂಸರಿಬ್ಬರನ್ನು ಪಕ್ಕವಾದ್ಯ ನುಡಿಸಲು ಗೊತ್ತುಮಾಡಲಾಗಿತ್ತು.

ಕಚೇರಿ ಸಂಜೆ ಐದು ಘಂಟೆಗೆ ಆರಂಭವಾಗುವುದೆಂದು ಗೊತ್ತಾಗಿದ್ದರೂ ನಾಲ್ಕು ಘಂಟೆಗೇ ಸಭಾಮಂದಿರ ತುಂಬಿಹೋಗಿತ್ತು. ನಗರದ ಗಣ್ಯರು,

ರಸಿಕರು, ಸಂಗೀತ ವಿದ್ವಾಂಸರು ಮುಂದುಗಡೆಯ ಸ್ಥಳಗಳನ್ನು ಆಕ್ರಮಿಸಿ ಕುಳಿತಿದ್ದರು. ವೇದಿಕೆಯ ಮೇಲೆ ಶೋಭಾಯಮಾನವಾಗಿ ತಂಬೂರಿ, ಮೃದಂಗ, ಪಿಟೀಲು ಪೆಟ್ಟಿಗೆಗಳು ಕುಳಿತಿದ್ದವು. ಸಂಗೀತ ಚೆನ್ನಾಗಿರಬಹುದೆಂಬ ನಂಬಿಕೆಗಿಂತ ಹೆಚ್ಚಾಗಿ ಮೈಸೂರಿನ 'ಭಾಗವತರು' ಹೇಗೆ ಹಾಡುತ್ತಾರೋ ಕೇಳಿ ನೋಡೋಣವೆಂಬ ಕುತೂಹಲದಿಂದ ಬಂದು ಸೇರಿದ್ದವರೇ ಹೆಚ್ಚು ಮಂದಿ. ಹಾಡಿಕೆ ಚೆನ್ನಾಗಿಲ್ಲದಿದ್ದರೆ ತಾಳಬ್ರಹ್ಮ ದಕ್ಷಿಣಾಮೂರ್ತಿಯವರ ಮೃದಂಗ ವಾದನದ ಸವಿಯನ್ನಾದರೂ ಕಾಣಬಹುದೆಂದು ಕೆಲವರೆಣಿಸಿದ್ದರೆ, ತಮ್ಮ ನೆಚ್ಚಿನ ರಾಜಮಾಣಿಕ್ಯಂರವರ ಪಿಟೀಲಿನ ಸೌಖ್ಯವನ್ನಾದರೂ ಅನುಭವಿಸ ಬಹುದೆಂದು ಇನ್ನು ಕೆಲವರು ಲೆಕ್ಕಹಾಕಿಕೊಂಡು ಬಂದಿದ್ದರು.

ಐದು ಘಂಟೆಗೆ ಹತ್ತು ನಿಮಿಷ ಇದೆಯೆನ್ನುವಾಗ ಸಂಘದ ಅಧ್ಯಕ್ಷ-ಕಾರ್ಯದರ್ಶಿಗಳೊಡಗೂಡಿ ವಿದ್ವಾಂಸರು ಸಭಾ ಭವನಕ್ಕೆ ಬಂದರು. ದಕ್ಷಿಣಾಮೂರ್ತಿಯವರ ಎತ್ತರವಾದ ಕೃಷ್ಣಕಾಯವನ್ನು ಕಂಡೊಡನೆ ಸಭೆ ಹರ್ಷಧ್ವನಿಗೈದಿತು. ಭವ್ಯಾಕೃತಿಯ ರಾಜಮಾಣಿಕ್ಯಂ ಪಿಳ್ಳೈಯವರು ವೇದಿಕೆ ಯನ್ನೇರಿ ಕೈಮುಗಿದಾಗ ಚಪ್ಪಾಳೆಯ ಸದ್ದು ಭವನವನ್ನು ತುಂಬಿತು. ಇಬ್ಬರು ದಿಗ್ಗಜಗಳ ನಡುವೆ ಹಸುಳೆಯಂತೆ ಸಭಿಕರಿಗೆ ಕಂಡ ಮಧುಸೂದನನಿಗೆ ಪ್ರತ್ಯೇಕ ಹರ್ಷ ಸ್ವಾಗತವಿಲ್ಲದೆ ಆ ಘನ ವಿದ್ವಾಂಸರಿಬ್ಬರಿಗೆ ದೊರಕಿದ ಸ್ವಾಗತದಲ್ಲೇ ಅವನೂ ಭಾಗಿಯಾಗಬೇಕಾಯಿತು.

ಸಂಗೀತಗಾರರಿಗೆ ಅನೂಚಾನವಾಗಿ ಬಂದಿರುವ ಉಡುಪನ್ನು ಧರಿಸದೆ ಬಿಳಿಯ ಪಾಯಿಜಾಮೆ, ಅದರ ಮೇಲೊಂದು ಸಿಲ್ಕ್ ಜುಬ್ಬ ಧರಿಸಿ, ನೀಟಾಗಿ ಕ್ರಾಪ್ ಬಾಚಿಕೊಂಡು ಕಾಲೇಜ್ ವಿದ್ಯಾರ್ಥಿಯಂತೆ ಬಂದು ಕುಳಿತ ಮಧು ಸೂದನನನ್ನು ನೋಡಿ ಸಭೆಯಲ್ಲಿದ್ದ ಸಂಪ್ರದಾಯ ಪ್ರಿಯರನೇಕರಿಗೆ ಅಚ್ಚರಿ ಯಾಯಿತು. ಇವನೇನು ಸಂಗೀತಗಾರನೋ, ಇಲ್ಲ ಅಮೆಚೂರ್ ಕಲಾವಿದನೋ ಎಂಬ ಲಾಘವಾದ ಭಾವನೆ ಅವರ ಮನಸ್ಸಿನಲ್ಲಿ ಮೂಡದಿರಲಿಲ್ಲ.

ವಾದ್ಯಗಳನ್ನೆಲ್ಲಾ ಶ್ರುತಿಮಾಡಿದ ಬಳಿಕ ಕಚೇರಿ ಆರಂಭವಾಯಿತು.

ಪ್ರಾರಂಭದಲ್ಲೇ 'ದ್ವಿಭುಜ ಗಣಪತಯೇ' ಎಂಬ ಚಕ್ರವಾಕರಾಗದ ಅಪರೂಪವಾದ ವರ್ಣ. ರಾಗಕ್ಕೆ ಶೋಭೆಕೊಡುವಂತಿದ್ದ ಸಂಸ್ಕೃತ ಪದಪುಂಜ,

ಗಮಕಗಳಿಂದ ಪೋಷಣೆಗೊಂಡು ಮನೋಜ್ಞವಾಗಿ ತುಂಬಿ ಬರುತ್ತಿದ್ದ ರಾಗ ಭಾವ, ಸಾಹಿತ್ಯದ ಸೊಗಸನ್ನು ಕೆಡಿಸದೆ ಸಂಕೀರ್ಣ ತಾಳವನ್ನು ಸಮರ್ಥವಾಗಿ ನಿರ್ವಹಿಸುತ್ತಿದ್ದ ಜಾಣ್ಮೆ, ಸ್ವರಸ್ಥಾನದಲ್ಲಿ ವಿಶಿಷ್ಟ ಜಾತಿಯ ನೆರವಲು, ತ್ರಿಸ್ಥಾಯಿಗಳಲ್ಲಿ ಹಿಡಿತವಾದ ಸ್ವರಸಂಚಾರ, ಎಲ್ಲಕ್ಕೂ ವೈರಮುಡಿಯಿಟ್ಟ ಹಾಗೆ ದಿವ್ಯವಾದ, ಸಂಪದ್ಯುಕ್ತವಾದ ಶಾರೀರ.

ಇದು ಯಾರ ವರ್ಣ?

ಈ ತಾಳದ ನಡೆ ಹೇಗೆ?

ಏನಿದು ಈ ಕಂಠ ಸಂಪತ್ತು?

ಕ್ಷಣ ಹಿಂದೆ ಗಾಯಕನನ್ನೇ ಲಕ್ಷಿಸಿದೆ ತಾತ್ಸಾರದಲ್ಲಿ ಮುಳುಗಿದ್ದ ಸಭೆ ಜಾಗೃತಗೊಂಡು ಕುಳಿತು ಚಿತ್ತವಿಟ್ಟು ಆಲಿಸತೊಡಗಿತು.

ಮಧುಸೂದನ ವರ್ಣ ಮುಗಿಸಿದಾಗ ಸಭೆ ದಿಗ್ಭ್ರಮೆಗೊಂಡಿತ್ತು. ಶ್ರೋತೃವರ್ಗದಲ್ಲಿದ್ದ ಸಂಗೀತಗಾರರು ಒಬ್ಬರ ಮುಖವನ್ನೊಬ್ಬರು ಅರ್ಥಗರ್ಭಿತ ವಾಗಿ ನೋಡಿಕೊಂಡರು. ಅವರ ಮುಖದ ಮೇಲೆ ಅಚ್ಚರಿ ಮೂಡಿತ್ತು. ಮೃದಂಗಕ್ಕೆ ಮುಕ್ತಾಯ ಕೊಟ್ಟು ಕುಳಿತ ದಕ್ಷಿಣಾಮೂರ್ತಿ ಕಮಾನನ್ನು ಕೆಳಗಿಳಿಸಿದ್ದ ರಾಜಮಾಣಿಕ್ಯಂರವರ ಮುಖ ನೋಡಿ ಮುಗುಳ್ನಕ್ಕರು.

"ಶಹಭಾಸ್!"

ಇಬ್ಬರ ಬಾಯಲ್ಲಿಯೂ ಒಟ್ಟಿಗೆ ಉದ್ಗಾರ ಮೂಡಿತು.

ಅನಂತರ ಮಧುಸೂದನ ಚಿತ್ರಾಂಬರಿ, ಅಮೃತವರ್ಷಿಣಿ, ವಿಜಯ ಸರಸ್ವತಿ ರಾಗಗಳನ್ನು ಲಘುವಾಗಿ ಆಲಾಪಿಸಿ "ಚಿತ್ರ ಚಿತ್ರ ಮಾಯೇ" "ಕ್ಷರಾಕ್ಷರ ವಿದ್ಯೆ" ಮುಂತಾದ ಅಪರೂಪ ಕೃತಿಗಳನ್ನು ಹಾಡಿದ. ಗೌಳ ರಾಗವನ್ನು ಆಲಾಪನೆಗೆ ಆರಿಸಿಕೊಂಡು, ಆದರಲ್ಲಿ ವಿಸ್ತಾರವಾಗಿ ಕೆಲಸ ಮಾಡಿ ತಾನ ಪಲ್ಲವಿಗಳನ್ನು ಹಾಡಿದ. ಆ ಮೇಲೆ ಒಂದು ಜಾವಳಿ, ಒಂದು ಪ್ರಬಂಧದ ಹಾಡಿಕೆ ಆಯಿತು.

ಸಭಿಕರಿಂದ ಆಗಲೇ ಚೀಟಿಗಳು ಬರುವುದಕ್ಕಾರಂಭವಾಗಿತ್ತು. ಕಾರ್ಯದರ್ಶಿ ಕೆಲವನ್ನು ಆರಿಸಿ ಮಧುಸೂದನನ ಮುಂದೆ ಇಡುತ್ತಿದ್ದರು.

"ದೇವರನಾಮಗಳನ್ನು ಹಾಡಬೇಕು."

"ಕಾಪಿ, ಕಮಾಚ್‌ಗಳನ್ನು ಹಾಡಿ."

" ರಾಗಮಾಲಿಕೆ, ಪ್ಲೀಸ್."

ಬೇಡಿಕೆ ಬಹುವಾಗಿ ಬರುತ್ತಿತ್ತು. ಹೊತ್ತು ಮೀರುತ್ತಿತ್ತು. ಮೂರು ಘಂಟೆಯ ಹೊತ್ತು ಕುಳಿತು ಕಚೇರಿ ಕೇಳಿದ ಸಭಿಕರು ಇನ್ನೂ ಮೂರು ಘಂಟೆ ಕೇಳಲು ಸಿದ್ಧವಾಗಿದ್ದರು.

ಕಾರ್ಯದರ್ಶಿ ಮಧುಸೂದನನ ಕಿವಿಯಲ್ಲಿ ಏನೋ ಪಿಸುಗುಟ್ಟಿದರು. ಮಧು ನಕ್ಕು ಕಾಪಿಯಲ್ಲಿ ಕನಕದಾಸರ "ಕೇಶವನೊಲುಮೆಯು ಆಗುವ ತನಕ" ಕಮಾಚ್‌ನಲ್ಲಿ ಪುರಂದರದಾಸರ " ಸಿಕ್ಕಿದನೆಲೆ ಜಾಣೆ" ಕೀರ್ತನೆಗಳನ್ನು ಹಾಡಿದ. ರಾಗಮಾಲಿಕೆಗೆ " ವಾಮೇ ಭೂಮಿ ಸುತಾ " ಎಂಬ ಶ್ಲೋಕವನ್ನು ತೆಗೆದುಕೊಂಡು ನಾಲ್ಕು ರಾಗಗಳಲ್ಲಿ ಅದನ್ನು ರಸಭರಿತವಾಗಿ ಹಾಡಿದ.

ಒಂಬತ್ತು ಘಂಟೆಗೆ ಮುಗಿಯಬೇಕೆಂದು ಗೊತ್ತಾಗಿದ್ದ ಕಚೇರಿ ಹತ್ತು ಸಮೀಪಿಸುತ್ತಿದ್ದರೂ ಮುಗಿಯುವ ಸೂಚನೆ ಕಂಡುಬರಲಿಲ್ಲ. ಜನ ಒಂದಾದ ಮೇಲೊಂದು ಕೇಳುತ್ತಲೇ ಇದ್ದರು. ಶ್ಲೋಕಗಳು, ಚುಟಕಗಳು ಮುಗಿದು ಮಂಗಳ ಹಾಡುವ ಹೊತ್ತಿಗೆ ಹತ್ತೂವರೆಯಾಗಿತ್ತು.

ಸಭಾಮಂದಿರದಲ್ಲಿ ಚಪ್ಪಾಳೆ ನಿಲ್ಲಬೇಕಾದರೆ ಐದು ನಿಮಿಷ ಬೇಕಾಯಿತು.

ಆಯಾಸದಿಂದ ಮಧುಸೂದನನ ಹಣೆಯ ಮೇಲೆ ಬೆವರು ಹನಿ ಸಾಲಿಟ್ಟು ಮೂಡಿತ್ತು. ಆದರೆ ಮನಸ್ಸು ಉಲ್ಲಸಿತವಾಗಿತ್ತು.

ರಸಿಕರಂಜನಿ ಸಭೆಯ ಅಧ್ಯಕ್ಷ ಸೋಮಸುಂದರಂ ದೊಡ್ಡ ಹೂವಿನ ಹಾರಗಳನ್ನು ಹಿಡಿದು ಮುಂದೆ ಬಂದು ಮೂವರು ವಿದ್ವಾಂಸರಿಗೂ ಹಾಕಿದರು. ದೀರ್ಘಭಾಷಣ ಮಾಡಿ ಬೇಸರಪಡಿಸುವುದಿಲ್ಲವೆಂದು ಮೊದಲೇ ಹೇಳಿ, ಅರ್ಧ ಘಂಟೆ ಮಾತನಾಡಿದರು. ಹಾಡಿಕೆಯನ್ನು ಮುಕ್ತಕಂಠದಿಂದ ಹೊಗಳಿ ಮಧು ಸೂದನನ ಗುರುಗಳನ್ನು ಪ್ರಶಂಸಿಸಿದರು. ಕೊನೆಯಲ್ಲಿ,

" ಈ ದಿವ್ಯವಾದ ಕಚೇರಿಗಾಗಿ ಸಭೆಯವರಾದ ನಾವೂ ಶ್ರೋತೃಗಳಾದ ನೀವೂ ನಮ್ಮ ಮಿತ್ರರಾದ ಶ್ರೀ ನಟರಾಜ ಅಯ್ಯರರಿಗೆ ಋಣಿಗಳಾಗಿರಬೇಕು. ಅವರ ಒತ್ತಾಯವಿಲ್ಲದಿದ್ದರೆ ನಾವು ವಿದ್ವಾನ್ ಮಧುಸೂದನರನ್ನು ಕರೆಸುವ ಅವಕಾಶ ಸಿಕ್ಕುತ್ತಿರಲಿಲ್ಲ. ಇಂಥ ಸೊಗಸಾದ ಕಚೇರಿ ಕೇಳುವ ಪುಣ್ಯವೂ ಲಭಿಸುತ್ತಿರಲಿಲ್ಲ. ಗಾಯಕರ ವಿದ್ವತ್ತು ಎಂಥದೆಂಬುದಕ್ಕೆ ಅಪರೂಪ ರಾಗಗಳಲ್ಲಿ ಅವರು ಹಾಡಿದ ಕೃತಿಗಳೇ ಸಾಕ್ಷಿ. ಈ ವಯಸ್ಸಿಗೆ ಅವರು ದೊರಕಿಸಿ

ಕೊಂಡಿರುವ ಈ ಸಿದ್ಧಿ ಅಚ್ಚರಿಯನ್ನುಂಟುಮಾಡುವಂಥದು. ಪಕ್ಕವಾದ್ಯ ಬಾರಿಸಲು ಕುಳಿತಿರುವ ಘನವಿದ್ವಾಂಸರೂ ಉತ್ಸಾಹವೇರಿ ತಮ್ಮ ವಾದ್ಯಗಳನ್ನು ನುಡಿಸಿದರೆಂದ ಮೇಲೆ ನನ್ನಂಥವರು ಹೇಳತಕ್ಕದ್ದೇನಿದೆ? ನಿಮಗುಂಟಾಗಿರುವ ರಸಾನುಭವದ ಸುಖವನ್ನು ಹೆಚ್ಚು ಮಾತಿನಿಂದ ಭಂಗಪಡಿಸಲಿಚ್ಛಿಸುವುದಿಲ್ಲ"

ಎಂದು ಹೇಳಿ ಮುಗಿಸಿದರು.

ವೇದಿಕೆಯ ಸುತ್ತ ಜನ ಬಂದು ಮುತ್ತಿಕೊಂಡರು. ಎಲ್ಲರಿಗೂ ಮೈಸೂರಿನ 'ಭಾಗವತರನ್ನು' ಹತ್ತಿರದಿಂದ ನೋಡುವ ಕುತೂಹಲ. ಸಮಾರಾಧನೆಯ ಊಟಮಾಡಿ ತೃಪ್ತಿಗೊಂಡ ಬ್ರಾಹ್ಮಣಸಮೂಹ ಊಟದ ಸುಖವನ್ನು ಬಣ್ಣಿಸಿಕೊಂಡು ತೆರಳುವ ಹಾಗೆ ಸಂಗೀತ ಸುಧೆಯಿಂದ ತಣಿದ ಸಭಿಕರು ಅದನ್ನು ಬಗೆಬಗೆಯಾಗಿ ಬಣ್ಣಿಸಿಕೊಳ್ಳುತ್ತ ಚದರಿದರು.

ಗುಂಪೆಲ್ಲಾ ಕರಗಿದ ಮೇಲೆ ಕಾರ್ಯದರ್ಶಿ ಕೃಷ್ಣನ್ ಬೆಳ್ಳಿತಟ್ಟೆಯಲ್ಲಿ ಫಲತಾಂಬೂಲಗಳನ್ನು ತಂದಿತ್ತರು. ಲಕೋಟೆಯಲ್ಲಿ ನೂರು ರೂಪಾಯಿನ ಐದು ನೋಟುಗಳಿದ್ದುವು. ವಾದ್ಯಗಾರರಿಗೂ ಯಥೋಚಿತ ಮರ್ಯಾದೆ ಸಂದಿತು.

ಸಂಘದ ಗಣ್ಯವ್ಯಕ್ತಿಗಳನ್ನು ಸೋಮಸುಂದರಂ ಮಧುಸೂದನನಿಗೆ ಪರಿಚಯ ಮಾಡಿಸಿಕೊಟ್ಟರು. ನಟರಾಜ ಅಯ್ಯರ್ ಮುಂದೆ ಬಂದು ಹಸ್ತಲಾಘವವಿತ್ತಾಗ ಮಧುಸೂದನ,

"ತಮಗೆ ನಾನು ತುಂಬ ಕೃತಜ್ಞ."

ಎಂದು ವಂದಿಸಿದ. ಅಯ್ಯರರು ಮುಗುಳ್ನಗುತ್ತ,

"ನಮಗೆ ನೀವು ಕೃತಜ್ಞರೋ, ಇಲ್ಲ ನಿಮಗೆ ನಾವು ಕೃತಜ್ಞರೋ ಎಂಬುದನ್ನು ಇವೊತ್ತಿನ ಕಚೇರಿಯೇ ತಿಳಿಸಿದೆ"

ಎಂದರು.

"ಹಾಗಲ್ಲ, ಮದರಾಸಿನ ಗಣ್ಯ ಜನತೆಗೆ ತಾವು ನನ್ನ ಪರಿಚಯ ಮಾಡಿಸಿದಿರಿ."

"ಅದು ಹೇಗೋ ನಮಗಂತೂ ಸೊಗಸಾದ ಸಮಾರಾಧನೆಯಾದ ಹಾಗಾಯಿತು"

ಎಂದು ಸೋಮಸುಂದರಂ ಜೋಡಿಸಿದರು. ರಾಜಮಾಣಿಕ್ಯಂಪಿಳ್ಳೆ ಮಧುಸೂದನನ ಹೆಗಲ ಮೇಲೆ ಮಮತೆಯಿಂದ ಕೈಯಿಟ್ಟು,

" ಪ್ರಚಾರದಲ್ಲಿಲ್ಲದ ಅನೇಕ ಕ್ಲಿಷ್ಟವಾದ ರಾಗಗಳನ್ನೂ ಕೃತಿಗಳನ್ನೂ ಹಾಡಿದಿರಿ. ನಮ್ಮಲ್ಲಿ ಈಚೆಗೆ ಪ್ರಾಚೀನ ಕೃತಿಗಳೇ ನಶಿಸಿ ಹೋಗುತ್ತಿವೆ. ಚಮತ್ಕಾರದ ಕಚೇರಿಗಳೇ ಹೆಚ್ಚು. ನಿಮ್ಮಂಥ ತರುಣರು ಮುಂದೆ ಬಂದು ದಕ್ಷಿಣಾದಿ ಸಂಗೀತ ಸಂಪ್ರದಾಯವನ್ನು ಬೆಳಸುತ್ತಿರುವುದು ತುಂಬ ಸಂತೋಷ"

" ಎಂದರು. ತಾಳಬ್ರಹ್ಮ ದಕ್ಷಿಣಾಮೂರ್ತಿಯವರು ತಮ್ಮ ಪ್ರಶಂಸೆಯನ್ನು ಬಚ್ಚಿಡಲು ಸಾಧ್ಯವಾಗದೆ,

" ಕಚೇರಿಗೆ ಕುಳಿತಾಗ ಬರೀ ಚಾಪು ಹಾಕುತ್ತಲೇ ಕೂಡಬೇಕಾಗುವುದೇನೋ ಎಂದಿದ್ದೆ. ಆದರೆ ಕಚೇರಿ ಮುಂದೆ ಸಾಗಿದಾಗ ನಾಯನಾಪಿಳ್ಳೆಯವರಿಗೆ ಮೃದಂಗ ಬಾರಿಸುತ್ತಿರುವೆನೇನೋ ಎನ್ನಿಸಿತು "

ಎಂದರು.

" ತುಂಬ ದೊಡ್ಡಮಾತು. ಇಷ್ಟು ಚಿಕ್ಕವನಿಗೆ ಅಷ್ಟು ಪ್ರಶಂಸೆಯೇಕೆ? ಮುಖ್ಯ ತಮ್ಮ ಆಶೀರ್ವಾದವಿರಬೇಕು "

ಎಂದು ಮಧುಸೂದನ ವಿನಯದಿಂದ ಉತ್ತರವಿತ್ತ.

ನಟರಾಜ ಅಯ್ಯರರು ಬೆಳಗ್ಗೆ ತಮ್ಮ ಮನೆಗೆ ಬರಬೇಕೆಂದು ಆಹ್ವಾನವಿತ್ತು ತೆರಳಿದರು. ಸೋಮಸುಂದರಂರವರ ಕಾರಿನಲ್ಲಿ ಕುಳಿತು ಮಧು ಅವರ ಮನೆಗೆ ಹೊರಟ.

ಬೆಳಗ್ಗೆ ಒಂಬತ್ತು ಘಂಟೆಯ ಹೊತ್ತಿಗೆ ನಟರಾಜ ಅಯ್ಯರರ ಡ್ರೈವರ್ ಕಾರ್ ತಂದು ಹೊರಗೆ ನಿಲ್ಲಿಸಿದ. ಸ್ನಾನ, ಫಲಾಹಾರ ಮುಗಿಸಿಕೊಂಡು ಸೋಮಸುಂದರಂ ಬಳಿ ಮಾತಾಡುತ್ತ ಕುಳಿತಿದ್ದ ಮಧುಸೂದನ ಕಾರಿನ ಹಾರ್ನ್ ಕೇಳಿ ಹೊರಡಲನುವಾದ. ಊಟಕ್ಕೆ ಹಿಂತಿರುಗಿ ಬರಬೇಕೆಂದು ಸುಂದರಂ ಜ್ಞಾಪಿಸಿ ಕಳಿಸಿಕೊಟ್ಟರು.

ಕಾರು ನಟರಾಜ ಅಯ್ಯರರ ಮನೆಯ ಪೋರ್ಟಿಕೋದಲ್ಲಿ ಬಂದು ನಿಂತಾಗ ಅಯ್ಯರರು ಮೆಟ್ಟಲಿಳಿದು ಬಂದು ನಗುಮೊಗದಿಂದ ಸ್ವಾಗತಿಸಿದರು. ಇಬ್ಬರೂ ಒಳಗೆ ಹೋಗಿ ಡ್ರಾಯಿಂಗ್ ರೂಮಿನಲ್ಲಿ ಕುಳಿತರು. ಕಾಫಿ, ಬಿಸ್ಕತ್ ಬಂದಿತು. ಮಧುಸೂದನನಿಗೆ ಸೋಮಸುಂದರಂರವರ ಮನೆಯ ಇಡ್ಲಿ ಕಾಫಿಯೇ

ಹೊಟ್ಟೆಯನ್ನೆಲ್ಲಾ ಆಕ್ರಮಿಸಿಕೊಂಡಿತ್ತು. ಇದಕ್ಕೆಲ್ಲಿ ಸ್ಥಳ ಮಾಡುವುದೆಂದು ಯೋಚಿಸುತ್ತ ಕುಳಿತ. ಅವನ ಸಮಸ್ಯೆಯನ್ನು ಅರ್ಥಮಾಡಿಕೊಂಡ ಅಯ್ಯರರು ನಗುತ್ತ,

"ಯೋಚನೆ ಮಾಡಬೇಡಿ, ಹೆಚ್ಚೇನಿಲ್ಲ ತೆಗೆದುಕೊಳ್ಳಿ. ಮದರಾಸಿನ ಬೇಗೆಗೆ ದಹಿಸಿಹೋಗತ್ತೆ"

ಎಂದರು. ಕಾಫಿ ಬಿಸ್ಕತ್ ಒಳಗೆ ತುಂಬಿಕೊಳ್ಳದೆ ವಿಧಿಯೇ ಇರಲಿಲ್ಲ.

ಲೋಕಾಭಿರಾಮವಾಗಿ ಮಾತಾಡುತ್ತ ನಟರಾಜ ಅಯ್ಯರರು ಮಧುಸೂದನ ಪೂರ್ವೋತ್ತರವೆಲ್ಲವನ್ನೂ ಅರಿತುಕೊಂಡರು. ಮೈಸೂರಿನ ವಿದ್ವಾಂಸರಲ್ಲಿ ರಾಮರಾಯರ ಕಚೇರಿಯನ್ನು ಕೇಳುವ ಅವಕಾಶ ಇದುವರೆಗೆ ತಮಗೆ ಆಗದಿದ್ದರೂ ಅವರ ಕೀರ್ತಿ ಕೇಳಿ ತಿಳಿದಿರುವುದಾಗಿ ಹೇಳಿದರು. ವೀಣೆ ಶೇಷಣ್ಣ, ಬಿಡಾರಂ ಕೃಷ್ಣಪ್ಪನವರ ಗಾಯನ ತಮ್ಮ ಮನಸ್ಸಿನ ಮೇಲೆ ಉಂಟು ಮಾಡಿದ ಪರಿಣಾಮವನ್ನು ನಿರ್ವಂಚನೆಯಿಂದ ತಿಳಿಸಿದರು.

ಮಾತಿನ ಮಧ್ಯೆ ಮಧುಸೂದನ ಗೋಡೆಯ ಮೇಲೆ ತೂಗುಹಾಕಿದ್ದ ಚಿತ್ರಗಳನ್ನು ಒಂದೊಂದಾಗಿ ನೋಡುತ್ತಿದ್ದ.

ಸೋಫಾ ಕುರ್ಚಿ ಟೀಪಾಯ್‌ಗಳಿಂದ ಸುಸಜ್ಜಿತವಾಗಿದ್ದ ಡ್ರಾಯಿಂಗ್ ರೂಮಿನ ತೆಳುನೀಲಿಬಣ್ಣದ ಗೋಡೆಗಳನ್ನು ನಾನಾ ಚಿತ್ರಗಳು ಅಲಂಕರಿಸಿದ್ದವು. ಒಂದು ಕಡೆ ನಟರಾಜ ಅಯ್ಯರರ ತಾತ ಚಂದ್ರಶೇಖರ ಅಯ್ಯರರ ದೊಡ್ಡ ತೈಲ ಚಿತ್ರ ತೂಗುಹಾಕಿತ್ತು. ಅದಕ್ಕೆ ಇದಿರಾಗಿ ಇನ್ನೊಂದು ಗೋಡೆಗೆ ಅಯ್ಯರರ ತಂದೆ ಸುಬ್ರಹ್ಮಣ್ಯ ಅಯ್ಯರರ ದೊಡ್ಡ ಭಾವಚಿತ್ರ ತಗಲಿಹಾಕಿತ್ತು. ಅದರ ಪಕ್ಕದಲ್ಲೇ ಅಯ್ಯರರ ತಾಯಿಯ ಚಿತ್ರ. ಇನ್ನೊಂದು ಪಾರ್ಶ್ವದಲ್ಲಿ ಟೆನ್ನಿಸ್ ಬ್ಯಾಟ್ ಹಿಡಿದು ನಿಂತಿದ್ದ ಶಿವಸ್ವಾಮಿಯ ಭಾವಚಿತ್ರವಿತ್ತು.

ಡ್ರಾಯಿಂಗ್ ರೂಮನ್ನು ಪ್ರವೇಶಿಸುತ್ತಲೇ ಎದುರಿಗೆ ಕಾಣುತ್ತಿದ್ದುದು ನಾಟ್ಯಭಂಗಿಯಲ್ಲಿದ್ದ ಲಲಿತನ ದೊಡ್ಡ ಭಾವಚಿತ್ರ. ಅದರ ಪಕ್ಕದಲ್ಲೇ ಅಯ್ಯರ್ ಮತ್ತು ಅವರ ಪತ್ನಿ ಮೀನಾಕ್ಷಮ್ಮನವರ ಚಿತ್ರಗಳಿದ್ದವು. ಬಾಗಿಲು ಕಿಟಕಿಗಳ ಮೇಲುಭಾಗಕ್ಕೆ ಹೊಂದಿಕೊಂಡ ಹಾಗೆ ಪ್ರಕೃತಿ ದೃಶ್ಯದ ನಾಲ್ಕಾರು ವರ್ಣ ಚಿತ್ರಗಳಿದ್ದವು.

ಮಧುಸೂದನನ ಕಣ್ಣು ಚಿತ್ರಗಳನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿಕೊಂಡು ಬಂದು ಲಲಿತನ ಚಿತ್ರದ ಮೇಲೆ ನಿಂತಿತು.

" ತಮಗೆ ನಾಟ್ಯಶಾಸ್ತ್ರದಲ್ಲಿಯೂ ಅಭಿರುಚಿ ಇರುವ ಹಾಗಿದೆ."

" ಏನೋ ತಕ್ಕಮಟ್ಟಿಗೆ."

" ಆ ಚಿತ್ರ ಯಾರದು ?"

" ಅದು ನನ್ನ ಮಗಳ ಲಲಿತನದು. ಅವಳಿಗೆ ಭರತನಾಟ್ಯದ ಹುಚ್ಚು."

ಎಂದು ಲಲಿತ ಪಂದನಲ್ಲೂರಿಗೆ ಹೋಗಿರುವ ಸಂಗತಿ ತಿಳಿಸಿ,

" ಇನ್ನೇನು ಒಂದೆರಡು ತಿಂಗಳಲ್ಲಿ ಬಂದುಬಿಡುತ್ತಾಳೆ. ಅಭ್ಯಾಸವೆಲ್ಲಾ ಪೂರೈಸುತ್ತ ಬಂದಿದೆ"

ಎಂದರು. ಅವರ ಮಾತು ಕಿವಿಯ ಮೇಲೆ ಬಿತ್ತೋ ಇಲ್ಲವೋ ಅವನ ದೃಷ್ಟಿಯಂತೂ ಚಿತ್ರದಲ್ಲಿ ಕೀಲಿಸಿತ್ತು.

೧೭

ಮೂರುದಿವಸ ಮದರಾಸಿನಲ್ಲಿ ನಿಲ್ಲಬೇಕಾಯಿತು. ಒಂದು ಕಡೆ ಸೋಮ ಸುಂದರಂ, ಒಂದು ಕಡೆ ನಟರಾಜ ಅಯ್ಯರರ ಉಪಚಾರದಿಂದ ಅವನಿಗೆ ಕಟರೆ ಯಾಗಿ ಹೋಗಿತ್ತು. ಮದರಾಸಿಗೆ ಬಂದ ಮೇಲೆ ಟೈಗರ್ ವರದಾಚಾರ್ಯರನ್ನು ಒಮ್ಮೆ ನೋಡಿ ಹೋಗಬೇಕೆಂಬ ಒಂದು ಚಪಲವಿತ್ತು.

ಮಧುಸೂದನ ಒಂದೇ ಒಂದು ಸಲ ಬೆಂಗಳೂರಲ್ಲಿ ಆಚಾರ್ಯರ ಕಚೇರಿ ಕೇಳಿದ್ದ. ಅವೊತ್ತು ಗಾಯನ ಸಮಾಜದಲ್ಲಿ ಅವರ ಹಾಡಿಕೆಯಿತ್ತು. ಅವರ ವಿಚಾರ ಬೇಕಾದಷ್ಟು ಕೇಳಿದ್ದ ಅವನಿಗೆ ಅವರನ್ನು ಪ್ರತ್ಯಕ್ಷ ಕಂಡಾಗ ಮನಸ್ಸಿನಲ್ಲಿ ವಿಚಿತ್ರ ಭಾವನೆಯುಂಟಾಯಿತು. ಅವರ ವಕ್ರರೂಪವನ್ನು ನೋಡಿ ' ಈ ವ್ಯಕ್ತಿ ನಿಜವಾಗಿ ಹಾಡುವುದೆ ?' ಎನ್ನಿಸಿತ್ತು. ಆದರೆ ಕಚೇರಿ ಮುಗಿಯುವ ಹೊತ್ತಿಗೆ ಅವನ ಅಭಿಪ್ರಾಯ ಬದಲಾಯಿಸಿತ್ತು. ಶಾರೀರದಲ್ಲಿ ಮಾರ್ದವತೆಯಿಲ್ಲದಿದ್ದರೂ ಆಚಾರ್ಯರು ಅರ್ಧಘಂಟೆಯ ಹೊತ್ತು ಕೇತಾರಗೌಳ ರಾಗವನ್ನು ಸುಂದರವಾಗಿ ಆಲಾಪನೆ ಮಾಡಿದ್ದ ರೀತಿ ಮಧುಸೂದನನ ಮನಸ್ಸನ್ನು ಸೂರೆಗೊಂಡಿತ್ತು. ಆ ರಾಗವನ್ನು ಹಾಗೆ ಹಾಡಬಹುದೆಂದು ಅವನು ತಿಳಿದಿರಲಿಲ್ಲ. ಆ ' ಬಾನಿ ' ಅವನಿಗೆ ತುಂಬ ಹಿಡಿಸಿತ್ತು. ಸಂಗೀತ ಕ್ಷೇತ್ರ ಪ್ರವೇಶಿಸಿ ಅಭ್ಯಾಸದಲ್ಲಿದ್ದ ಅವನಿಗೆ ವರದಾಚಾರ್ಯರ ದರ್ಶನವನ್ನೊಮ್ಮೆ ಮಾಡಬೇಕೆಂಬ ವಾಂಛೆ ಮೂಡಿದ್ದು ಆಗಲೇ.

ಆ ಅವಕಾಶ ಸಿಕ್ಕಲು ನಾಲ್ಕಾರು ವರ್ಷ ಕಾಯಬೇಕಾಯಿತು.

ವೃದ್ಧಾಪ್ಯದ ನಿಮಿತ್ತ ವರದಾಚಾರ್ಯರು ಕಚೇರಿಗಳನ್ನು ಹೆಚ್ಚಾಗಿ ಮಾಡು ತ್ತಿರಲಿಲ್ಲ. ಅವರು ಮನೆ ಬಿಟ್ಟು ಹೋಗುತ್ತಿದ್ದುದೇ ಅಪರೂಪ. ಬೇಕಾದವರು ಮನೆಗೇ ಹುಡುಕಿಕೊಂಡು ಬರುತ್ತಿದ್ದರು. ಶಿಷ್ಯವರ್ಗವಂತೂ ಹತ್ತಿರವಿದ್ದು ಸದಾ ಸೇವೆಮಾಡುತ್ತಿತ್ತು.

ಪ್ರಸಿದ್ಧ ವಿದ್ವಾಂಸರಾದ ವರದಾಚಾರ್ಯರಿಗೆ ಟೈಗರ್ ಎನ್ನುವ ಹೆಸರು ಅನ್ವರ್ಥವಾಗಿಯೇ ಇತ್ತು. ರೂಪದಲ್ಲೂ ಅಷ್ಟೆ, ಕೀರ್ತಿಯಲ್ಲೂ ಅಷ್ಟೆ. ದಕ್ಷಿಣದ ದೊಡ್ಡದೊಡ್ಡ ವಿದ್ವಾಂಸರೂ ಕೂಡ ವರದಾಚಾರ್ಯರಿಗೆ ಪಕ್ಕವಾದ್ಯ ನುಡಿಸಲು ಹೆದರುತ್ತಿದ್ದರು. ಆಚಾರ್ಯರ ಪಾಂಡಿತ್ಯ ನಿಸ್ಸೀಮವಾಗಿತ್ತು. ಶಾಸ್ತ್ರಕಲೆಗಳಲ್ಲಿ ಅವರ ಜ್ಞಾನಕ್ಕೆ ಸಾಟಿಯಾಗಬಲ್ಲ ವಿದ್ವಾಂಸರ ಸಂಖ್ಯೆ ದಕ್ಷಿಣ ಭಾರತದಲ್ಲೇ ವಿರಳವಾಗಿತ್ತು. ಕಪ್ಪಗೆ ಕುಳ್ಳಗಿದ್ದ ಡೊಳ್ಳು ಹೊಟ್ಟೆಯ ಮೆಳ್ಳೆಗಣ್ಣಿನ ಆಚಾರ್ಯರು ಕಚೇರಿ ಮಾಡಲು ಕುಳಿತರೆ ಗಾನಸರಸ್ವತಿ ಸಭೆಯಲ್ಲಿ ತಾಂಡವ ವಾಡುವಂತಿರುತ್ತಿತ್ತು.

ಆದರೆ ಆ ಬಾಹ್ಯರೂಪ ಎಷ್ಟು ಕಠಿನವೋ ಅಂತರಂಗ ಅಷ್ಟು ಕೋಮಲ ವಾಗಿತ್ತು. ಹಸುಳೆಯಂಥ ಹಾಲು ಮನಸ್ಸು. ಅಹಂಕಾರವನ್ನು ಕಾಣದ ಪ್ರವೃತ್ತಿ. ಹಾಡಿಕೆಯಲ್ಲಿ ಇನ್ನಿಲ್ಲವೆಂಬ, ಅವರದೇ ಆದ ಮನೋಧರ್ಮ. ಆ ಮನೋಧರ್ಮ ಸಂತತವಾದ ಧ್ಯಾನಸಾಧನೆಗಳ ಫಲವಾಗಿತ್ತು. ಆಚಾ ರ್ಯರು ಕರ್ಣಾಟಕ ಸಂಗೀತ ಪ್ರಪಂಚದ ದಿಗ್ಗಜದಂತಿದ್ದರು.

ಮಧು ಟೈಗರ್‌ರವರ ಭೇಟಿಮಾಡಲು ಸೋಮಸುಂದರಂ ನೆರವಾದರು. ತಮ್ಮ ಕಾರಿನಲ್ಲಿ ಅವನನ್ನು ಕುಳ್ಳಿರಿಸಿಕೊಂಡು ತಾವೇ ಆಚಾರ್ಯರ ಮನೆಗೆ ಕರೆದುಕೊಂಡು ಬಂದರು. ಪರಸ್ಪರ ಪರಿಚಯ ಕುಶಲ ಪ್ರಶ್ನೆಗಳಾದ ಮೇಲೆ ಆಚಾರ್ಯರು,

"ಕಚೇರಿಗೆ ಬರಲಾಗಲಿಲ್ಲ. ನಿಮ್ಮ ಹಾಡಿಕೆ ರೇಡಿಯೋದಲ್ಲಿ ಕೇಳಿದ್ದೇನೆ"

ಎಂದರು. ಮಧುಸೂದನ ಹೂಗುಟ್ಟಿ ಸುಮ್ಮನಾದ. ಹೇಗಿತ್ತು ಎಂದು ಕೇಳಬೇಕೆಂದು ಅವನಿಗೆ ಕುತೂಹಲ. ಆದರೆ ಕೇಳಲು ಧೈರ್ಯವಾಗಲಿಲ್ಲ. ಅದನ್ನು ಅವರೇ ಗ್ರಹಿಸಿ,

"ಚೆನ್ನಾಗಿ ಹಾಡುತ್ತೀರಿ. ಒಳ್ಳೆಯ ಮನೋಧರ್ಮ; ಕಂಠದಲ್ಲಿ

ಸತ್ವವಿದೆ. ಹಾಡಿಕೆಗೆ ಶಾರೀರ ಸಂಪತ್ತೇ ಮುಖ್ಯ. ಅದನ್ನು ಚೆನ್ನಾಗಿ ಕಾಪಾಡಿ ಕೊಳ್ಳಿ"

ಎಂದರು. ಮಧುಸೂದನನಿಗೆ ಏನು ಉತ್ತರ ಹೇಳಬೇಕೋ ತೋರಲಿಲ್ಲ.

"ತಮ್ಮ ಆಶೀರ್ವಾದ"

ಎಂದಷ್ಟೇ ನುಡಿದ. ಅವನ ಹೃದಯ ತುಂಬಿಬಂದಿತ್ತು.

"ಹೋಗೋಣವೇ? ಹೊತ್ತಾಯಿತು"

ಎಂದು ಸೋಮಸುಂದರಂ ಎಚ್ಚರಿಸಿದರು. ಮಧುಸೂದನ ಆಚಾರ್ಯರ ಅಪ್ಪಣೆ ಬೇಡಲು ಅವರ ಮುಖ ನೋಡಿದ. ಮಂದಹಾಸ ಅವರ ಕಠಿನ ಮುಖವನ್ನು ಆರ್ದ್ರಗೊಳಿಸಿತ್ತು.

"ತುಂಬ ದೂರದಿಂದ ಬಂದಿದೀರಿ. ನನ್ನ ಹಾಡಿಕೆ ಕೇಳದೆ ಹೋಗು ತ್ತೀರಾ? ಬೆಂಗಳೂರಿನಲ್ಲಿ ನನ್ನ ಕಚೇರಿ ಕೇಳಿ ತುಂಬ ಮೆಚ್ಚಿಕೆಯಾಯಿತೆಂದಿರಿ"

ಎಂದು ನಕ್ಕರು.

"ತಮಗೆ ವೃಥಾ ಆಯಾಸವಾಗುತ್ತದೆ."

"ನನಗೆ ಯಾವಾಗಲೂ ಆಯಾಸವೇ. ವಯಸ್ಸಾದ ಮೇಲೆ ಏನಿದೆ ಹೇಳಿ?"

ಎಂದು ಶಿಷ್ಯನಿಗೆ ತಂಬೂರಿ ತರಲು ಹೇಳಿದರು. ರೂಮಿನ ಒಂದು ಕಡೆ ಬೆಂಚಿನ ಮೇಲೆ ಗೌಸು ಹಾಕಿಟ್ಟಿದ್ದ ತಂಬೂರಿಯನ್ನು ಶಿಷ್ಯ ತಂದು ಮುಂದಿಟ್ಟ. ಆಚಾರ್ಯರು ಅದನ್ನು ಶ್ರುತಿಮಾಡಿ ಎದೆಗೊರಿಸಿಕೊಂಡು ಮಿಾಟುತ್ತ,

"ಕೇತಾರಗೌಳವನ್ನೇ ಹಾಡಲೆ?"

"ತಮ್ಮ ಚಿತ್ತ."

ರಾಗದ ಸೌಷ್ಟವಕ್ಕಿಂತ ಹೆಚ್ಚಾಗಿ ಅದರ ಭಾವ ಅವರ ಕೋಮಲಾಂತಃಕರಣದಿಂದ ತಾನತಾನವಾಗಿ ಉದ್ಭವಿಸಿತು. ಚಿತ್ರವತ್ತಾಗಿ ಹೊರ ಹೊಮ್ಮಿದ ಕೇತಾರಗೌಳದ ಮೂರ್ಛನೆಗಳು ನವುರಾದ ರೇಷ್ಮೆಯ ನೂಲಿನಲ್ಲಿ ದಿವ್ಯವಾದ ಪೀತಾಂಬರವನ್ನು ನೆಯ್ದು ಪ್ರೀತಿಯಿಂದ ಅರ್ಪಿಸಿದಹಾಗಿತ್ತು. ಒಂದೊಂದು ನುಡಿಕಾರಕ್ಕೂ ಸುಂದರವಾದ ಭಾವಗಳು ರೂಪುತಾಳಿ ಎದುರಿಗೆ ನಿಲ್ಲುತ್ತಿದ್ದವು. ಮಾತಿಗೆ ನಿಲುಕದ ಒಂದು ವಿಲಾಸ ವಾತಾವರಣವನ್ನು ತುಂಬಿ, ಅನುಭವಕ್ಕೆ ವಿನೂತನವಾದ ಒಂದು ಪರಿಮಳದಂತೆ ಚಿತವನ್ನಾವರಿಸಿತು.

ಊಹೆಗೂ ಮೀರಿದ ನಯವನ್ನು ಸಾಧಿಸಿದ್ದ ಆಚಾರ್ಯರ ಕಲೆ ಶ್ರಾವಕರ ಚಿತ್ತವನ್ನು ಸೂರೆಗೊಂಡಿತು.

ರಾಗವನ್ನು ಕೇಳುತ್ತ ಕೇಳುತ್ತ ಮಧುಸೂದನನ ಕಂಠ ಗದ್ಗದವಾಯಿತು. ಕಣ್ಣು ಹನಿಗೂಡಿತು.

ಸೋಮಸುಂದರಂ ಮಂತ್ರಮುಗ್ಧರಾದವರಂತೆ ಕುಳಿತಿದ್ದರು.

ಆಚಾರ್ಯರು ತಂಬೂರಿ ಕೆಳಗಿಳಸಿ ಮಧುಸೂದನನ ಮುಖ ನೋಡಿದರು. ಅವರ ಮುಖವೂ ಭಾವೋದ್ವೇಗದಿಂದ ಕೆಂಪೇರಿತ್ತು. ಮಧು ತಡೆಯಲಾರದೆ ಮೇಲೆದ್ದು ಆಚಾರ್ಯರ ಎರಡು ಪಾದಗಳ ಮೇಲೂ ತಲೆ ಯಿಟ್ಟು ನಮಸ್ಕರಿಸಿದ. ಭಕ್ತಿಕಾಣಿಕೆಯಾಗಿ ಹೊಮ್ಮಿದ ಕಂಬನಿಯಿಂದಲೇ ಪಾದಪೂಜೆಯಾಯಿತು. ವರದಾಚಾರ್ಯರು ಅತ್ಯಂತ ವಾತ್ಸಲ್ಯದಿಂದ ಅವನ ತಲೆಯ ಮೇಲೆ ಕೈಯಿಟ್ಟು,

"ಹೋಗಿ ಬನ್ನಿ. ದೇವರು ಒಳ್ಳೆಯದನ್ನು ಮಾಡಲಿ"

ಎಂದು ಮನಃಪೂರ್ವಕವಾಗಿ ಹರಸಿದರು.

ಕಾರಿನಲ್ಲಿ ಕುಳಿತು ಹಿಂದಿರುಗುತ್ತ ಸೋಮಸುಂದರಂ ಆಚಾರ್ಯರ ವರ್ತನೆಯ ಬಗೆಗೆ ಅಚ್ಚರಿ ವ್ಯಕ್ತಪಡಿಸಿದರು.

"ವರದಾಚಾರ್ಯರದು ವಿಚಿತ್ರ ಸ್ವಭಾವ. ಅವರನ್ನು ಒಲಿಸಿ ಕೊಳ್ಳುವುದೇ ಕಷ್ಟ. ವಿದ್ವತ್ತಿನಲ್ಲಂತೂ ಅವರ ಆಳವನ್ನು ಕಂಡು ಹಿಡಿದಿರು ವವರೇ ಇಲ್ಲ. ಮನಸ್ಸು ಬಂದರೆ ಶಿಷ್ಯರಿಗೆ ಗಂಟೆಗಟ್ಟಲೆ ಪಾಠ ಹೇಳುತ್ತ ಕುಳಿತುಬಿಡುತ್ತಾರೆ. ಮನಸ್ಸು ಬರಲಿಲ್ಲವೋ, ತಿಂಗಳುಗಟ್ಟಲೆಯಾದರೂ ಒಂದು ರಾಗದ ಛಾಯೆ ಅಂದು ತೋರಿಸುವುದಿಲ್ಲ.

"ನಿಮ್ಮನ್ನು ಅಲ್ಲಿಗೆ ಕರೆದೊಯ್ದಾಗ ನನಗೆ ಸಂದೇಹವಿತ್ತೇ ಇತ್ತು. ಅವರು ಸರಿಯಾಗಿ ಮಾತಾಡಿಸುತ್ತಾರೋ ಇಲ್ಲವೋ ಎಂದಿದ್ದೆ. ಆದರೆ ನಿಮ್ಮನ್ನು ಅವರು ಮೆಚ್ಚಿಕೊಂಡು ಸೌಜನ್ಯದಿಂದ ವರ್ತಿಸಿದ ರೀತಿ ನನ್ನನ್ನು ಅರೆಮೂಕ ನನ್ನಾಗಿ ಮಾಡಿತು. ಭೇಟಿಗೆ ಹೋದವರ ಮುಂದೆ ಹಾಡುವುದಿರಲಿ, ಪ್ರಾಣಿ ಮನಸ್ಸು ಬಿಚ್ಚಿ ಮಾತಾಡುವುದೂ ಕಷ್ಟ. ಶಿಷ್ಯರೇ ಎದುರಿಗೆ ಬರುವುದಕ್ಕೆ ನಡಗುತ್ತಾರೆ. ಹುಲಿ ಎಂದರೆ ಹುಲಿಯೇ. ಆದರೆ ಇವೊತ್ತಿನ ದೃಶ್ಯ ನಿಜವಾಗಿ ನನ್ನನ್ನು ಬೆರಗುಮಾಡಿತು. ಇದು ನಿಮ್ಮ ಪುಣ್ಯವೋ ಏನೋ ಹೇಳಲಾರೆ."

ಪುಣ್ಯ ಎನ್ನುವುದರಲ್ಲಿ ಮಧುಸೂದನನಿಗೆ ಸಂದೇಹವೇ ಉಳಿದಿರಲಿಲ್ಲ. ಅವನ ಮನಸ್ಸಿಗೆ ತಾನಿನ್ನೂ ಆಚಾರ್ಯರ ಮುಂದೆ ಕುಳಿತು ಅವರ ಅಲೌಕಿಕವಾದ ಅಲಾಪನೆ ಕೇಳುತ್ತಿರುವ ಹಾಗೆಯೇ ಇತ್ತು. ಕಲಕಿದ್ದ ಅಂತಃಕರಣ ಕ್ಷಣಕ್ಷಣಕ್ಕೆ ಮಾರ್ನುಡಿಯುತ್ತಿತ್ತು :

"ಎಂಥ ದೊಡ್ಡ ಜೀವ; ಎಂಥ ದೊಡ್ಡ ಮನಸ್ಸು."

## ೧೮

ಲಲಿತನ ನಾಟ್ಯಾಭ್ಯಾಸ ಮುಗಿಯುತ್ತ ಬಂದಿತ್ತು. ಶಿಷ್ಯರ ಯೋಗ್ಯತೆಯನ್ನು ಪೂರ್ಣವಾಗಿ ಗ್ರಹಿಸದೆ ಮೀನಾಕ್ಷಿ ಸುಂದರಂಪಿಳ್ಳೆಯವರು ಅವರಿಗೆ ಪಾಠ ಹೇಳುತ್ತಲೇ ಇರಲಿಲ್ಲ. ಸಿಕ್ಕಿದವರೆಲ್ಲಾ ತಮ್ಮ ಬಳಿ ಕಲಿತು ಭರತನಾಟ್ಯಕ್ಕೆ ಅಪಚಾರವೆಸಗಬಾರದೆಂಬುದೇ ಅವರ ಸಿದ್ಧಾಂತವಾಗಿತ್ತು. ಈ ತತ್ತ್ವವನ್ನು ಅವರು ಅನುಷ್ಠಾನದಲ್ಲಿ ಸ್ವಲ್ಪವೂ ತಪ್ಪದೆ ಪಾಲಿಸುತ್ತಿದ್ದರು. ಹಣಕ್ಕಲ್ಲದೆ ಗುಣಕ್ಕೆ ಮೆಚ್ಚುತ್ತಿದ್ದ ಪಿಳ್ಳೆಯವರು ಒಂದು ಹಿಂಡು ಶಿಷ್ಯರನ್ನು ತಯಾರುಮಾಡಿ ನಾಟ್ಯದ ಸಂತೆಗೆ ಕಳಿಸಲಿಚ್ಛಿಸದೆ ಕಲೆಗಾಗಿ ಆಜೀವವೂ ದುಡಿಯುವ ನಿಷ್ಠಾವಂತರನ್ನೇ ಆರಿಸಿ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಿದ್ದರು. ಅಂತೆಯೇ ಅವರ ಖ್ಯಾತಿಯನ್ನು ಅವರ ಶಿಷ್ಯರು ಪ್ರಪಂಚದ ನಾನಾ ದಿಕ್ಕುಗಳಿಗೂ ಬೀರಿ ಬಂದಿದ್ದರು.

ಲಲಿತ ಈ ಅಗ್ನಿಪರೀಕ್ಷೆಯಲ್ಲಿ ಗೆದ್ದಿದ್ದಳು. ಅವಳದು ಬರೀ ಹುಡುಗುತನದ ಉತ್ಸಾಹವಾಗಿರದೆ ರೂಢಮೂಲವಾದ ಕಲಾಭಿರುಚಿಯೆಂಬುದನ್ನು ಚಾಣಾಕ್ಷ ಪಿಳ್ಳೆಯವರು ಕಂಡುಕೊಳ್ಳಲು ಹೆಚ್ಚುಕಾಲ ಬೇಕಾಗಲಿಲ್ಲ. ಬೆರಳು ತೋರಿಸಿದರೆ ಹಸ್ತ ನುಂಗುತ್ತಿದ್ದ ಅವಳ ಬುದ್ಧಿ ಗುರುಗಳು ಹೇಳಿಕೊಟ್ಟದ್ದನ್ನು ಸಾವಕಾಶವಿಲ್ಲದೆ ಗ್ರಹಿಸುತ್ತಿತ್ತು. ಆಂಗಿಕಾಭಿನಯದ ಸೂಕ್ಷ್ಮ ಪ್ರಭೇದಗಳನ್ನೂ ಲಕ್ಷಣಬದ್ಧವಾದ ಮುದ್ರೆಗಳನ್ನೂ ಹೃದ್ಗತಮಾಡಿಕೊಳ್ಳುವುದರಲ್ಲಿ ಅವಳು ತೋರಿಸುತ್ತಿದ್ದ ಆಸಕ್ತಿ ಗುರುಗಳ ವಿಶ್ವಾಸಕ್ಕೆ ಪಾತ್ರವಾಗದಿರಲಿಲ್ಲ.

ತಾನವರ್ಣ, ಸ್ವರಜತಿ, ತಿಲ್ಲಾಣಗಳಿಂದ ಲಲಿತನ ಜ್ಞಾನಭಂಡಾರ ತುಂಬಿತು. ಅಭಿನಯಕ್ಕೆ ಸೊಗಸಾಗಿ ಒದಗುವ ಅನೇಕ ಪದಗಳು ಅವಳ ಬತ್ತಳಿಕೆಗೆ ಸೇರಿದವು. ಒಂದು ವರ್ಷದ ಅಭ್ಯಾಸ ಹತ್ತು ತಿಂಗಳಲ್ಲಿ ಮುಗಿದಿತ್ತು.

ನಟರಾಜ ಅಯ್ಯರರು ಮಗಳ ಯೋಗಕ್ಷೇಮ ವಿಚಾರಿಸಿ ವಾರವಾರಕ್ಕೂ ಕಾಗದ ಬರೆಯುತ್ತಿದ್ದರು. ಹಣಕ್ಕಾಗಲಿ ಅನುಕೂಲಕ್ಕಾಗಲಿ ಯಾವ ಕೊರತೆಯೂ ಇರಲಿಲ್ಲ. ಲಲಿತನ ಯೋಗಕ್ಷೇಮದ ಹೊರೆ ಹೊತ್ತಿದ್ದ ವಿಶ್ವನಾಥನ್ನರ ಸಂಬಂಧಿ ಪಾಟಿ ತನ್ನ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸುತ್ತಿತ್ತು.

ನಟರಾಜ ಅಯ್ಯರರು ಲಲಿತನಿಗೆ ಈಚೆಗೆ ಬರೆದಿದ್ದ ಒಂದು ಕಾಗದದಲ್ಲಿ ಮನೆಯ ಯೋಗಕ್ಷೇಮದ ಜೊತೆಗೆ, ಮಧುಸೂದನನ ವಿಚಾರವನ್ನೂ ಎರಡು ಮಾತು ಬರೆದಿದ್ದರು:

"........ ೧೮ನೇ ತಾರೀಕಿನ 'ಹಿಂದೂ' ೧೯ರ 'ಕಲ್ಕಿ' ಮತ್ತು 'ದಿನಮಣಿ' ಪತ್ರಿಕೆಗಳಲ್ಲಿ ಈ ಸಂಗೀತ ಕಚೇರಿಯ ವಿಷಯ ಬಂದಿದೆ. ಆತನ ಹಾಡಿಕೆ ಕೇಳಿದ ಮೇಲೆ ಮೈಸೂರಿನ ವಿದ್ವಾಂಸರ ವಿಚಾರದಲ್ಲಿ ನನಗಿದ್ದ ವಿಶ್ವಾಸ ಇಮ್ಮಡಿಯಾಯಿತು; ರಸಿಕರಂಜಿನೀ ಸಭೆಯವರಿಗಿದ್ದ ದುರಭಿಪ್ರಾಯ ಬದಲಾಯಿಸಿತು. ಒಂದು ವಿಧದಲ್ಲಿ ಆತನ ಸಂಗೀತ ಕಚೇರಿಯನ್ನು ಸಭೆಯವರು ಏರ್ಪಡಿಸುವಂತೆ ಮಾಡಲು ನಾನೇ ಕಾರಣ. ಆತನನ್ನು ನಮ್ಮ ಮನೆಗೂ ಆಹ್ವಾನಿಸಿದ್ದೆ. ತುಂಬ ವಿನಯಪರ. ಆತನ ವಿದ್ವತ್ತಿಗೆ ಆ ಸಂಸ್ಕೃತಿ ಭೂಷಣವಾಗಿದೆ. ಸಾಮಾನ್ಯವಾಗಿ ಸಂಗೀತಗಾರರಿಗೆ ತಮ್ಮ ಕ್ಷೇತ್ರವೊಂದನ್ನು ಬಿಟ್ಟರೆ ಇತರ ಜ್ಞಾನ ವಿಭಾಗಗಳ ಅನುಭವವಿರುವುದಿಲ್ಲ. ಮಧುಸೂದನ ಈ ಅಪವಾದಕ್ಕೆ ಸಿಕ್ಕಿರುವ ಹಾಗೆ ಕಾಣುವುದಿಲ್ಲ. ಆತನೊಡನೆ ನಾನು ವ್ಯವಹರಿಸಿದ ಅರ್ಧ ದಿನದಲ್ಲಿ ಅವನ ವಿದ್ಯಾಬುದ್ಧಿಗಳ ಮಟ್ಟವೇನೆಂಬುದನ್ನು ತಿಳಿದುಕೊಂಡೆ.

"ನಮ್ಮ ಮನೆಯಲ್ಲೂ ಆತನ ಕಚೇರಿ ಇಡಿಸಬೇಕೆಂಬ ಕುತೂಹಲವಿತ್ತು. ಆದರೆ ಮನೆಯಲ್ಲಿ ನೀನೂ ಇಲ್ಲದೆ ಶಿವಸ್ವಾಮಿಯೂ ಇಲ್ಲದೆ ಇರುವಾಗ ಅಂಥ ಸಂಭ್ರಮ ನಮ್ಮ ಮನಸ್ಸಿಗೆ ಬೇಕಾಗಲಿಲ್ಲ. ಮುಂದೆ ಯಾವಾಗಲಾದರೂ ಅವಕಾಶವಾದರೆ ನೋಡೋಣ. ನಿನ್ನ ಶಿಕ್ಷಣ ಸಾಂಗವಾಗಿ ಮುಗಿಯುತ್ತ

ಬಂದಿರುವುದನ್ನು ಕೇಳಿ ತುಂಬ ಸಂತೋಷವಾಯಿತು. 'ಅಮ್ಮ'ನಿಗಂತೂ ಮೂರು ಹೊತ್ತೂ ನಿನ್ನದೇ ಯೋಚನೆ. ಅವಳ ಕಾಟ ಹೆಚ್ಚಾಗಿದೆ. ಇನ್ನೊಂದು ತಿಂಗಳಿಗೆ ಬರುವ ನೀನು ಈಗಲೇ ಬರಬಾರದೇ ಎನ್ನುತ್ತಿದಾಳೆ. ಅವಳಿಗೆ ನೀನೇ ಒಂದು ಕಾಗದ ಬರೆದು ಸಮಾಧಾನ ಹೇಳು."

ಕಾಗದ ಲಲಿತನ ಕುತೂಹಲವನ್ನು ಕೆರಳಿಸಿತು. ತಂದೆ ಸ್ವಲ್ಪಕ್ಕೆ ಸಂಗೀತಗಾರರನ್ನು ಮೆಚ್ಚುವವರಲ್ಲ. ಅವರ ಅಭಿರುಚಿಯ ಆಳದ ಪರಿಚಯ ಅವಳಿಗಿತ್ತು. ವಂಶಪಾರಂಪರ್ಯವಾಗಿ ಅವರಲ್ಲಿ ಮೂಡಿಬಂದಿದ್ದ ಸಂಗೀತ ಪ್ರಜ್ಞೆ ಕಳಪೆಯ ಗಿಲೀಟು ಕೆಲಸಕ್ಕೆ ಸೋಲುತ್ತಿರಲಿಲ್ಲ. ಅವರ ರಸಜ್ಞತೆ ಕೇಳುಮಟ್ಟದ್ದಾಗಿರದೆ ತಾರತಮ್ಯ ವಿವೇಚಕವಾಗಿತ್ತು. ಅದಕ್ಕೆ ನಿದರ್ಶನವೂ ಬೇಕಾದಷ್ಟು ದೊರಕಿತ್ತು.

ಒಮ್ಮೆ ಲಲಿತ ಕಾಲೇಜಿನಲ್ಲಿ ಕಲಿತು ಬಂದ ಒಂದು ಸಿನೀಮಾ ಹಾಡನ್ನು ತನ್ನ ರೂಮಿನಲ್ಲಿ ಕುಳಿತು ಕುರುಕುತ್ತಿದ್ದಳು. ಹೊರಗಡೆ ಪತ್ರಿಕೆ ಓದುತ್ತ ಕುಳಿತಿದ್ದ ಅಯ್ಯರರಿಗೆ ಅದು ಕೇಳಿಸಿ, ಅವರು ಹಾಗೆಯೇ ಎದ್ದು ಬಂದು ರೂಮಿನ ಬಾಗಿಲಲ್ಲಿ ನಿಂತು ದುರುಗುಟ್ಟಿಕೊಂಡು ನೋಡಿದರು.

"ನೀನು ಹಾಡುತ್ತಿರುವುದು ಯಾವ ಹಾಡು?"

ತಂದೆಯ ಧ್ವನಿ ಕೇಳಿ ಲಲಿತ ಬೆಚ್ಚಿಬಿದ್ದಳು.

"'ಬಂಧನ್' ಹಾಡು."

"ಯಾರ ಹತ್ತಿರ ಕಲಿತೆ?"

"ನನ್ನ ಸ್ನೇಹಿತೆ ಶ್ರೀರಂಜಿನಿ ಹೇಳುತ್ತಿರುತ್ತಾಳೆ."

"ಅವಳು ಹೇಳಿದರೆ ಹೇಳಿಕೊಳ್ಳಲಿ, ನೀನು ಹೇಳಕೂಡದು. ಸಿನೀಮಾ ಹಾಡು ನಿನ್ನ ಬಾಯಲ್ಲಿ ಬರುವುದಕ್ಕೆ ಇವೊತ್ತೇ ಕೊನೆ. ಇನ್ನು ಮೇಲೆ ನನ್ನ ಕಿವಿಗೆ ಬಿದ್ದೀತು, ಎಚ್ಚರಿಕೆ"

ಎಂದು ಗುಡುಗಾಡಿ ಹೊರಟು ಹೋಗಿದ್ದರು.

ಆ ಒಂದು ಅನುಭವ ಲಲಿತನ ಮನಸ್ಸಿನ ಮೇಲೆ ಅಳಿಸಲಾಗದ ಮುದ್ರೆಯನ್ನೊತ್ತಿಬಿಟ್ಟಿತ್ತು.

ನಟರಾಜ ಅಯ್ಯರರು ಮಮತೆಯಲ್ಲಿ ಎಷ್ಟು ದೂರ ಹೋಗುತ್ತಿದ್ದರೋ ಶಿಸ್ತಿನಲ್ಲಿ ಅದಕ್ಕಿಂತ ಹೆಚ್ಚು ದೂರ ಹೋಗುತ್ತಿದ್ದರು. ಮಮತೆಯಲ್ಲಿ ಅವರ

ಮನಸ್ಸು ಎಷ್ಟು ಕೋಮಲವಾಗುತ್ತಿತ್ತೋ ಶಿಸ್ತಿನಲ್ಲಿ ಅಷ್ಟೂ ಕಠಿನವಾಗುತ್ತಿತ್ತು. ಮದರಾಸಿನಲ್ಲಿ ಎಲ್ಲಿ ಸಂಗೀತ ಕಚೇರಿ, ನಾಟ್ಯ ಪ್ರದರ್ಶನಗಳಾದರೂ ಅಯ್ಯರರು ಅಲ್ಲಿಗೆ ಹೆಂಡತಿಮಕ್ಕಳೊಡನೆ ಹೋಗುತ್ತಿದ್ದರು. ಆದರೆ ಒಂದು ದಿನವಾದರೂ ಸಿನೀಮಾ ಮಂದಿರ ಹೇಗಿದೆಯೆಂಬುದನ್ನು ನೋಡಿದವರಲ್ಲ. ಈ ನೀತಿ ಆದರ್ಶ ಗಳನ್ನೇ ಮಕ್ಕಳಿಗೂ ಬೋಧಿಸುತ್ತಿದ್ದರು.

ಲಲಿತ ೧೮ರ ' ಹಿಂದೂ ' ಪತ್ರಿಕೆಯನ್ನೂ ನೋಡಿರಲಿಲ್ಲ. ೧೯ರ ' ಕಲ್ಕಿ ' ' ದಿನಮಣಿ ' ಪತ್ರಿಕೆಗಳನ್ನೂ ನೋಡಿರಲಿಲ್ಲ. ತಂದೆ ಬರೆದ ಕಾಗದ ನೋಡಿದ ಮೇಲೆ ಕುತೂಹಲ ಕೆರಳಿ ಪತ್ರಿಕೆಗಳ ಆ ಪ್ರತಿಗಳನ್ನು ನೋಡಬೇಕೆನ್ನಿಸಿತು. ಆದರೆ ಪಂದನಲ್ಲೂರಿನಲ್ಲಿ ಅವು ಸಿಕ್ಕುವ ಹಾಗಿರಲಿಲ್ಲ. ಹಿಂದಿನ ಪ್ರತಿಗಳು ಬೇಕಾಗಿದ್ದರೆ ತಂಜಾವೂರಿನಿಂದಲೋ ಮದರಾಸಿನಿಂದಲೋ ತರಿಸಿಕೊಳ್ಳ ಬೇಕಾಗಿತ್ತು. ಪುನಃ ತಂದೆಗೆ ಆ ವಿಷಯದಲ್ಲಿ ಕಾಗದ ಬರೆಯದೆ, ತಂಜಾವೂರಿಗೆ ಹೊರಟಿದ್ದ ನಾಟ್ಯಸ್ನೇಹಿತೆಯೊಬ್ಬಳ ನೆರವಿನಿಂದ ಪತ್ರಿಕೆಯ ಪ್ರತಿಗಳನ್ನು ತರಿಸಿ ಕೊಳ್ಳಲು ಏರ್ಪಾಡು ಮಾಡಿದಳು.

' ಹಿಂದೂ ' ಪತ್ರಿಕೆ ಮಧುಸೂದನನ ಪಡಿಯಚ್ಚಿನೊಡನೆ ಮುಕ್ಕಾಲು ಕಾಲಂ ವಿಮರ್ಶೆ ಪ್ರಕಟಿಸಿತ್ತು. 'ಕಲ್ಕಿ' 'ದಿನಮಣಿ'ಗಳು ಒಂದೂವರೆ ಎರಡು ಕಾಲಂ ಅಚ್ಚುಮಾಡಿದ್ದವು. 'ಹಿಂದೂ' ವಿಮರ್ಶೆ ಬರೆದಿದ್ದ ಪ್ರೊ|| ಸದಾ ನಂದಂ ವಿದ್ವತ್ತು ಜನರಂಜನೆಗಳೆರಡನ್ನೂ ಮುಖ್ಯವಾಗಿ ಪರಿಗಣಿಸಿ, ಮಧು ಸೂದನನ ಹಾಡಿಕೆ ಈ ಎರಡು ಅಂಶಗಳಲ್ಲೂ ಸಮರ್ಪಕವಾಗಿತ್ತೆಂದೂ ದಕ್ಷಿಣಾದಿ ಸಂಗೀತ ಪದ್ಧತಿಯಲ್ಲಿ ಪ್ರತಿಭಾಯುಕ್ತವಾದ ಒಂದು ವಿಶಿಷ್ಟ ಪಂಥಕ್ಕೆ ಈ ಗಾಯಕ ಬುನಾದಿ ಹಾಕುವಂತೆ ಕಾಣುತ್ತಿದೆಯೆಂದೂ ಬರೆದಿದ್ದರು. ಪ್ರಾಚೀನ ಲಾಕ್ಷಣಿಕರು ಹೇಳುವ ಗುಣ ಮನೋಧರ್ಮಗಳೊಡನೆ ನೂತನ ದೃಷ್ಟಿಯೂ ಈ ತರುಣ ವಿದ್ವಾಂಸನಲ್ಲಿ ಮೇಳವಿಸಿರುವುದರಿಂದ ಈತನಿಗೆ ಭವ್ಯ ಭವಿಷ್ಯತ್ತು ಕಾದಿದೆಯೆಂಬುದರಲ್ಲಿ ಸಂದೇಹವಿಲ್ಲವೆಂದು ಹೇಳಿ ಮುಗಿಸಿದ್ದರು.

' ಕಲ್ಕಿ ' ' ದಿನಮಣಿ ' ಪತ್ರಿಕೆಗಳೆರಡೂ ಅಂದಿನ ಕಚೇರಿಯನ್ನು ಶಾಸ್ತ್ರದೃಷ್ಟಿಯಿಂದ ಪರೀಕ್ಷಿಸುವ ಗೋಜಿಗೆ ಹೋಗದೆ ಮದರಾಸಿನ ಜನತೆಯನ್ನು ಹಾಡಿಕೆ ರಂಜಿಸಿತೆಂದೂ, ಹತ್ತಿರದ ಮೈಸೂರಲ್ಲಿರುವ ಇಂಥ ಗಾಯಕನು ಪರಿಚಯ ಮದರಾಸಿಗೆ ಇಷ್ಟು ದಿವಸಗಳವರೆಗೂ ಆಗದೆ ಇದ್ದದ್ದು

ಆಶ್ಚರ್ಯವೆಂದೂ ಬರೆದಿದ್ದವು. ಇಂಥ ಕಲಾವಿದನನ್ನು ಕರೆಸಿ ಆತನ ಯೋಗ್ಯತೆ ಮದರಾಸಿನ ಸಂಗೀತಾಭಿಮಾನಿಗಳಿಗೆ ಅರಿವಾಗುವಂತೆ ಮಾಡಿದ್ದಕ್ಕಾಗಿ ರಸಿಕ ರಂಜಿನೀ ಸಭೆಯ ಕಾರ್ಯಕರ್ತರನ್ನು ಅಭಿನಂದಿಸಿದ್ದವು.

ಲಲಿತ ಪತ್ರಿಕೆಗಳನ್ನೆಲ್ಲಾ ಸಾವಧಾನವಾಗಿ ಓದಿದಳು. 'ಹಿಂದೂ' ಪತ್ರಿಕೆಯ ಲೇಖನ ಅವಳಿಗೆ ತುಂಬ ಹಿಡಿಸಿತು. ಪ್ರೆಸಿಡೆನ್ಸಿಕಾಲೇಜಿನ ಪ್ರೊ|| ಸದಾನಂದಂ ಮದರಾಸಿನಲ್ಲಿ ಹೆಸರಾದ ಕಲಾವಿಮರ್ಶಕರಲ್ಲೊಬ್ಬರಾಗಿದ್ದರು. ಅವರ ಅಭಿಪ್ರಾಯಕ್ಕೆ ವಿದ್ವನ್ಮಂಡಲಿಯಲ್ಲಿ ತುಂಬ ಬೆಲೆಯಿತ್ತು. ಅವರು ಬರೆದದ್ದನ್ನು ಕಲಾಭಿಮಾನಿಗಳು ತಪ್ಪದೆ ಓದುತ್ತಿದ್ದರು. ಅಂಥವರು 'ಹಿಂದೂ' ಪತ್ರಿಕೆಯಂಥ ಗಣ್ಯಪತ್ರಿಕೆಯೊಂದರಲ್ಲಿ ಒಂದು ಅಭಿಪ್ರಾಯ ಮುಂಡಿಸಿದ್ದಾರೆಂದ ಮೇಲೆ ಅದಕ್ಕೆ ಮಹತ್ತ್ವವಿದ್ದೇಇತ್ತು.

ಲಲಿತನ ದೃಷ್ಟಿ ಮಧುಸೂದನನ ಚಿತ್ರದ ಮೇಲೆ ಒಂದುಗಳಿಗೆ ನಿಂತಿತು. ಇಷ್ಟು ಪ್ರಶಂಸೆಗೆ ಪಾತ್ರನಾದ ಗಾಯಕನ ರೂಪ ರೇಖೆಗಳನ್ನು ಗ್ರಹಿಸುವುದಕೆ ಮನಸ್ಸು ಸಹಜವಾಗಿಯೇ ಪ್ರವರ್ತಿಸಿತು. ಪಡಿಯಚ್ಚು ಮುದ್ರಣಕಾಗದದ ಮೇಲೆ ಅಚ್ಚಾಗಿದ್ದದ್ದರಿಂದ ಅಷ್ಟು ಚೆನ್ನಾಗಿ ಮೂಡಿರಲಿಲ್ಲ. ಅಲ್ಲದೆ ಸಾಕಷ್ಟು ಕೈಯಾಡಿದ್ದರಿಂದ ಪತ್ರಿಕೆಯ ಸಂಚಿಕೆಯೂ ಮಸಕಾಗಿತ್ತು. ಆದರೆ ಗಾಯಕ ಹೇಗಿರಬಹುದೆಂಬ ಕಲ್ಪನೆಗೆ ಚಿತ್ರ ಸ್ಥೂಲವಾಗಿ ಸಹಕಾರಿಯಾಗಿತ್ತು.

ಬಿಳಿಯ ಜುಬ್ಬ ಧರಿಸಿ ಕುತ್ತಿಗೆಯಿಂದ ಶಲ್ಯ ಇಳಿಬಿಟ್ಟಿದ್ದ ಮಧುಸೂದನನ ಚಿತ್ರವನ್ನು ಲಲಿತ ಕ್ಷಣಕಾಲ ನೋಡಿದಳು. ಗುಂಡಾಗಿ ತುಂಬಿಕೊಂಡಿದ್ದ ಮುಖಕ್ಕೆ ಕಾಂತಿಯುಕ್ತವಾಗಿದ್ದ ಕಣ್ಣುಗಳು ಏನೋ ಒಂದು ವಿಶೇಷ ಲಕ್ಷಣವನ್ನು ಕೊಟ್ಟಿದ್ದವು. ಅಗಲವಾದ ಹಣೆ; ಓರಣವಾಗಿ ಬೈತಲೆ ತೆಗೆದು ಬಾಚಿದ್ದ ಕ್ರಾಪು. ನೀಟಾದ ನಾಸಿಕದ ಕೆಳಗೆ ತೆಳುಮೀಸೆಯ ಚಿಹ್ನೆ. ಚಿತ್ರ ಪರುಷತೆಗಿಂತ ಹೆಚ್ಚಾಗಿ ಮಾರ್ದವತೆಯ ಕಡೆಗೇ ವಾಲುತ್ತಿತ್ತು.

ಲೇಖನ ಓದಿ ತದೇಕಧ್ಯಾನದಿಂದ ಚಿತ್ರವನ್ನೇ ದಿಟ್ಟಿಸಿ ನೋಡುತ್ತಿದ್ದ ಅವಳಿಗೆ ಮನಸ್ಸಿನಲ್ಲಿ ಇದ್ದಕ್ಕಿದ್ದ ಹಾಗೆ ಲಜ್ಜೆಯ ಸಂಚಾರವಾಯಿತು. ಅಪರಿಚಿತ ವ್ಯಕ್ತಿಯೊಬ್ಬನ ಚಿತ್ರವನ್ನು ಪತ್ರಿಕೆಯಲ್ಲಿ ತಾನು ಹೀಗೆ ಗಮನವಿಟ್ಟು ನೋಡುತ್ತಿರುವುದನ್ನು ಅರಿತು ಅವಳಿಗೇ ಅಚ್ಚರಿಯಾಯಿತು. ತನ್ನನ್ನೇ ದಿಟ್ಟಿಸಿ

ನೋಡುವಂತಿದ್ದ ಚಿತ್ರಸ್ಥ ಮೂರ್ತಿಯು ಕಣ್ಣಿಗೆ ಕಣ್ಣು ಜೋಡಿಸಿದ ಅವಳ ಮೈಯಲ್ಲಿ ಸಣ್ಣ ಪುಲಕವೆದ್ದಿತು.

ನೂತನ ಭಾವನೆಯೊಂದರ ಅನುಭವಾಂಕುರವಾಗಿತ್ತಿರಲು ಲಲಿತ ಪತ್ರಿಕೆ ಮುಚ್ಚಿ ಮೇಜಿನ ಒಳಗಿಟ್ಟು ಎದ್ದು ಹೋದಳು.

ತಂದೆಯ ಕಾಗದಕ್ಕೆ ಏನು ಉತ್ತರ ಬರೆಯಬೇಕೋ ಹೊಳೆಯಲಿಲ್ಲ. ಎರಡು ದಿನ ಬಿಟ್ಟು ಕೇವಲ ಯೋಗಕ್ಷೇಮಕ್ಕೆ ಮಾತ್ರ ಎರಡು ಪಂಕ್ತಿ ಕಾಗದ ಬರೆದು ಹಾಕಿದಳು.

ನಾಟ್ಯಾಭ್ಯಾಸ ಮುಗಿಯುತ್ತ ಬಂದ ಹಾಗೆಲ್ಲಾ ಲಲಿತನಿಗೆ ಊರಿಗೆ ಹೋಗುವ ಆಸೆ ಹೆಚ್ಚಾಯಿತು. ತಂದೆ ತಾಯಿಗಳನ್ನು ಅವಳು ಯಾವಾಗಲೂ ಒಂದು ವರ್ಷ ಅಗಲಿದ್ದೇ ಇಲ್ಲ. ಅಭ್ಯಾಸದ ಮಧ್ಯೆ ವಿರಾಮ ಪಡೆದು ಮದ್ರಾಸಿಗೆ ಹೋಗಿ ಬರುವುದಕ್ಕೆ ಅವಕಾಶವಿರಲಿಲ್ಲ. ನಾಟ್ಯಾಭ್ಯಾಸದ ದಿನಚರಿ ಕಠಿನವಾಗಿ ಶಿಸ್ತಿನಿಂದ ಕೂಡಿತ್ತು. ನಿಯಮಗಳನ್ನು ಪಾಲಿಸದಿದ್ದರೆ ಗುರುಗಳಿಗೆ ತುಂಬ ಅಸಮಾಧಾನವಾಗುತ್ತಿತ್ತು. ಅವರ ಮನಸ್ಸಿಗೆ ಬೇಸರವುಂಟು ಮಾಡಿದ ವಿದ್ಯಾರ್ಥಿಗಳು ಅವರ ಅಭಿಮಾನದಿಂದ ದೂರವಾಗುತ್ತಿದ್ದರು. ಲಲಿತ ಇಂಥ ಒಂದೆರಡು ನಿದರ್ಶನಗಳನ್ನು ನೋಡಿ ಎಚ್ಚೆತ್ತಿದ್ದಳು.

ಲಲಿತ ಊರಿಗೆ ಹೊರಡುವ ದಿನ ಸಮೀಪವಾಗುತ್ತಿತ್ತು. ವಿಶ್ವನಾಥನ್ನರಿಂದ ಪಿಳ್ಳೆಯವರಿಗೆ ಕಾಗದ ಬಂದಿತ್ತು. ಒಬ್ಬ ಶಿಷ್ಯೆ ತಮ್ಮ ಸಂಪ್ರದಾಯ ಕೀರ್ತಿಗಳನ್ನು ಪಾಲಿಸಲು ಜೀವ ಮುಡಿಪಾಗಿಟ್ಟಿರುವಳೆಂಬ ಭಾವನೆ ಪಿಳ್ಳೆಯವರಿಗೆ ಹೆಮ್ಮೆಯುಂಟುಮಾಡಿತ್ತು. ಆದರೆ ಒಂದು ವರ್ಷಕಾಲ ಮಗಳಿಗಿಂತ ಹೆಚ್ಚಾದ ಮಮತೆಯಿಂದ ತಾವು ಪಾಠ ಹೇಳಿದ ಮಗು ಹೊರಟು ಹೋಗುವುದು ಅವರಿಗೆ ಅಷ್ಟೇ ವಿಷಾದವನ್ನೂ ಉಂಟುಮಾಡಿತ್ತು. ಹೆರವರ ಮಗು ಎಷ್ಟುದಿನ ತಮ್ಮದಾಗಿದ್ದೀತೆಂದು ತಾವೇ ಸಮಾಧಾನಮಾಡಿಕೊಳ್ಳಲೆತ್ನಿಸಿದರು.

ಒಂದುದಿನ ಶಿಷ್ಯವರ್ಗದ ನಾಟ್ಯಾಭ್ಯಾಸವೆಲ್ಲಾ ಮುಗಿದು ಎಲ್ಲರೂ ಹೊರಟುಹೋದ ಮೇಲೆ ಪಿಳ್ಳೆಯವರು ಲಲಿತನನ್ನು ಹತ್ತಿರ ಕರೆದು ಕೂಡಿಸಿಕೊಂಡರು.

"ವಿಶ್ವನಾಥನ್ ಕಾಗದ ಬರೆದಿದ್ದಾರೆ."

" ಹೌದು ತಂದೆಯವರಿಂದ ನನಗೂ ಕಾಗದ ಬಂದಿದೆ."

" ಯಾವಾಗ ಹೊರಡಬೇಕೆಂದು ಮಾಡಿದ್ದೀ ?"

" ತಾವು ಅಪ್ಪಣೆ ಕೊಟ್ಟಾಗ."

" ನಿನ್ನ ಶಿಕ್ಷಣವೆಲ್ಲಾ ಮುಗಿದಿದೆ. ಸಾಂಪ್ರದಾಯಕವಾಗಿ ಹೇಳಿಕೊಡಬೇಕಾದದ್ದನ್ನೆಲ್ಲಾ ನಿನಗೆ ನಿರ್ವಂಚನೆಯಿಂದ ಹೇಳಿಕೊಟ್ಟಿದ್ದೇನೆ. ನೀನೂ ಅಕ್ಕರೆಯಿಂದ ಕಲಿತುಕೊಂಡಿದ್ದೀ ಕಲೆಯಲ್ಲಿ ಪೂರ್ಣ ಪಾರಂಗತರಾದೆವೆಂದು ಯಾರೂ ಭಾವಿಸಬಾರದು. ಕಲಿತಷ್ಟೂ ಕಲಿಯತಕ್ಕದ್ದು ಇದ್ದೇ ಇರುತ್ತದೆ. ನಾಟ್ಯಶಾಸ್ತ್ರ ಒಂದು ದೊಡ್ಡ ವಜ್ರದ ಗಣಿ. ಅದರಲ್ಲಿ ತೋಡಿದಷ್ಟೂ ಅನರ್ಘ್ಯ ವಜ್ರಗಳು ಸಿಕ್ಕುತ್ತಲೇ ಇರುತ್ತವೆ.

" ಗುರುಮುಖೇನ ಕಲಿಯುವ ವಿದ್ಯೆ ಒಂದು ದಿಕ್ಸೂಚಿ ಮಾತ್ರ. ಕಲಾವಿದ ತನ್ನ ಸ್ವಂತ ಪ್ರತಿಭಾ ಸಾಮರ್ಥ್ಯದಿಂದ ರೂಢಿಸಿಕೊಳ್ಳಬೇಕಾದದ್ದು ಅಪಾರವಾಗಿರುತ್ತದೆ. ಧ್ಯಾನಶೀಲನಾದ ಕಲಾವಿದನಿಗೆ ಹೊಸಹೊಸ ಭಾವಗಳು ಮಿಂಚುತ್ತಲೇ ಇರುತ್ತವೆ; ಹೊಸ ಹೊಸ ನಾಟ್ಯ ಸಂಕೇತಗಳು ಸ್ಫುರಿಸುತ್ತಲೇ ಇರುತ್ತವೆ. ನಿಷ್ಠೆಯಿಂದಲೂ, ಶ್ರದ್ಧೆಯಿಂದಲೂ ಅವುಗಳನ್ನು ರೂಢಿಸಿಕೊಂಡು ಅವನು ತಾನು ಕಲಿತ ವಿದ್ಯೆಗೆ ಒಂದು ನಯವನ್ನು ತಂದುಕೊಳ್ಳಬೇಕು; ಅದರ ಸಿದ್ಧಿಗೆ ಬಾಳನ್ನು ವಿನಿಯೋಗಿಸಲಾಗಿಡಬೇಕು.

" ಕಲೆ ಮಾರುವ ವಸ್ತುವಲ್ಲ. ಹಣದ ದೃಷ್ಟಿಯಿಂದ ಯಾರೂ ಅದಕ್ಕೆ ಬೆಲೆ ಕಟ್ಟಬಾರದು. ನೀನು ನನ್ನ ಬಳಿ ಅಭ್ಯಸಿಸಿದ ವಿದ್ಯೆಗೆ ಈ ಮಾತನ್ನು ಅನ್ವಯಿಸಿಕೊಂಡು ಭರತನಾಟ್ಯವನ್ನು ಅದರ ಶುದ್ಧ ಸಂಪ್ರದಾಯದಲ್ಲಿ ಎತ್ತಿ ಹಿಡಿಯಲು ಪ್ರಯತ್ನಿಸು. ಅದೇ ನನಗೆ ನೀನು ಕೊಡುವ ಗುರುದಕ್ಷಿಣೆ. ಅದಕ್ಕಿಂತ ಬೇರೆಯಾದ ಯಾವುದನ್ನೂ ನಾನು ಅಪೇಕ್ಷಿಸುವುದಿಲ್ಲ."

ಲಲಿತ ಮಾತಾಡಲಿಲ್ಲ. ಗುರುಗಳಾಡುತ್ತಿದ್ದ ಒಂದೊಂದು ಮಾತೂ ವಿಶೇಷವಾದ ಅರ್ಥ ಸಂಕೇತಗಳನ್ನು ಧರಿಸಿ ಅವಳ ಮನಸ್ಸಿನ ಆಳಕ್ಕೆ ಇಳಿಯುತ್ತಿತ್ತು. ಆಪ್ತವಾದ ಅವರ ಹಿತನುಡಿ ಅವಳ ಕಣ್ಣಲ್ಲಿ ನೀರು ತಂದಿತ್ತು. ಅದನ್ನು ನೋಡಿ ಅವರ ಅಂತಃಕರಣವೂ ಕರಗಿತು. ಹೊಟ್ಟೆಯಲ್ಲಿ ಹುಟ್ಟಿದ ಮಗಳ ತಲೆ ನೇವರಿಸುವಂತೆ ನೇವರಿಸಿ ಸಮಾಧಾನಪಡಿಸಿದರು.

ಪಂದನಲ್ಲೂರು ಪಿಳ್ಳೆಯವರ ಹತ್ತಿರ ಲಲಿತನ ನಾಟ್ಯಾಭ್ಯಾಸ ಆರಂಭ

ಮಾಡಿಸಿದಾಗ ಏನು ಸಂಭಾವನೆ ಕೊಡಬೇಕೆಂದು ಯಾರೂ ಮಾತಾಡಿರಲಿಲ್ಲ. ಶಿಕ್ಷಣ ಮುಗಿದ ಬಳಿಕ ನಟರಾಜ ಅಯ್ಯರರು ಸ್ವಾಮಿನಾಥನ್ನರೊಡನೆ ಆಲೋಚಿಸಿ ಒಂದು ಸಾವಿರ ರೂಪಾಯಿ ನಗದು ಹಣವನ್ನೂ ಧೋತ್ರ ಶಲ್ಯ ಗಳನ್ನೂ ಗುರುದಕ್ಷಿಣೆಯಾಗಿ ಮಗಳ ಕೈಲಿ ಕೊಡಿಸಬೇಕೆಂದು ತೀರ್ಮಾನಿ ಸಿದರು. ನಟರಾಜ ಅಯ್ಯರರು ವಿಶ್ವನಾಥನ್ನರ ಹೆಸರಿಗೆ ಒಂದು ಸಾವಿರ ರೂಪಾಯಿ ರವಾನಿಸಿದರು. ಪಿಳ್ಳೆಯವರ ಗೌರವಕ್ಕೆ ತಕ್ಕ ಧೋತ್ರ ಶಲ್ಯಗಳನ್ನು ತಂಜಾವೂರಿನಲ್ಲೇ ಕೊಳ್ಳಲೂ ಹಣ ಕಳಿಸಿದರು. ವಿಶ್ವನಾಥನ್ನರು ಉಡುಗೊರೆ ಯೊಡನೆ ಸಜ್ಜಾಗಿ ಒಂದು ಬೆಳಗ್ಗೆ ತಮ್ಮ ಜೀಪಿನಲ್ಲಿ ಬಂದು ಪಂದನಲ್ಲೂರಿ ನಲ್ಲಿಳಿದರು.

ಲಲಿತನ ಕೈಯಲ್ಲಿ ಗುರುದಕ್ಷಿಣೆಯನ್ನು ಗುರುಗಳಿಗೆ ಒಪ್ಪಿಸುವ ಏರ್ಪಾ ಡಾಗಿತ್ತು. ಅವಳು ಮರುದಿನವೇ ಪಾಟಿಯೊಡನೆ ಹೊರಡಲು ಸಜ್ಜಾಗಿದ್ದಳು.

ಊಟವಾದ ಮೇಲೆ ಪಿಳ್ಳೆಯವರೊಡನೆ ವಿಶ್ವನಾಥನ್ ಮಾತಾಡುತ್ತ ಕುಳಿತಿದ್ದಾಗ, ಲಲಿತ ಬೆಳ್ಳಿಯ ತಟ್ಟೆಯಲ್ಲಿ ಧೋತ್ರ, ಶಲ್ಯ, ಸಂಭಾವನೆಯ ಹಣವಿಟ್ಟುಕೊಂಡು ಅವರಿದ್ದೆಡೆಗೆ ಬಂದಳು. ತಟ್ಟೆಗೆ ಕಸೂತಿ ಕೆಲಸ ಮಾಡಿದ ಒಂದು ವಸ್ತ್ರ ಹೊದಿಸಿತ್ತು. ಲಲಿತ ತಟ್ಟೆಯನ್ನು ಗುರುಗಳ ಮುಂದಿಟ್ಟು ಬಗ್ಗಿ, ಅವರ ಕಾಲು ಮುಟ್ಟಿ ನಮಸ್ಕರಿಸಿದಳು. ವಿಶ್ವನಾಥನ್ ಉಪಚಾರಾರ್ಥವಾಗಿ,

"ಸ್ವೀಕರಿಸಬೇಕು"

ಎಂದರು. ಪಿಳ್ಳೆಯವರು ತಟ್ಟೆಯ ಮೇಲಿನ ಹೊದಿಕೆ ತೆಗೆದು ನೋಡಿದರು. ಉಡುಗೊರೆಯ ವಸ್ತುಗಳು ಕಣ್ಣಿಗೆ ಬಿದ್ದು ಅವರ ಮನಸ್ಸಿಗೆ ಕಸಿವಿಸಿಯಾಯಿತು. ಅವರು ಹುಬ್ಬು ಗಂಟುಹಾಕಿಕೊಂಡದ್ದನ್ನು ವಿಶ್ವನಾಥನ್ ಗಮನಿಸದಿರಲಿಲ್ಲ.

"ಇಷ್ಟೇ ಸಾಕೆ? ಇಷ್ಟರಲ್ಲೇ ಮುಗಿಸಿಬಿಡಬೇಕೆಂದುಕೊಂಡಿದ್ದೀರಾ?"

ಪಿಳ್ಳೆಯವರ ಧ್ವನಿ ಸಹಜವಾದ ಮಾರ್ದವತೆಯನ್ನು ಕಳೆದುಕೊಂಡು ಗಡುಸಾಗಿತ್ತು. ಅವರ ಮನೋಗತವನ್ನು ವಿಶ್ವನಾಥನ್ ಗ್ರಹಿಸದೆ,

"ಏನೋ ಅಲ್ಪ. ದೊಡ್ಡ ಮನಸ್ಸುಮಾಡಿ ತೆಗೆದುಕೊಳ್ಳಬೇಕು."

"ನನ್ನ ಉದ್ದೇಶವನ್ನು ತಪ್ಪಾಗಿ ತಿಳಿದುಕೊಳ್ಳುತ್ತಿದ್ದೀರಿ. ಈ ಉಡು ಗೊರೆ ಸಾಲದೆಂದು ನಾನು ಹೇಳುತ್ತಿಲ್ಲ; ಇದು ಬೇಡವೆಂದು ಹೇಳುತ್ತಿದ್ದೇನೆ"

ವಿಶ್ವನಾಥ್ ಅಚ್ಚರಿಯಿಂದ ದೊಡ್ಡದಾಗಿ ಕಣ್ಣು ಬಿಟ್ಟರು. ವ್ಯವಹಾರ ಜೀವಿಯಾದ ಅವರಿಗೆ ಇದೊಂದು ಹೊಸ ಸಮಸ್ಯೆಯಾಗಿ ಕಂಡಿತು. ಏನೂ ತೋರದೆ ಅವರು ಲಲಿತನ ಮುಖ ನೋಡಿದರು. ಪಿಳ್ಳೆಯವರು ಲಲಿತನ ಕಡೆ ತಿರುಗಿ,

" ಮಗೂ, ಇದು ನನಗೆ ಬೇಡಮ್ಮಾ."

" ತಾವು ತೆಗೆದುಕೊಳ್ಳದಿದ್ದರೆ ನನಗೆ ತುಂಬ ದುಃಖವಾಗುತ್ತದೆ."

ಮಾತಿನ ಹಿಂದೆಯೇ ಕಂಬನಿಯೂ ಸಿದ್ಧವಾಗಿತ್ತು. ಗುರುಗಳು ಅದಕ್ಕೆ ಸೋಲದೆ ಬೇರೆ ಮಾರ್ಗವಿರಲಿಲ್ಲ.

೧೯

ಶಿವಸ್ವಾಮಿಗೆ ಲಗ್ನ ಕೂಡಿಬಂದಿತ್ತೆಂಬುದು ಒಂದು ತಿಂಗಳ ಹಿಂದೆ ಕೂಡ ಯಾರಿಗೂ ಗೊತ್ತಿರಲಿಲ್ಲ. ಸ್ವಾಮಿನಾಥನ್ನರ ಒತ್ತಾಯವಿಲ್ಲದಿದ್ದರೆ ಮದುವೆ ಇಷ್ಟು ಬೇಗ ನೆಗಳುತ್ತಲೂ ಇರಲಿಲ್ಲ. ಕೊಯಮುತ್ತೂರು ಜಮೀನ್ದಾರ್ ಸುಂದರಂ ಅಯ್ಯರರಿಗೆ ಮದುವೆಗೆ ನೆರೆದಿರುವ ಮಗಳಿದ್ದಾಳೆಂದು ಸ್ವಾಮಿನಾಥನ್ ಹೇಳಿ, ಹುಡುಗಿಯನ್ನು ಶಿವಸ್ವಾಮಿಗೆ ತಂದುಕೊಳ್ಳಬೇಕೆಂದು ಕೇಳಿದಾಗ ನಟರಾಜ ಅಯ್ಯರರು ಅದನ್ನು ವಿನೋದವೆಂದು ಭಾವಿಸಿ ನಕ್ಕುಬಿಟ್ಟಿದ್ದರು. ಇಂಗ್ಲೆಂಡಿನಲ್ಲಿ ಶಿವಸ್ವಾಮಿಸ್ವಾಮಿಯ ವ್ಯಾಸಂಗ ಇನ್ನೂ ಮುಗಿದಿರಲಿಲ್ಲ. ಅದಾದ ತ್ಕರುವಾಯ ಅವನು ಇನ್ನೂ ಒಂದೆರಡು ವರ್ಷ ಅಲ್ಲೇ ಇದ್ದು ಸಂಶೋಧನೆ ನಡಸಬೇಕೆಂದಿದ್ದ. ಅದಕ್ಕೆ ಅಯ್ಯರರ ಒಪ್ಪಿಗೆಯೂ ದೊರೆತಿತ್ತು. ಅದಕ್ಕೆ ಮುಂಚೆ ಮದುವೆಯ ಯೋಚನೆ ಯಾರಿಗೂ ಇರಲಿಲ್ಲ.

ಆದರೆ ಸುಂದರಂ ಅಯ್ಯರರ ವರಾತ ತಡೆಯಲಾರದೆ ಸ್ವಾಮಿನಾಥನ್ ನಟರಾಜ ಅಯ್ಯರರನ್ನು ಪೀಡಿಸುತ್ತಿದ್ದರು. ಅವರ ಕಾಟ ತಪ್ಪಿಸಿಕೊಳ್ಳಲು ಅಯ್ಯರರು ಏನಾದರೂ ಉಪಾಯ ಹುಡುಕಲೇಬೇಕಾಗಿತ್ತು. ನಿರಾಕರಿಸಿ ಗೆಳೆಯನ ಮನನೋಯಿಸುವುದು ಅವರಿಗೆ ಇಷ್ಟವಿರಲಿಲ್ಲ. ಆದ್ದರಿಂದ ವಿಷಯವನ್ನು ತಮ್ಮ ಮನಸ್ಸಿನಲ್ಲೇ ಬೇಕಾದಷ್ಟು ಮಥನಮಾಡಿ ಕೊನೆಗೆ ಹುಡುಗ ಒಪ್ಪಿದರೆ ತಮ್ಮ ಅಭ್ಯಂತರವೇನೂ ಇಲ್ಲವೆಂದುಬಿಟ್ಟರು. ಹುಡುಗನಿಗೆ ಹುಡುಗಿಯ ಫೋಟೋ ಕಳಿಸಿದ್ದಾಯಿತು. ಹೆಣ್ಣಿನ ಕಡೆಯವರಿಗೆ ಹುಡುಗನ

ಫೋಟೋ ಹೋಯಿತು. ನಟರಾಜ ಅಯ್ಯರರು ಹುಡುಗಿಯ ಫೋಟೋ ಕಳಿಸುತ್ತ ಮಗನಿಗೆ ಬರೆದ ಕಾಗದದಲ್ಲಿ ಮದುವೆಯ ವಿಚಾರ ಸೂಕ್ಷ್ಮವಾಗಿ ಪ್ರಸ್ತಾಪಿಸಿ ಅವನ ಅಭಿಪ್ರಾಯ, ಅನುಕೂಲ ಎರಡನ್ನೂ ತಿಳಿಸುವಂತೆ ಕೇಳಿದ್ದರು. ಮಗ ಒಪ್ಪದಿರುವುದಕ್ಕೆ ಯಾವುದಾದರೂ ಒಂದು ನೆವ ಸಿಕ್ಕಿದರೆ ತಪ್ಪನ್ನು ಅವನ ಮೇಲೆ ಹಾಕಿ ತಾವು ಪಾರಾಗಬಹುದೆಂದು ಅವರು ಎಣಿಸಿದ್ದರು.

ಆದರೆ ಶಿವಸ್ವಾಮಿಯಿಂದ ಬಂದ ಉತ್ತರ ಅವರ ನಿರೀಕ್ಷೆಗೆ ಪ್ರತಿಯಾಗಿತ್ತು. ತನಗೆ ಎರಡು ತಿಂಗಳ ವಿರಾಮವಿರುವುದೆಂದೂ ಬಂದು ಹೋಗುವುದಕ್ಕೆ ಅಡ್ಡಿಯಿಲ್ಲವೆಂದೂ ಬರೆದಿದ್ದ. ಫೋಟೋ ಮನಸ್ಸಿಗೆ ಒಪ್ಪಿಗೆಯಾದರೂ ಎದುರಿಗೇ ನೋಡಿ ನಿಶ್ಚಯಿಸುವುದು ಲೇಸೆಂದೂ ಜೊತೆಗೆ ಒಗ್ಗರಣೆ ಹಾಕಿದ್ದ.

ಸ್ವಾಮಿನಾಥನ್ ಅದನ್ನೇ ಭದ್ರವಾಗಿ ಹಿಡಿದುಕೊಂಡು ಕುಳಿತುಬಿಟ್ಟರು.

ನಟರಾಜ ಅಯ್ಯರರು ಹುಡುಗಿಯನ್ನು ಒಪ್ಪದಿರುವುದಕ್ಕೆ ಬೇರೆ ಯಾವ ಕಾರಣವೂ ಇರಲಿಲ್ಲ. ಮಗನ ಮದುವೆಯ ವಿಚಾರವನ್ನೇ ಅವರು ಯೋಚಿಸಿರಲಿಲ್ಲವಾದ್ದರಿಂದ ಅವರ ಮನಸ್ಸು ಅದನ್ನು ಇಷ್ಟು ಬೇಗ ಒಪ್ಪಿಕೊಳ್ಳುವುದಕ್ಕೆ ಸಿದ್ಧವಾಗಿರಲಿಲ್ಲ. ಕೊಯಮುತ್ತೂರಿನ ಸಂಬಂಧವೂ ಕಳಪೆಯಾಗಿರಲಿಲ್ಲ. ನಟರಾಜ ಅಯ್ಯರರು ಸಿವಿಲ್‌ಸರ್ವಿಸ್ಸಿನ ದರ್ಪವನ್ನು ಕಂಡು ಪ್ರತಿಷ್ಠಿತ ವ್ಯಕ್ತಿಯೆನ್ನಿಸಿಕೊಂಡಿದ್ದರೆ, ಸುಂದರಂ ಅಯ್ಯರ್ ತಮ್ಮ ಜಿಲ್ಲೆಗೇ ಭಾರಿ ಕುಳವಾಗಿದ್ದರು. ತಲೆತಲಾಂತರ ಲೂಟಿ ಹೊಡೆದರೂ ಕರಗದಿದ್ದಷ್ಟು ಸ್ವತ್ತಿನಿಂದ ಕೂಡಿ ಅವರು ಆಢ್ಯರಾಗಿದ್ದರು. ಜೊತೆಗೆ ಯೋಗ್ಯ ಮನೆತನ. ಮಗಳೂ ಓದಿದ್ದ ಹುಡುಗಿ. ಕನಕಾಂಗಿ ಕಣ್ಣನ್ನು ಕೋರೈಸುವ ಹುಡುಗಿಯಲ್ಲವಾದರೂ ಚೆಲುವೆಯೆನ್ನಿಸಿಕೊಳ್ಳಲು ಯಾವ ಅಭ್ಯಂತರವೂ ಇರಲಿಲ್ಲ.

ಸುಂದರಂ ಅಯ್ಯರರ ಪ್ರಾರ್ಥನೆಗೂ ಸ್ವಾಮಿನಾಥನ್ನರ ಒತ್ತಾಯಕ್ಕೂ ಕಟ್ಟು ಬೀಳದೆ ತಪ್ಪಿಸಿಕೊಳ್ಳುವ ಹಾಗಿರಲಿಲ್ಲ.

ಎರಡು ತಿಂಗಳ ವಿರಾಮವಿರುವಾಗ ಬರಿಯ ಪ್ರಯಾಣದಲ್ಲಿಯೇ ಕಾಲ ವೃಥಾ ವ್ಯಯವಾಗಬಾರದೆಂದು ಶಿವಸ್ವಾಮಿ ವಿಮಾನದಲ್ಲಿ ಬರುವ ಏರ್ಪಾಡಾಗಿತ್ತು. ವ್ಯವಹಾರ ನಿಪುಣ ಸ್ವಾಮಿನಾಥನ್ ಶಿವಸ್ವಾಮಿ ಮದರಾಸ್ ಸೇರುವ ಹೊತ್ತಿಗೆ ಕೊಯಮುತ್ತೂರಿನಿಂದ ಹುಡುಗಿಯನ್ನೂ ಕರೆಸಿಬಿಟ್ಟಿದ್ದರು. ಒಬ್ಬರನ್ನೊಬ್ಬರು ನೋಡಿ ಪರಸ್ಪರ ಒಪ್ಪುವುದನ್ನೇ ಕಾಯುತ್ತಿದ್ದ ಸ್ವಾಮಿ

ನಾಥನ್ ಕಾರ್ತೀಕ ಮಾಸದಲ್ಲಿ ಒಂದು ಲಗ್ನವನ್ನು ಕುದುರಿಸಿಯೇ ಬಿಟ್ಟರು. ಅವರ ತರಾತುರಿ ನೋಡಿ ನಟರಾಜ ಅಯ್ಯರರಿಗೆ ನಗು ಬರುತ್ತಿತ್ತು.

" ನೀವೇ ಬೀಗರಾಗುವ ಹಾಗೆ ಧಾವಂತಪಡುತ್ತಿದ್ದೀರಲ್ಲಪ್ಪಾ "

ಎಂದು ಹಾಸ್ಯ ಮಾಡುತ್ತಿದ್ದರು. ಆದರೆ ಬೀಗತನದ ಲಭ್ಯವಿಲ್ಲದ ಸ್ವಾಮಿನಾಥನ್, ಹೆರವರ ಸಂಭ್ರಮದಲ್ಲಿ ಭಾಗಿಯಾಗಲು ಹಿಂತೆಗೆಯುತ್ತಿರಲಿಲ್ಲ.

ಕಾರ್ತೀಕ ಶುದ್ಧ ಸಪ್ತಮಿ ಲಗ್ನವೆಂದು ಗೊತ್ತಾಯಿತು. ಕೇವಲ ಹದಿನೈದು ದಿನದ ಅವಕಾಶದಲ್ಲಿ ಎಲ್ಲವನ್ನೂ ಅಣಿಮಾಡಿಕೊಂಡು ಕೊಯಮತ್ತೂರಿಗೆ ಹೊರಡಬೇಕಾಗಿತ್ತು. ಹಣವಿದ್ದ ಕಡೆ ಯಾವುದಕ್ಕೂ ಕೊರತೆಯಿರಲಿಲ್ಲ. ಆಳುಕಾಳುಗಳ ಸಹಾಯದಿಂದ ಅಗತ್ಯವಾದ ಸಾಮಗ್ರಿಗಳನ್ನು ಒದಗಿಸಿಕೊಳ್ಳುವುದೂ ಕಷ್ಟವಾಗಲಿಲ್ಲ.

ನಟರಾಜ ಅಯ್ಯರರನ್ನು ಸೂತ್ರದ ಬೊಂಬೆಯನ್ನಾಗಿ ಮಾಡಿ ಸ್ವಾಮಿನಾಥನ್ ವಿವಾಹದ ಸಮಸ್ತ ಏರ್ಪಾಡುಗಳ ಕಾರ್ಯಭಾರವನ್ನೂ ತಾವೇ ಹೊತ್ತು ನಿರ್ವಹಿಸತೊಡಗಿದರು. ಉಪಯುಕ್ತ ಸಲಹೆ ಸೂಚನೆಗಳಿಗಂತೂ ಮುತ್ತುಸ್ವಾಮಿ, ಕೇಶವಪ್ಪೈಗಳಂಥ ಆಪ್ತ ಮಿತ್ರರು ಇದ್ದೇ ಇದ್ದರು.

ಮದುವೆಯ ಕಾಲದಲ್ಲಿ ಬೀಗರ ಗಣ್ಯತೆಗೆ ತಕ್ಕಹಾಗೆ ಸಂಗೀತ ನೃತ್ಯಗಳ ಕಾರ್ಯಕ್ರಮವಿಟ್ಟುಕೊಳ್ಳುವುದು ಅಗತ್ಯವಾಗಿತ್ತು. ಈ ಕೆಲಸವೂ ಹದಿನೈದು ದಿವಸ ಮುಂಚಿತವಾಗಿಯೇ ಆಗಬೇಕಾಗಿತ್ತು. ವಿವಾಹದ ಪೂರ್ವ ಸಿದ್ಧತೆಗಾಗಿ ಮದರಾಸಿಗೆ ಬಂದಿದ್ದ ಸುಂದರಂ ಅಯ್ಯರ್ ಈ ವಿಷಯದಲ್ಲಿ ನಟರಾಜ ಅಯ್ಯರರ ಅಭಿಪ್ರಾಯ ಕೇಳಿದರು.

" ಸ್ವಾಮಿನಾಥನ್, ಕೇಶವಪ್ಪೈಗಳ ಜೊತೆಗೂಡಿ ಯೋಚಿಸೋಣ "

ಎಂದು ನಟರಾಜ ಅಯ್ಯರ್ ಉತ್ತರವಿತ್ತರು.

ನಾಲ್ವರೂ ಕಲೆತಾಗ ಒಬ್ಬೊಬ್ಬರ ಸಲಹೆ ಒಂದೊಂದಾಯಿತು.

ಕೊನೆಗೆ, ಮೊದಲನೆಯ ದಿನ ಸುಬ್ಬಲಕ್ಷ್ಮಿಯ ಸಂಗೀತ ಇಡಿಸಬೇಕೆಂದೂ ಕೊನೆಯ ದಿನ ಮೈಸೂರು ಮಧುಸೂದನರ ಕಚೇರಿ ಇಡಿಸಬೇಕೆಂದೂ ಮಧ್ಯೆ ಒಂದು ದಿನ ಲಲಿತನ ಭರತನಾಟ್ಯ ಏರ್ಪಡಿಸಬಹುದೆಂದೂ ತೀರ್ಮಾನವಾಯಿತು. ಮಧುಸೂದನನ್ನು ಕರೆಸಬೇಕೆಂದು ಸಲಹೆ ಮಾಡಿದವರು ನಟರಾಜ ಅಯ್ಯರರು. ಲಲಿತನ ಭರತನಾಟ್ಯ ಪ್ರದರ್ಶನಕ್ಕೆ ಅವರು ವಿರೋಧವಾಗಿರ

ದಿದ್ದರೂ ಸುಲಭಕ್ಕೆ ಒಪ್ಪಲಿಲ್ಲ. ಬೀಗರ ಒತ್ತಾಯಕ್ಕೆ ಒಪ್ಪಬೇಕಾಯಿತು. ಸುಬ್ಬಲಕ್ಷ್ಮಿಯನ್ನು ಕರೆಸುವ ವಿಚಾರದಲ್ಲಿ ಎಲ್ಲರ ಅಭಿಪ್ರಾಯವೂ ಒಂದೇ ಆಗಿತ್ತು.

ಬೇಕಾದ ಬಂಧು ಮಿತ್ರರಿಗೆಲ್ಲಾ ಸಕಾಲದಲ್ಲಿ ಲಗ್ನಪತ್ರಿಕೆಗಳು ಹೋದವು.

ವರಪೂಜೆಯ ದಿನ ಸಂಜೆ ನಾಲ್ಕು ಕಾರುಗಳಲ್ಲಿ ಕೊಯಮುತ್ತೂರಿಗೆ ಬಂದಿಳಿದ ಬೀಗರನ್ನು ಸುಂದರಂ ಅಯ್ಯರ್ ತಮ್ಮ 'ಕಮಲಕುಟೀರ' ನಿವಾಸದ ಪಕ್ಕದ ಬಂಗಲೆಯಲ್ಲಿ ಇಳಿಸಿದರು. ಗಂಡಿನ ಕಡೆ ಹುಡುಗನ ತಂದೆ, ತಾಯಿ, ತಂಗಿ ಬಂದಿದ್ದರು. ಅನಾರೋಗ್ಯ ನಿಮಿತ್ತ ಮುತ್ತುಸ್ವಾಮಿ ಬಂದಿರಲಿಲ್ಲಾ ಸ್ವಾಮಿನಾಥನ್, ಕೇಶವಪ್ಪೈ ಸಪತ್ನೀಕರಾಗಿ ಇಳಿದಿದ್ದರು. ಜೊತೆಗೆ ಇಬ್ಬರು ಪರಿಚಾರಕರು, ಇಬ್ಬರು ಆಳುಗಳಿದ್ದರು. ತಂಜಾವೂರಿನಿಂದ ವಿಶೇಷಾಹ್ವಾನದ ಮೇಲೆ ವಿಶ್ವನಾಥನ್ ಬಂದಿದ್ದರು. ಪಂದನಲ್ಲೂರಿಗೂ ಆಹ್ವಾನ ಹೋಗಿತ್ತು. ಆದರೆ ಪಿಳ್ಳೆಯವರು ಬರಲವಕಾಶವಾಗಲಿಲ್ಲ.

ಮಧುಸೂದನನನ್ನು ಕರೆತರಲು ಮೈಸೂರಿಗೆ ಸುಂದರಂ ಅಯ್ಯರರ ಸ್ವಂತ ಕಾರೇ ಹೋಗಿತ್ತು. ಕಾರು ಕೊಳ್ಳೇಗಾಲದ ಮೇಲೆ ಬಂದು ಲಗ್ನದ ದಿನ ಬೆಳಗ್ಗೆ ಕೊಯಮುತ್ತೂರು ತಲಪಿತು. ಮಧುಸೂದನ ನಟರಾಜ ಅಯ್ಯರರ ಬಿಡಾರದ ಮುಂದೆಯೇ ಇಳಿದ. ಬೀಗರಿಬ್ಬರೂ ಅವನನ್ನು ಸ್ವಾಗತಿಸಿ ಒಳಗೆ ಕರೆದೊಯ್ದರು.

ಸ್ವಾಮಿನಾಥನ್, ಕೇಶವಪ್ಪೈಗಳ ಪರಿಚಯ ಮಧುಸೂದನನಿಗೆ ಮದರಾಸಿನಲ್ಲೇ ಆಗಿತ್ತು. ಶಿವಸ್ವಾಮಿಯನ್ನು ನೋಡುತ್ತಿರುವುದು ಇದೇ ಮೊದಲು. ಚಿತ್ರದ ಮೂಲಕ ಲಲಿತನ ಸ್ಥೂಲಪರಿಚಯವಾಗಿತ್ತು.

ಕಾರು ಕಾಂಪೌಂಡಿನೊಳಗೆ ಬಂದು ನಿಂತಾಗಲೇ ರೂಮಿನ ಕಿಟಕಿಯಿಂದ ನೋಡಿ ಹೊರಗೆ ಬಂದಿದ್ದ ಲಲಿತನನ್ನು ನಟರಾಜ ಅಯ್ಯರರು ಹತ್ತಿರ ಕರೆದು ಮಧುಸೂದನನಿಗೆ ಪರಿಚಯ ಮಾಡಿಸಿಕೊಟ್ಟರು.

"ಇವಳೇ ನನ್ನ ಮಗಳು ಲಲಿತ"

"ನಮಸ್ತೇ"

ಎಂದು ಲಲಿತ ವಿನಯದಿಂದ ಕೈಜೋಡಿಸಿದಳು.

" ನಮಸ್ಕಾರ '

ಎಂದು ಮಧುಸೂದನನೂ ಪ್ರತಿವಂದಿಸಿದ.

ಇಬ್ಬರೂ ಒಂದುಕ್ಷಣ ಎವೆಯಿಕ್ಕದೆ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು.

ಅಷ್ಟುಹೊತ್ತಿಗೆ ಶಿವಸ್ವಾಮಿಯೂ ಒಳಗಿನಿಂದ ಬಂದ. ನಟರಾಜ ಅಯ್ಯರರು ಅವನನ್ನು ಮಧುಸೂದನನಿಗೆ ಪರಿಚಯ ಮಾಡಿಸಿಕೊಟ್ಟ ಬಳಿಕ ಎಲ್ಲರೂ ಉಪಾಹಾರಕ್ಕೆ ಒಳಗೆ ತೆರಳಿದರು.

ಲಗ್ನ ಸಂಭ್ರಮವಾಗಿಯೇ ಜರುಗಿತು. ಸುಂದರಂ ಅಯ್ಯರರು ಬೀಗರ ಅಂತಸ್ತಿಗೆ ತಕ್ಕಹಾಗೆ ಆದರೋಪಚಾರ ನಡಸಿದರು. ಸಂಜೆ ಆರತಕ್ಷತೆ ದೊಡ್ಡ ಪ್ರಮಾಣದಲ್ಲಿ ಏರ್ಪಟ್ಟಿತ್ತು. ದಿವ್ಯವಾಗಿ ಅಲಂಕಾರವಾಗಿದ್ದ ಚಪ್ಪರದಲ್ಲಿ ಸುಬ್ಬಲಕ್ಷ್ಮಿಯ ಘನವಾದ ಸಂಗೀತ ಕಚೇರಿ ನಡೆಯಿತು.

ನಾಗೋಲಿಯ ದಿನವೇ ಲಲಿತನ ಭರತನಾಟ್ಯ ಗೊತ್ತಾಗಿದ್ದುದು. ಆದರೆ ಅವಳಿಗೆ ಕೊಂಚ ದೇಹಾಲಸ್ಯವಾಗಿದ್ದರಿಂದ ಆ ಕಾರ್ಯಕ್ರಮವನ್ನು ಮುಂದಕ್ಕೆ ಹಾಕಿ ಮಧುಸೂದನನ ಕಚೇರಿಯನ್ನೇ ಏರ್ಪಡಿಸಬೇಕಾಗಿ ಬಂದಿತು.

ವಿವಾಹ ಮಂಟಪದಲ್ಲಿ ಸಾಯಂಕಾಲ ಭರ್ಜರಿ ಕಚೇರಿ ನಡೆಯಿತು. ಚಪ್ಪರದಲ್ಲಿ ಕಾಲಿಡಲೂ ಅವಕಾಶವಿಲ್ಲವಂತೆ ಆಹ್ವಾನಿತರೂ ಬಂಧು ಮಿತ್ರರೂ ತುಂಬಿ ಹೋಗಿದ್ದರು. ಕಚೇರಿ 'ಮದುವೆಯ ಮನೆಯ ಮಾಮೂಲು ಸಂಗೀತ' ಎನ್ನಿಸಿಕೊಳ್ಳದೆ ನಿಜವಾದ ಸಂಗೀತ ಕಚೇರಿಯೆನ್ನಿಸಿತು. ಹೆಣ್ಣು ಗಂಡೆನ್ನದೆ ಜನ ಸೇರಿ ಸದ್ದಿಲ್ಲದೆ ಎರಡು ಗಂಟೆಯ ಹೊತ್ತು ಕುಳಿತು ಗಾಯನ ಕೇಳಿ ಆನಂದಿಸಿದರು.

ಲಲಿತ ವಧೂವರರನ್ನು ಕುಳ್ಳಿರಿಸಿದ್ದ ಸೋಫಾದ ಹಿಂದೆ ಒಂದು ಕುರ್ಚಿ ಹಾಕಿಸಿಕೊಂಡು ಕುಳಿತು ಸಂಗೀತ ಆಲಿಸುತ್ತಿದ್ದಳು. ಮಧುಸೂದನನ ಹಾಡಿಕೆ ಕೇಳಿ ಅವಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಪಂದನಲ್ಲೂರಿನಲ್ಲಿ ಅವಳ ಸಂಗೀತಜ್ಞಾನ ಸಾಕಷ್ಟು ಬೆಳೆದಿತ್ತು. ಮದರಾಸಿನಲ್ಲಲ್ಲದೆ ತಂಜಾವೂರಿನಲ್ಲೂ ಹಲವು ಅತ್ಯುತ್ತಮ ಸಂಗೀತ ಕಚೇರಿಗಳನ್ನು ಕೇಳಿದ್ದಳು. ಆದರೆ ಈ ಕಚೇರಿ ಅವೆಲ್ಲಕ್ಕೂ ಒಂದು ಬಗೆ ಭಿನ್ನವಾಗಿತ್ತು. ರಾಗ ಭಾವಗಳ ಚಿತ್ರಣ

ದಲ್ಲಿ ಗಾಯಕನ ವಿಶಿಷ್ಟ ಧೋರಣೆ ಎದ್ದು ಕಾಣುತ್ತಿತ್ತು. ಲಲಿತನಿಗೆ ಪ್ರೊ॥ ಸದಾನಂದಂರ ಲೇಖನ ಜ್ಞಾಪಕಕ್ಕೆ ಬಂದಿತು.

ಬೀಗರ ಔತಣ ದಿವ್ಯವಾಗಿ ನಡೆಯಿತು. ಮೂರನೆಯ ದಿನ ಗಂಡಿನ ಕಡೆಯವರು ಊರಿಗೆ ಹೊರಡುವವರಾಗಿದ್ದುದರಿಂದ ಆ ಸಂಜೆಯೇ ಲಲಿತನ ಭರತನಾಟ್ಯ ಇಟ್ಟುಕೊಳ್ಳಬೇಕೆಂದು ಸುಂದರಂ ಅಯ್ಯರ್ ಒತ್ತಾಯ ಮಾಡಿದರು. ಊರಿನ ಗಣ್ಯರಿಗೆಲ್ಲಾ ಆಹ್ವಾನ ಹೋಯಿತು. ನಾಟ್ಯ ಸಂಜೆ ಏಳು ಘಂಟೆಗೆಂದು ಗೊತ್ತಾಗಿತ್ತು. ಲಲಿತನ ಸಲಹೆ ಪಡೆದು ಸುಂದರಂ ಅಯ್ಯರ್ ಸೊಗಸಾದ ಹಿಮ್ಮೇಳನದ ಏರ್ಪಾಡು ಮಾಡಿದ್ದರು.

ಲಲಿತ ನಾಟ್ಯಕ್ಕೆ ಸಿದ್ಧವಾಗುವುದಕ್ಕೇ ತುಂಬ ಹೊತ್ತು ಹಿಡಿಸಿತು. ಅವಳ ಅಲಂಕಾರಕ್ಕೆ ಅತ್ತಿಗೆ ಉತ್ಸಾಹದಿಂದ ನೆರವಾಗಿದ್ದಳು. ಗಂಡುಕಚ್ಚೆ ಹಾಕಿ ಪೀತಾಂಬರವುಟ್ಟು, ಮುತ್ತಿನ ಸರದಿಂದ ಬೈತಲೆಯನ್ನು ಸಿಂಗರಿಸಿಕೊಂಡು, ಮೊಗ್ಗಿನ ಜಡೆ ಸರ್ಪದಂತೆ ತೂಗುತ್ತಿರಲು, ಕರ್ಣಕುಂಡಲ, ರತ್ನಹಾರ, ಮುಂಗೈ ಮುರಾರಿಗಳಿಂದ ಲಲಿತ ಸಾಲಂಕೃತಳಾದಳು. ಕಾಲ್ಗೆಜ್ಜೆಯ ಗತಿಬದ್ಧವಾದ ಸಿನದದೊಡನೆ ರಂಗಭೂಮಿಯ ಮೇಲೆ ಅಭಿಜಾತ ನಟಿ ಮೈದೋರುವಂತೆ ವೇದಿಕೆಯ ಮೇಲೆ ಅವಳು ಬಂದು ನಿಂತು ಕೈಮುಗಿದಾಗ ಪ್ರೇಕ್ಷಕ ಸಮೂಹದಲ್ಲಿ ಚಮತ್ಕಾರವಾದ ಒಂದು ಪರಿಣಾಮವುಂಟಾಯಿತು. ಅಲರಿಪು, ಸ್ವರಜತಿ, ತಾನವರ್ಣಗಳಾದವು. ಗಿರಿಜೆಯ ತಪಸ್ಸಿಗೆ ಶಿವನೊಲಿದ ಒಂದು ಪದಕ್ಕೆ ಲಲಿತ ಅಭಿನಯ ಕಟ್ಟಿದಾಗ ಅತಿಥಿ ವೃಂದ ಸಂತೋಷದಿಂದ ಚಪ್ಪಾಳೆ ತಟ್ಟಿತು. ಮಧುಸೂದನ ಅವಳ ಹಸ್ತವಿಕ್ಷೇಪ ಅಂಗವಿನ್ಯಾಸಗಳಿಗೆ ಮನಸೋತು ಮೈಯೆಲ್ಲಾ ಕಣ್ಣಾಗಿ ಕುಳಿತಿದ್ದ. ಶಿವಸ್ವಾಮಿ ತಂಗಿಯ ನರ್ತನವನ್ನು ತುಂಬ ಮೆಚ್ಚಿಕೊಂಡ.

ಊರಿಗೆ ಹೊರಡುವ ಮುನ್ನ ಪರಸ್ಪರ ಉಡುಗೊರೆಗಳ ವಿನಿಮಯವಾಯಿತು. ಸುಂದರಂ ಅಯ್ಯರ್ ತಮ್ಮ ಯೋಗ್ಯತೆಗೆ ತಕ್ಕಹಾಗೆ ಬೀಗ ಬೀಗಿತ್ತಿ ಅಳಿಯನಿಗೆ ಉಡುಗೊರೆಗಳನ್ನಿತ್ತರು. ಲಲಿತನಿಗೆ ಸೊಗಸಾದ ಜಾರ್ಜೆಟ್ ಸೀರೆ ಉಡುಗೊರೆಯಾಗಿ ಬಂದಿತು. ಸ್ವಾಮಿನಾಥನ್ ಕೇಶವ ಪೈಗಳ ಶ್ರಮಕ್ಕೆ ಯಾವ ಉಡುಗೊರೆಯೂ ಸಾಟಿಯಾಗುತ್ತಿರಲಿಲ್ಲ. ಅವರಿಬ್ಬರಿಗೂ ಶಲ್ಯ ಧೋತ್ರಗಳನ್ನಿತ್ತು ಸುಂದರಂ ಅಯ್ಯರ್ ಮನಃಪೂರ್ವಕವಾಗಿ ಕೃತಜ್ಞತೆ ಸಲ್ಲಿಸಿ

ದರು. ಮಧುಸೂದನನಿಗೆ ಮುನ್ನೂರು ರೂಪಾಯಿ, ಒಂದು ಜೊತೆ ಜರತಾರಿ ಪಂಚೆ, ದಿವ್ಯವಾದ ಒಂದು ಜರತಾರಿ ಶಲ್ಯವಿತ್ತು ಉಪಚರಿಸಿದರು.

ಗಂಡಿನಕಡೆಯವರೆಲ್ಲರೂ ಕಾರಿನಲ್ಲೇ ಮದರಾಸಿಗೆ ಹಿಂತಿರುಗುವುದೆಂದು ಗೊತ್ತಾಯಿತು. ಮಧು ಮೈಸೂರಿಗೆ ಹೊರಡುವುದಾಗಿ ಹೇಳಿದ. ನಟರಾಜ ಅಯ್ಯರರಿಗೆ ಅಷ್ಟು ಬೇಗ ಅವನನ್ನು ಬಿಟ್ಟುಕೊಡಲು ಇಷ್ಟವಿರಲಿಲ್ಲ. ತಮ್ಮ ಜೊತೆಯಲ್ಲೇ ಮದರಾಸಿಗೆ ಕರೆದೊಯ್ಯಲು ಬಯಸಿದರು. ಆದರೆ ಅವನು ಸ್ವಲ್ಪಕ್ಕೆ ಒಪ್ಪದೆ ತಕರಾರು ಮಾಡಿದ. ಕೊನೆಗೆ ಅಯ್ಯರ್ ಶಾಸ್ತ್ರದ ಒಂದು ಅಡ್ಡಿ ಹಾಕಿ ತಡೆದರು.

" ಶುಭಕಾರ್ಯಕ್ಕೆ ಬಂದವರು ಒಬ್ಬೊಬ್ಬರು ಒಂದೊಂದು ಕಡೆ ಪ್ರಯಾಣ ಮಾಡಬಾರದೆನ್ನುತ್ತಾರೆ. ನೀವೂ ನಮ್ಮ ಜೊತೆಯಲ್ಲೇ ಬನ್ನಿ. ಎರಡು ದಿನ ಮದರಾಸಿನಲ್ಲಿದ್ದು ಹೋದರಾಯಿತು. ಬೇಸರವಾದರೆ ಜೊತೆಗೆ ಶಿವಸ್ವಾಮಿ ಇರುತ್ತಾನೆ. ಮೈಸೂರಿಗೆ ಹೋಗುವುದು ಇದ್ದೇ ಇದೆ "

ಎಂದು ಒತ್ತಾಯ ಮಾಡಿದರು. ಅವರ ವಾತ್ಸಲ್ಯದ ಆಹ್ವಾನವನ್ನು ತಳ್ಳಿಹಾಕುವ ಮನಸ್ಸಿಲ್ಲದೆ ಮಧುಸೂದನ ಒಪ್ಪಿಕೊಂಡ.

ಮಾರನೆಯ ದಿನ ಅಯ್ಯರರ ಪರಿವಾರ ಕಾರುಗಳಲ್ಲಿ ಕುಳಿತು ಮದರಾಸಿನ ಅಭಿಮುಖವಾಗಿ ಪ್ರಯಾಣಮಾಡಿತು.

ಎರಡು ದಿನ ಎಲ್ಲರೂ ವಿಶ್ರಾಂತಿ ಪಡೆದು ಪ್ರಯಾಣದ ಜಂಜಡವನ್ನು ನೀಗಿಕೊಂಡರು.

# ೨೦

ಶಿವಸ್ವಾಮಿಗೆ ಇನ್ನೂ ಹದಿನೈದು ದಿನ ವಿರಾಮವಿತ್ತು. ಆ ಅವಧಿಯಲ್ಲಿ ಗೆಳೆಯರನ್ನೆಲ್ಲಾ ನೋಡಿ ಬರುವುದೆಂದು ಅವನು ನಿಶ್ಚಯಿಸಿದ. ಹಲವು ಅನನುಕೂಲಗಳಿಂದ ಗೆಳೆಯರನೇಕರಿಗೆ ಮದುವೆಗೆ ಬರಲು ಅವಕಾಶವಾಗಿರಲಿಲ್ಲ. ಅವರಿಗೆಲ್ಲಾ ಒಂದು ದಿನ ಸತ್ಕಾರಸಮಾರಂಭವಿಟ್ಟುಕೊಳ್ಳಬೇಕೆಂಬ ಯೋಚನೆಯಿತ್ತು.

ಶಿವಸ್ವಾಮಿ ಮಧುಸೂದನ ಕಾರಿನಲ್ಲಿ ಕುಳಿತು ಮದರಾಸಿನಲ್ಲಿ ಸುತ್ತುವುದಕ್ಕಾರಂಭಿಸಿದರು. ಮ್ಯೂಸಿಯಂ, ಅಡ್ಯಾರ್, ಸಮುದ್ರ ತೀರಗಳಿಗೆ ಹೋಗಿ ಬರುತ್ತಿದ್ದರು. ಸಂಜೆಯ ಹೊತ್ತು ಲಲಿತನೂ ಜೊತೆಗೆ ಬರುತ್ತಿದ್ದಳು.

ಕೊಯಮತ್ತೂರಿನಿಂದ ಹಿಂತಿರುಗಿದ ಮೂರನೆಯ ದಿನ ಸಂಜೆ ಮೂವರೂ ಕಾರಿನಲ್ಲಿ ಕುಳಿತು ಸುತ್ತಾಡಿಕೊಂಡು ಟ್ರಿಪ್ಲಿಕೇನ್ ಹತ್ತಿರ ಸಮುದ್ರದ ದಂಡೆಗೆ ಬಂದಿಳಿದರು. ತಣ್ಣನೆಯ ಗಾಳಿ ಸಮುದ್ರದ ಮೇಲಿಂದ ಬೀಸಿ ಬಂದು ಆಯಾಸ ಪರಿಹರಿಸುತ್ತಿತ್ತು. ಅಲೆಗಳ ಏರಿಳಿತ ಆಹ್ಲಾದಕರವಾಗಿತ್ತು. ಮುಳುಗುತ್ತಿದ್ದ ಸೂರ್ಯನ ಹೊಂಬಣ್ಣದ ಕಿರಣ ನೊರೆನೊರೆಯಾಗಿ ಏಳುತ್ತಿದ್ದ ಜಲರಾಶಿಗೆ ರಂಗುಕೊಟ್ಟಿತ್ತು. ಮೂವರೂ ಅದನ್ನೇ ನೋಡುತ್ತ ಮಾತಿಲ್ಲದೆ ಕುಳಿತರು. ಅವರ ಗಮನವನ್ನೆಲ್ಲಾ ಆ ಸಂಜೆಯ ಸಮುದ್ರದ ಸೊಬಗೇ ಸೆಳೆದುಕೊಂಡಿತ್ತು. ಇದ್ದಕ್ಕಿದ್ದ ಹಾಗೆ ಹಿಂದೆ ಧ್ವನಿಯಾಯಿತು.

" ಶಿವಸ್ವಾಮಿ."

ಶಿವಸ್ವಾಮಿ ಹಿಂತಿರುಗಿ ನೋಡಿದ. ಅವನ ಗೆಳೆಯ ರಾಜಗೋಪಾಲ್ ನಾಲ್ಕುಮಾರು ದೂರದಲ್ಲಿ ಸದ್ದಿಲ್ಲದೆ ಬಂದು ನಿಂತಿದ್ದ.

"ಹಲ್ಲೋ"

ಎನ್ನುತ್ತ ಶಿವಸ್ವಾಮಿ ಎದ್ದುಹೋಗಿ ಅವನ ಕೈ ಕುಲುಕಿಸಿ ಕರೆತಂದ. ಗೆಳೆಯರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಎರಡು ವರ್ಷದ ಮೇಲಾಗಿತ್ತು. ಪ್ರವಾಸ ಹೋಗಿದ್ದ ರಾಜಗೋಪಾಲ್ ಮದುವೆಗೆ ಮುಂಚೆ ಮದರಾಸಿನಲ್ಲಿ ಶಿವಸ್ವಾಮಿಗೆ ಸಿಕ್ಕಿರಲಿಲ್ಲ. ಆ ಕಾರಣದಿಂದಲೇ ಮದುವೆಗೂ ಬರದೆ ತಪ್ಪಿಸಿಕೊಂಡಿದ್ದ.

ಶಿವಸ್ವಾಮಿ ರಾಜಗೋಪಾಲನನ್ನು ಮಧುಸೂದನನಿಗೆ ಪರಿಚಯ ಮಾಡಿಸಿದ.

"ಇವರು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾರೆ. ನನ್ನ ಬಾಲ್ಯ ಮಿತ್ರರು."

ಎಂದು ಹೇಳಿ.

"ಇವರೇ ಮೈಸೂರಿನ ಸಂಗೀತ ವಿದ್ವಾಂಸರು. ಮಿ॥ ಮಧುಸೂದನ್. ನೀನು ಕೇಳಿರಬಹುದು."

"ನಮಸ್ಕಾರ. ಕೇಳಿರುವುದೇನು, ಅವರ ಕಚೇರಿಯ ಸುಖವನ್ನೂ ಅನುಭವಿಸಿದ್ದೇನೆ. ಪರಸ್ಪರ ಪರಿಚಯವಿರಲಿಲ್ಲ, ಅಷ್ಟೆ."

ಎಂದು ರಾಜಗೋಪಾಲ್ ಸೌಜನ್ಯ ವ್ಯಕ್ತಪಡಿಸಿದ. ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತುಕಥೆ ನಡೆಯಿತು. ಇಬ್ಬರು ಗೆಳೆಯರೂ ಮಾತಾಡುವುದು ಒಂದು ಬಂಡಿಯಷ್ಟಿತ್ತು. ಶಿವಸ್ವಾಮಿ ಅದಕ್ಕೊಂದು ಮಾರ್ಗ ಹುಡುಕಿದ.

"ಹೊತ್ತಾದರೆ ನೀವಿಬ್ಬರೂ ಕಾರಿನಲ್ಲಿ ಹೊರಟುಬಿಡಿ. ನಾನೂ ರಾಜೂ ಸುತ್ತಾಡಿಕೊಂಡು ನಿಧಾನವಾಗಿ ಬರುತ್ತೇವೆ"

ಎಂದು ಹೇಳಿ ಅವರ ಅನುಮತಿ ಪಡೆದು ಗೆಳೆಯನ ಹೆಗಲ ಮೇಲೆ ಕೈ ಹಾಕಿಕೊಂಡು ಹೊರಟೇಬಿಟ್ಟ.

ಮಧುಸೂದನ ಲಲಿತ ಒಬ್ಬರ ಮುಖ ಒಬ್ಬರು ನೋಡಿಕೊಂಡರು.

ಲಲಿತ ಸಣ್ಣದಾಗಿ ನಕ್ಕಳು.

"ಏಕೆ ನಗುತ್ತಿರುವಿರಿ?"

"ಅಣ್ಣನ ಸ್ವಭಾವವೇ ಹೀಗೆ ನೋಡಿ. ಸ್ನೇಹಿತರು ಅಂದರೆ ಅವನು ತುಂಬ ಒದ್ದುಕೊಳ್ಳುತ್ತಾನೆ. ಸ್ನೇಹಿತರು ಬಂದರೆ ಊಟ ತಿಂಡಿಯನ್ನೂ ಬಿಟ್ಟು ಅವರ ಜೊತೆಗೆ ಓಡುತ್ತಾನೆ."

ಮಧುಸೂದನ ಮಾತಾಡಲಿಲ್ಲ. ಮೋಹಕವಾದ ಅವಳ ರೂಪವನ್ನು ಕಣ್ಣಿಂದಲೇ ಹೀರಿಕೊಳ್ಳುತ್ತ ಕುಳಿತಿದ್ದ.

ಲಲಿತ ಬಂಗಾರದ ಬಣ್ಣದ ಜಾರ್ಜೆಟ್ ಸೀರೆಯನ್ನುಟ್ಟಿದ್ದಳು. ಬಿಳಿಯ ರೇಷ್ಮೆಯ ಬ್ಲೌಸು ಅವಳ ತುಂಬುತೋಳಿಗೆ ಒಪ್ಪುತ್ತಿತ್ತು. ನೀಳವಾಗಿ ಬೆನ್ನ ಮೇಲೆ ಇಳಿಬಿದ್ದಿದ್ದ ಜಡೆ ಮರಳನ್ನು ಸೋಕುತ್ತಿತ್ತು. ಹೆರಳಿನಿಂದ ತಪ್ಪಿಸಿಕೊಂಡಿದ್ದ ತುಂಟ ಮುಂಗುರುಳು ಗಾಳಿಗೆ ಅತ್ತಿತ್ತ ಹಾರುತ್ತಿತ್ತು. ಅದನ್ನು ನೇವರಿಸಿಕೊಳ್ಳಲು ಅವಳು ತೋಳೆತ್ತಿದಾಗ ಸೆರಗು ಹಿಂದೆ ಜಾರಿ, ಕುಪ್ಪಸದಲ್ಲಿ ಬಂಧಿತವಾಗಿದ್ದ ಬಟ್ಟಕುಚಗಳ ಮಾಟ ಕಣ್ಣನ್ನು ಕುಕ್ಕುತ್ತಿತ್ತು.

ಆಪ್ತವಾದ ಆ ಸನ್ನಿವೇಶದಲ್ಲಿ ಇಮ್ಮಡಿಯಾಗಿ ಕಂಡ ಅವಳ ಚೆಲುವು ಮಧುಸೂದನನ ಮನಸ್ಸನ್ನು ಪೂರ್ತಿ ಅಪಹರಿಸಿತು. ಬಯಕೆ ಅವನೆದೆಯಲ್ಲಿ ಕಡಲಿನ ಅಲೆಯಂತೆ ಭೋರ್ಗರೆಯಲಾರಂಭಿಸಿತು. ನಾಲ್ಕಾರು ದಿನಗಳಿಂದ ಕೈಗೆ ಸಿಕ್ಕದೆ ಕಣ್ಣುಮುಚ್ಚಾಲೆಯಾಡುತ್ತಿದ್ದ ಏಕಾಂತ ಅನಿರೀಕ್ಷಿತವಾಗಿ, ತಾನಾಗಿ ಬಳಿಸಾರಿತ್ತು.

ಅವನ ದೃಷ್ಟಿ ತನ್ನ ಮೇಲೆ ನೆಲಸಿದ್ದನ್ನು ಅರಿತು ಅವಳ ಕೆನ್ನೆ ಲಜ್ಜೆಯಿಂದ ಕೆಂಪೇರಿತು. ಮನಸ್ಸಿನ ಗಲಿಬಿಲಿಯಿಂದ ಪಾರಾಗಲು ಏನಾದರೂ ಹೇಳಬೇಕೆಂದೆಣಿಸಿ,

"ಮನೆಗೆ ಹೋಗೋಣವೆ?"

ಎಂದಳು. ಮಧುಸೂದನನಿಗೆ ಯಾವುದೋ ಸುಖನಿದ್ರೆಯಿಂದ ಎಚ್ಚರವಾದ ಹಾಗಾಯಿತು.

"ಮನೆಗೆ ಹೋಗಲು ಇಷ್ಟು ಬೇಗ ಅವಸರವೆ? ನಿಮಗೆ ಬೇಸರವಾದರೆ ಹೋಗೋಣ."

"ನನಗೇನೂ ಬೇಸರವಿಲ್ಲ. ನಿಮಗೆ ಬೇಸರವಿರಬಹುದೆಂದು ಹೇಳಿದೆ."

"ನಿಮ್ಮೊಡನೆ ಎಷ್ಟು ಹೊತ್ತು ಕುಳಿತಿದ್ದರೂ ನನಗೆ ಬೇಸರವಿಲ್ಲ."

ಅವಳ ಕೆನ್ನೆಗೆ ಪುನಃ ಕೆಂಪೇರಿತು. ಆದರೆ ಅವಳು ಮಾತಿಗೆ ಸೋಲು ವವಳಾಗಿರಲಿಲ್ಲ.

"ಮದರಾಸಿಗೆ ನಮ್ಮೊಡನೆ ಬರುವುದಕ್ಕೆ ಬೇಸರಪಟ್ಟುಕೊಂಡಿರಿ ?"

"ಕಾರಣವಿಲ್ಲದೆ ಏಕೆ ಬರಬೇಕೆಂದು ಹೇಳಿದೆ, ಅಷ್ಟೆ. ಹಾಗೆ ಹೇಳಿದ್ದು ತಪ್ಪೆಂದು ಈಗ ತೋರುತ್ತಿದೆ"

"ಏಕೆಂದು ಕೇಳಬಹುದೆ ?"

"ಧಾರಾಳವಾಗಿ ಕೇಳಿ, ನಿಮ್ಮೊಡನೆ ವಂಚನೆಯಿಲ್ಲ. ನಾನು ಮದ ರಾಸಿಗೆ ಬರದೆ ಮೈಸೂರಿಗೇ ಹಿಂತಿರುಗಿದ್ದರೆ ಈ ಭಾಗ್ಯ ಲಭಿಸುತ್ತಿತ್ತೆ ? ನಿಮ್ಮ ಎಣೆಯಿಲ್ಲದ ಆತಿಥ್ಯದಲ್ಲಿ ನನ್ನನ್ನು ಋಣಿಯಾಗಿಸಿದ್ದೀರಿ."

"ಅಷ್ಟು ದೊಡ್ಡ ಮಾತೇಕೆ? ನೀವು ದೊಡ್ಡ ಮನಸ್ಸುಮಾಡಿ ಬಂದದ್ದೇ ನಮಗೆಲ್ಲಾ ಎಷ್ಟೋ ಸಂತೋಷ"

"ನಾನು ಬರದಿದ್ದರೆ ನಿಮಗೆ ನಿಜವಾಗಿ ವ್ಯಸನವಾಗುತ್ತಿತ್ತೆ ?"

ಅದನ್ನೂ ಕೇಳಬೇಕೆ ಎಂಬ ಭಾವದಲ್ಲಿ ಲಲಿತ ಅವನ ಕಡೆಗೆ ಮಿಂಚಿನಂಥ ಒಂದು ಕಟಾಕ್ಷವೆಸೆದಳು. ಭಾವಪೂರಿತವಾದ ಆ ನೋಟದಿಂದ ಅವನ ದೇಹಾಭ್ಯಂತವೂ ಪುಲಕಗೊಂಡಿತು.

"ನನ್ನ ಪ್ರಶ್ನೆಗೆ ನೀವು ಉತ್ತರಕೊಡಲಿಲ್ಲ"

ಎಂದು ನಗುತ್ತ ನುಡಿದ. ಗಾಳಿಗೆ ಹಾರುತ್ತಿದ್ದ ಸೆರಗನ್ನೆಳೆದುಕೊಳ್ಳುವ ನೆವದಲ್ಲಿ ಲಲಿತ ಅವನ ಮಾತಿಗೆ ಉತ್ತರ ಕೊಡದೆ ತಪ್ಪಿಕೊಂಡಳು.

ಒಂದು ಕ್ಷಣ ಇಬ್ಬರೂ ಮೌನವಾಗಿದ್ದರು. ಇಬ್ಬರ ಮನಸ್ಸಿನಲ್ಲೂ ಭಾವತರಂಗಗಳೇಳುತ್ತಿದ್ದವು.

ಕೊಯಮುತ್ತೂರಿನಲ್ಲಿದ್ದಾಗ ಲಲಿತನನ್ನು ಮಾತಾಡಿಸಬೇಕೆಂದು ಮಧು ಒಂದೆರಡು ಸಲ ಪ್ರಯತ್ನಪಟ್ಟು ವಿಫಲನಾಗಿದ್ದ. ಆ ಜನಜಂಗುಳಿಯಲ್ಲಿ ಅವಳೊಡನೆ ಏಕಾಂತವಾಗಿ ಮಾತಾಡುವುದಿರಲಿ, ಅವಳ ನಾಟ್ಯವನ್ನು ಶ್ಲಾಘಿಸಿ ಎರಡು ಮಾತು ಹೇಳುವುದಕ್ಕೂ ಸರಿಯಾಗಿ ಸಮಯ ಸಿಕ್ಕಿರಲಿಲ್ಲ. ಈಗ ಮನಬಿಚ್ಚಿ ಮಾತಾಡುವ ಅಪೂರ್ವ ಸಂಧಿ ಒದಗಿತ್ತು.

"ಲಲಿತಾದೇವಿ, ನಿಮಗೊಂದು ಮಾತು ಹೇಳಲೆ ?"

"ಹೇಳಿ."

" ನಿಮ್ಮ ನಾಟ್ಯ ನನಗೆ ತುಂಬ ಒಪ್ಪಿತು. ನೀವು ಅಷ್ಟೊಂದು ನಯವನ್ನು ಸಾಧಿಸಿಕೊಂಡಿದ್ದೀರೆಂದು ನಾನು ತಿಳಿದಿರಲಿಲ್ಲ"

" ನನ್ನನ್ನು ಸುಮ್ಮನೆ ಹೊಗಳುತ್ತಿರುವಿರಿ ?"

" ಮೆಚ್ಚಿಕೆಯಾದಾಗ ಹೊಗಳುವುದು ತಪ್ಪೆ ?"

" ನನ್ನ ನಾಟ್ಯ ನಿಜವಾಗಿ ನಿಮಗೆ ಮೆಚ್ಚಿಕೆಯಾಯಿತೆ ?"

ಎಂದು ಕುತೂಹಲದಿಂದ ಕಣ್ಣರಳಿಸಿ ಕೇಳಿದಳು.

" ಅದನ್ನೂ ಕೇಳಬೇಕೆ ? ನಿಮ್ಮ ನಾಟ್ಯವೊಂದೇ ಅಲ್ಲ, ನೀವೂ ಮೆಚ್ಚಿಕೆಯಾದಿರಿ."

ಲಜ್ಜೆ ಮತ್ತೆ ಅವಳನ್ನಾವರಿಸಿತು. ಅಂತರಂಗದಲ್ಲಿ ಹರ್ಷದ ಬುಗ್ಗೆಯೆದ್ದಿತು.

" ನಿಮ್ಮ ಹಾಡಿಕೆಯನ್ನು ನಾನು ಮೆಚ್ಚಿಕೊಳ್ಳಲಿಲ್ಲವೆಂದು ತಿಳಿದಿರಾ ?"

ಅದನ್ನು ನೀವೇ ಹೇಳಬೇಕು. ಹೃದಯ ಒಪ್ಪಿದ್ದೆಲ್ಲವೂ ಮೆಚ್ಚಿಕೆಯೇ ಅಲ್ಲವೇ ?"

ಲಲಿತ ಉತ್ತರ ಕೊಡಲಿಲ್ಲ. ನವಪ್ರಣಯದ ಹೊಸಿಲಲ್ಲಿ ನಿಂತ ಅವಳಿಗೆ ಆ ಒಂದು ಕ್ಷಣ ಹಾಗೆಯೇ ಚಿರಸ್ಥಾಯಿಯಾಗಬಾರದೇ ಎನ್ನಿಸಿತು. ಅನಂತ ತೃಪ್ತಿಯ ಸಾಗರದಲ್ಲಿ ಅವಳ ಆತ್ಮ ಓಲಾಡುತ್ತಿತ್ತು. ಅದರೊಡನೆ ಗುರುತಿಸಲಾಗದ ಯಾವುದೋ ಅಸ್ಪಷ್ಟ ವಿಷಾದದ ಸಣ್ಣ ಸುಳಿಯೊಂದು ಒಳಗೇ ಸುತ್ತುತ್ತಿತ್ತು.

" ಮದರಾಸಿನಲ್ಲಿ ಇನ್ನೆರಡು ದಿನ ನಿಲ್ಲಲಾಗುವುದಿಲ್ಲವೆ ?"

" ಏಕೆ ಈಗಿದ್ದದ್ದು ಸಾಲದೇ ? ಇನ್ನೂ ಎರಡು ದಿನವಿದ್ದು ನಿಮಗೆ ಭಾರವಾಗೆನ್ನುತ್ತೀರಾ ?"

" ನನ್ನ ಮನಸ್ಸನ್ನು ನೋಯಿಸಬೇಕೆಂದಿದ್ದರೆ ಹಾಗೆ ಹೇಳಬಹುದು."

ಅವಳ ಧ್ವನಿ ಒಂದು ಕ್ಷಣದಲ್ಲಿ ಭಾರವಾಯಿತು. ಮಧುಸೂದನನಿಗೆ ತಾನು ಹಾಗೆನ್ನಬಾರದಾಗಿತ್ತೇನೋ ಎನ್ನಿಸಿತು.

" ಕ್ಷಮಿಸಿ ಲಲಿತಾದೇವಿ, ನಿಮನ್ನು ನೋಯಿಸಲೆಂದು ನಾನು ಹಾಗೆ ಹೇಳುತ್ತಿಲ್ಲ. ನೀವೇ ನನ್ನ ಸ್ಥಾನದಲ್ಲಿದ್ದಿದ್ದರೆ ಏನು ಮಾಡುತ್ತಿದ್ದಿರಿ, ಹೇಳಿ ?"

" ಏನೂ ಇಲ್ಲ "

ಎಂದು ದುಗುಡದಿಂದ ಉತ್ತರವಿತ್ತಳು. ಮಧುಸೂದನ ಅವಳ ಮನಸ್ಸನ್ನು ರಮಿಸಲೆತ್ನಿಸುತ್ತ,

" ನೀವು ಇರಬೇಕೆಂದರೆ ಇರುತ್ತೇನೆ "

ಎಂದ.

" ನಿಮ್ಮ ಇಷ್ಟ "

ಎಂದು ತಲೆತಗ್ಗಿಸಿ ಕಾಲಿನಿಂದ ಮರಳನ್ನು ಚಿಮ್ಮುತ್ತ ಕುಳಿತಳು.

ಮಾತಿನಲ್ಲಿ ಹೊತ್ತೇ ಗೊತ್ತಾಗಿರಲಿಲ್ಲ. ಕತ್ತಲಾಗಿ ದೀಪಗಳೆಲ್ಲ ಹೊತ್ತಿದ್ದವು. ತೀರದಲ್ಲಿ ಅಲ್ಲಲ್ಲೇ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದ ಜನರ ಗುಂಪು ಕ್ರಮೇಣ ಕರಗುತ್ತಿತ್ತು. ಹೊತ್ತಾಯಿತೆಂದು ಲಲಿತ ಎದ್ದಳು.

ಕಾರಿನ ಮುಂಭಾಗದ ಬಾಗಿಲು ತೆಗೆದು ಡ್ರೈವರ್ ಸೀಟಿನಲ್ಲಿ ಕುಳಿತಳು. ಮಧಸೂದನ ಅವಳ ಪಕ್ಕದಲ್ಲೇ ಕುಳಿತ. ಕಾರು ನಿಧಾನವಾನವಾಗಿ ಚಲಿಸಲಾರಂಭಿಸಿತು. ಲಲಿತ ಮಾತಿಲ್ಲದೆ ಸುಮ್ಮನೆ ಡ್ರೈವ್ ಮಾಡುತ್ತಿದ್ದಳು. ಕತ್ತಲಲ್ಲಿ ಅವಳ ಮುಖ ಚೆನ್ನಾಗಿ ಕಾಣುತ್ತಿರಲಿಲ್ಲ. ಆದರೆ ಅವಳ ಭಾವದಿಂದ ಅಸಮಾಧಾನ ಇನ್ನೂ ಹೋಗಿಲ್ಲವೆಂಬುದನ್ನು ಮಧುಸೂದನ ಅರಿತುಕೊಳ್ಳಲು ಕಷ್ಟವಾಗಿರಲಿಲ್ಲ. ಮೆಲ್ಲನೆ ಅನುನಯದಿಂದ ನುಡಿದ :

" ಇರುತ್ತೇನೆಂದು ಮಾತು ಕೊಟ್ಟಮೇಲೂ ಕೋಪ ಇಳಿಯಲಿಲ್ಲವೆ, ಲಲಿತಾದೇವಿ ?"

" ನನಗೆ ಕೋಪವಿಲ್ಲ."

" ನಿಜವಾಗಿ ?"

" ನನ್ನಾಣೆಗೂ."

" ಹಾಗಾದರೆ ಮೌನದಿಂದೇಕೆ ನನ್ನನ್ನು ಕೊಲ್ಲುವಿರಿ ?"

" ಕೊಲ್ಲುತ್ತಿರುವಳು ನಾನಲ್ಲ."

" ಇಲ್ಲ, ನಾನೇ ?"

" ನಿಮ್ಮ ಮನಸ್ಸನ್ನೇ ಕೇಳಿ ನೋಡಿ."

" ಇರುತ್ತೇನೆಂದರೂ ಕೋಪ ಹೋಗದೆ ?"

" ಇಲ್ಲ, ಇನ್ನು ಕೋಪವಿಲ್ಲ."

" ಹಾಗಾದರೆ ಕೋಪ ಬಂದಿದ್ದುದು ನಿಜ ಎಂದು ಒಪ್ಪಿಕೊಂಡ ಹಾಗಾಯಿತು ?"

ಎಂದ. ಲಲಿತ ಸಣ್ಣದಾಗಿ ನಕ್ಕಳು. ದುಗುಡದ ಮೋಡ ಜಾರಿತ್ತು. ಒಂದು ಕ್ಷಣ ಬಿಟ್ಟು,

" ನಿಮಗೊಂದು ಮಾತು ಹೇಳಬೇಕೆನ್ನಿಸುತ್ತಿದೆ, ಹೇಳಲೆ ?"

" ಹೇಳಿ, ಸಂಕೋಚವೇಕೆ ?"

" ನೀವು ದಯವಿಟ್ಟು ನನ್ನನ್ನು ಬಹುವಚನದಲ್ಲಿವ ಾತಾಡಿಸಬಾರದು "

" ಏಕೆ, ಈಗಲೇ ಅಷ್ಟು ಸ್ವಾತಂತ್ರ್ಯ ಕೊಟ್ಟುಬಿಡುತ್ತೀರಾ ?"

ಎಂದ. ಅವನ ತೋಳು ಅವಳನ್ನು ಮೃದುವಾಗಿ ಬಳಸಿತು.

" ಏಕಾಗಬಾರದು ?"

ಎಂದು ಲಲಿತ ಸಂತಸದಿಂದ ನಕ್ಕು ನುಡಿದು ತನ್ನ ತಲೆಯನ್ನು ಅವನ ಭುಜಕ್ಕೊರಗಿಸಿದಳು.

ತುಂಬಿಬಂದಿದ್ದ ಒಲುಮೆಯಲ್ಲಿ ಮೌನವೇ ಮಧುರವಾಗಿತ್ತು.

ಕಾರು ಜನಸಂಚಾರ ಹೆಚ್ಚಾಗಿಲ್ಲದಿದ್ದ ರಸ್ತೆಗಳನ್ನೇ ಹುಡುಕಿಕೊಂಡು ಮಂದಗತಿಯಿಂದ ಮುಂದೆ ಸಾಗಿತು.

ಮಧುಸೂದನ ಮಾರನೆಯ ದಿನ ರಾತ್ರಿ ಬೆಂಗಳೂರು ಮೆಯಿಲಿನಲ್ಲಿ ಹೊರಡುವುದಕ್ಕೆ ಸಜ್ಜಾದ. ನಟರಾಜ ಅಯ್ಯರರು ದಿವ್ಯವಾದ ಔತಣ ಮಾಡಿ ಸಿದ್ದರು. ಅವರ ಎಣೆಯಿಲ್ಲದ ಉಪಚಾರಕ್ಕೆ ಎಷ್ಟು ಧನ್ಯವಾದ ಅರ್ಪಿಸಿದರೂ ಅವನಿಗೆ ತೃಪ್ತಿಯಾಗಲಿಲ್ಲ.

ಮಧ್ಯಾಹ್ನ ಅವನು ರೂಮಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾಗ ಲಲಿತ ಕಾಫಿ ತರುವ ನೆವದಲ್ಲಿ ಒಳಗೆ ಬಂದಳು. ಅವಳು ಕಾಫಿಯ ಬಟ್ಟಲನ್ನು ಮೇಜಿನ ಮೇಲಿಟ್ಟು ಕೈತೆಗೆಯುವುದರಲ್ಲಿ ಅವನು ಕಾಲಿನಿಂದ ರೂಮಿನ ಬಾಗಿಲನ್ನು ಮುಂದಕ್ಕೆ ತಳ್ಳಿ ಅವಳನ್ನು ಹತ್ತಿರ ಸೆಳೆದುಕೊಂಡ. ಸಂತೋಷ ಗಾಬರಿಗಳಲ್ಲಿ ಲಲಿತ ತಬ್ಬಿಬ್ಬಾದಳು.

" ಬೇಡ. ಯಾರಾದರೂ ಕಂಡಾರು "

ಎಂದು ಎರಡು ಹೆಜ್ಜೆ ಹಿಮ್ಮೆಟ್ಟಿದಳು. ಕಾಣುವುದಕ್ಕೆ ಅಲ್ಲಿ ಯಾರೂ ಇರಲಿಲ್ಲ. ಅದು ಅವಳಿಗೂ ಗೊತ್ತಿತ್ತು. ಅಯ್ಯರರು ಮುಂದುಗಡೆಯ ರೂಮಿನಲ್ಲಿ

ಮಲಗಿ ಸುಖನಿದ್ರೆಯಲ್ಲಿದ್ದರು. ಮೀನಾಕ್ಷಮ್ಮ ಹಿತ್ತಿಲಕಡೆ ಹೋಗಿದ್ದರು. ಶಿವಸ್ವಾಮಿ ಯಾವ ಸ್ನೇಹಿತನನ್ನೋ ಹುಡುಕಿಕೊಂಡು ಹೊರಟುಹೋಗಿದ್ದ. ಮಧುಸೂದನ ಆಸೆಗೆ ಅಂಕೆ ಹಾಕುತ್ತಿದ್ದರೂ ಅದು ತುಡುಕುತ್ತಿತ್ತು. ಲಜ್ಜಾ ಭರದಿಂದ ದೂರಸರಿದು ಮುಖ ಕೆಂಪಾಗಿ ನಿಂತ ಆ ಚೆಲುವೆಯನ್ನು ಒಣಮಾತಿನ ಉಪಚಾರದಿಂದಲೇ ಕಳಿಸಿ ಬಿಡಲು ಅವನಿಗೆ ಇಷ್ಟವಿರಲಿಲ್ಲ. ಮೆಲ್ಲನೆ ಸಮೀಪಿಸಿ ಅವಳ ಎರಡು ಕೈಗಳನ್ನೂ ಹಿಡಿದುಕೊಂಡ.

"ಕಾಗದ ಬರೆಯುತ್ತೀಯಾ, ಚಿನ್ನ?"

"ಖಂಡಿತವಾಗಿ ಬರೆಯುತ್ತೇನೆ."

"ಮಾತಿಗೆ ತಪ್ಪುವುದಿಲ್ಲವಷ್ಟೆ?"

"ಇಲ್ಲ."

"ನೀನು ಬರೆಯುತ್ತೇನೆಂದು ಮಾತುಕೊಟ್ಟು ಬರೆಯಲು ತಪ್ಪಿದರೆ?"

"ಬರೆಯದಿದ್ದರೆ ನನ್ನ ಮನಸ್ಸು ನಿಲ್ಲುವುದೆ?"

"ನೋಡು, ನೀನು ಬರೆಯದಿದ್ದರೆ ಇನ್ನು ಮೇಲೆ ನಾನು ನಿಮ್ಮ ಮನೆಗೇ ಬರುವುದಿಲ್ಲ."

"ನಾನೂ ಅಷ್ಟೆ. ನೀವು ಕಾಗದ ಬರೆಯದಿದ್ದರೆ ನಿಮ್ಮ ಸ್ನೇಹ ಬಿಟ್ಟು ಬಿಡುತ್ತೇನೆ"

ಎಂದು ತಾಂಬೂಲರಂಜಿತವಾದ ತನ್ನ ತುಟಿಗಳ ಮೇಲೆ ತೋರ ಬೆರಳನ್ನಿಟ್ಟು ತೋರಿಸಿದಳು.

ಹರಿಹಾಯುತ್ತಿದ್ದ ಪ್ರೇಮಭರದಿಂದ ಮಧುಸೂದನ ಅವಳನ್ನು ತನ್ನ ತೋಳತೆಕ್ಕೆಯಲ್ಲಿ ಬಂಧಿಸಿದ.

## ೨೧

ಮದರಾಸ್ – ಕೊಯಮತ್ತೂರು ಕಚೇರಿಗಳ ವಿಚಾರ ಕೇಳಿ ಗುರುಗಳಿಗೆ ತುಂಬ ಹರ್ಷವಾಗಿತ್ತು. ಮಧುಸೂದನ ಪ್ರವಾಸ ಮುಗಿಸಿಕೊಂಡು ಮೈಸೂರಿಗೆ ಹಿಂತಿರುಗಿದ ಕೂಡಲೆ ಮೊದಲು ಗುರುಗಳ ಮನೆಗೆ ಹೋಗಿ ಅವರ ಆರೋಗ್ಯ ವಿಚಾರಿಸಿಕೊಂಡು ಬಂದಿದ್ದ. ಮೊದಲೇ ದುರ್ಬಲವಾಗಿದ್ದ ಅವರ ದೇಹ ಕಾಹಿಲೆಯಿಂದ ತುಂಬ ಬಳಲಿತ್ತು. ಅವರು ಅದನ್ನು ತೋರಗೊಡದೆ ತಮ್ಮನ್ನು ನೋಡಲು ಬಂದವರನ್ನೆಲ್ಲಾ ನಗುಮೊಗದಿಂದಲೇ ಮಾತಾಡಿಸುತ್ತಿದ್ದರು. ಹೆಚ್ಚು ಮಾತಾಡಿ ಆಯಾಸಪಟ್ಟುಕೊಳ್ಳಬಾರದೆಂದು ಡಾಕ್ಟರು ಕಟ್ಟಪ್ಪಣೆ ಮಾಡಿದ್ದರೂ ವಿಶ್ವಾಸದ ಜನ ನೋಡಲು ಬಂದಾಗ ರಾಯರು ಆ ನಿಬಂಧನೆಯನ್ನು ಮುರಿಯ ಬೇಕಾಗಿತ್ತು. ಆಯಾಸಪಟ್ಟುಕೊಳ್ಳಬಾರದೆಂದು ಶಿಷ್ಯರೂ ಎಚ್ಚರಿಕೆ ಕೊಡು ತ್ತಿದ್ದರು. ಇಲ್ಲವೆನ್ನುತ್ತಲೇ ಅವರೂ ಅದನ್ನು ಉಲ್ಲಂಘಿಸುತ್ತಿದ್ದ.

ಗುರುಗಳ ಸ್ಥಿತಿ ಮಧುಸೂದನನಿಗೆ ಚಿಂತೆಯುಂಟುಮಾಡದೆ ಇರಲಿಲ್ಲ. ದಿನಕ್ಕೊಂದು ಸಲವಾದರೂ ಅವರ ಮನೆಗೆ ಹೋಗಿ ಯೋಗಕ್ಷೇಮ ವಿಚಾರಿಸಿ ಕೊಂಡು ಬರದಿದ್ದರೆ ಅವನ ಮನಸ್ಸಿಗೆ ಸಮಾಧಾನವಾಗುತ್ತಿರಲಿಲ್ಲ. ಹೋದಾಗಲೆಲ್ಲಾ ಅವನು ಔಷಧಿ ಪಥ್ಯ ಹಣ್ಣುಹಂಪಲುಗಳ ಏರ್ಪಾಡು ಸಮರ್ಪಕವಾಗಿದೆಯೇ ಎಂದು ನೋಡದೆ ಇರುತ್ತಿರಲಿಲ್ಲ. ಮನೆಗೆ ಹಿಂತಿರುಗಿದರೆ ಅವನಿಗೆ ಅವರದೇ ಯೋಚನೆ. ಇದ್ದಕ್ಕಿದ್ದ ಹಾಗೆ ಗಾಬರಿಪಟ್ಟುಕೊಂಡು, ಹೊತ್ತುಗೊತ್ತೆನ್ನದೆ ಬಂದುಬಿಡುತ್ತಿದ್ದ. ಅವನಿಗಿದ್ದ ಆತಂಕ ಗುರುಗಳಿಗೇ

ಇರಲಿಲ್ಲ. ಅವನು ಒಂದೇ ಸಮನಾಗಿ ಹೀಗೆ ಒದ್ದುಕೊಳ್ಳುವುದನ್ನು ನೋಡಿ ಅವರು ವಾತ್ಸಲ್ಯದಿಂದ,

"ನನಗೇನಾಗಿದೆ ಅಂತ ಗಾಬರಿಪಡುತ್ತೀಯೋ, ಮಗು ?"

ಎನ್ನುತ್ತಿದ್ದರು. ಅವರ ಮಾತಿನಿಂದ ಅವನಿಗೆ ಧೈರ್ಯ ಬರುತ್ತಿರಲಿಲ್ಲ. ಅದು ತನ್ನನ್ನು ಸಮಾಧಾನಪಡಿಸಲು ಅವರಾಡುವ ಮಾತು ಎನ್ನುವುದು ಗೊತ್ತಾಗುತ್ತಿತ್ತು.

ಅವರಿಗೆ ತುಂಬ ಬೇಸರವಾದಾಗ ಶಿಷ್ಯರು ಯಾರಾದರೂ ಹತ್ತಿರ ಕುಳಿತು ಹಾಡುತ್ತಿದ್ದರು. ಮಧುಸೂದನ ಸಮೀಪದಲ್ಲಿದ್ದರೆ ಗುರುಗಳು,

"ಮಧು, ಯಾವುದಾದರೂ ದೇವರನಾಮ ಹಾಡಪ್ಪಾ"

ಎನ್ನುತ್ತಿದ್ದರು. ಅವನು ತಂಬೂರಿ ತೆಗೆದುಕೊಂಡು ಶ್ರುತಿಮಾಡಿ ಅವರಿಗೆ ಪ್ರಿಯವಾದ ಯಾವುದಾದರೂ ಕೀರ್ತನೆ ಹಾಡುತ್ತಿದ್ದ. ಭಕ್ತಿ ವೈರಾಗ್ಯ ಗಳು ತುಂಬಿ ಹರಿಯುತ್ತಿದ್ದ ಆ ಕೃತಿಗಳಿಂದ ಅವರ ಮನಸ್ಸಿಗೆ ಆಪ್ಯಾಯನ ವಾಗುತ್ತಿತ್ತು. ಗಾಯನದಲ್ಲಿ ಸ್ವಲ್ಪ ಹೊತ್ತಾದರೂ ತಲ್ಲೀನರಾಗಿ ದೈಹಿಕ ವೇದನೆಯನ್ನು ಮರೆಯುತ್ತಿದ್ದರು. ಒಂದೊಂದು ಸಲ ಹಾಡು ಕೇಳುತ್ತ ಕಣ್ಣು ಮುಚ್ಚಿ, ಎದೆಯಮೇಲೆ ಎರಡು ಕೈಗಳನ್ನೂ ಜೋಡಿಸಿಟ್ಟುಕೊಂಡು ಮಲಗುತ್ತಿದ್ದ ಅವರಿಗೆ ಹಾಗೆಯೇ ನಿದ್ದೆ ಹತ್ತಿಬಿಡುತ್ತಿತ್ತು. ಮಧು ಹಾಡುವುದನ್ನು ನಿಲ್ಲಿಸಿ ಗುರುಗಳ ಮೈಮೇಲೆ ತೆಳ್ಳಗೆ ಒಂದು ಶಲ್ಯ ಎಳೆದು ಸದ್ದುಮಾಡದೆ ಎದ್ದು ಹೊರಟುಹೋಗುತ್ತಿದ್ದ.

ಬಹು ದಿವಸಗಳಿಂದ ಮಧುಸೂದನನಿಗೆ ತ್ಯಾಗರಾಜರ ಆರಾಧನೆಯ ಹೊತ್ತಿಗೆ ತಿರುವಾಯೂರಿಗೆ ಹೋಗಿ ಬರಬೇಕೆಂಬ ಅಭಿಲಾಷೆಯಿತ್ತು. ಆ ಪುಣ್ಯ ಪುರುಷನ ಜನ್ಮಸ್ಥಳ ಆರಾಧನೆಯ ಕಾಲದಲ್ಲಿ ದಕ್ಷಿಣದ ಸಂಗೀತ ವಿದ್ವಾಂಸರಿಗೆ ಯಾತ್ರಾಸ್ಥಳವಾಗುತ್ತಿತ್ತು. ದೊಡ್ಡ ದೊಡ್ಡ ವಿದ್ವಾಂಸರು ಬಂದು ಗಾನಸೇವೆ ಮಾಡಿ ಹೋಗುತ್ತಿದ್ದರು. ಅಲ್ಲಿ ಹಾಡಲು ಅವಕಾಶ ಸಿಕ್ಕುವುದೇ ಒಂದು ದೊಡ್ಡ ಗೌರವವೆಂದು ಭಾವಿಸಲಾಗಿತ್ತು.

ಬರೀ ಸಂಗೀತಗಾರರೇ ತುಂಬಿಹೋಗಿರುತ್ತಿದ್ದ ಸಭೆಯಲ್ಲಿ ಘನ ವಿದ್ವಾಂಸರುಗಳೆನ್ನಿಸಿದ ಹತ್ತು ಮಂದಿಗೆ ಗಾನಸೇವಾವಕಾಶ ಮಾಡಿಕೊಡು ವುದೂ ಉತ್ಸವ ಸಮಿತಿಯವರಿಗೆ ಕಷ್ಟವಾಗುತ್ತಿತ್ತು. ಮಹಾಮಹಾ ವಿದ್ವಾಂಸ

ರೆನ್ನಿಸಿಕೊಂಡವರಿಗೇ ಕಾಲು ಘಂಟೆ ಅರ್ಧ ಘಂಟೆಗಿಂತ ಹೆಚ್ಚಾಗಿ ಅವಕಾಶ ಸಿಕ್ಕುತ್ತಿರಲಿಲ್ಲ. ಇದರಿಂದ ಒಂದೊಂದು ವೇಳೆ ಸಂಗೀತಗಾರರಲ್ಲೇ ಪೈಪೋಟಿ ಹುಟ್ಟುತ್ತಿತ್ತು. ಬೇರೆ ಸಮಯಗಳಲ್ಲಿ ನೂರಲ್ಲ, ಸಾವಿರ ಕೊಟ್ಟರೂ ಒಂದು ಕಚೇರಿಗೆ ಒಪ್ಪಲು ಬಿಗುಮಾನ ತೋರಿಸುತ್ತಿದ್ದ ಗಾಯಕ ದಿಗ್ದಂತಿಗಳು ಆರಾಧನೆಯ ಸಮಯದಲ್ಲಿ ನಾ ಮುಂದು ತಾ ಮುಂದು ಎಂದು ಗಾನಸೇವೆಗೆ ಸೊಂಟಕಟ್ಟಿ ಸಿದ್ಧರಾಗುತ್ತಿದ್ದುದು ಪ್ರೇಕ್ಷಕರಿಗೆ ನೋಡಲು ಸ್ವಾರಸ್ಯವಾಗಿ ರುತ್ತಿತ್ತು.

ಈ ಸಂಗತಿಯೆಲ್ಲಾ ಮಧುಸೂದನನಿಗೆ ತಿಳಿದಿತ್ತು. ಆರಾಧನೆ ಹತ್ತಿರ ಬಂದ ಹಾಗೆಲ್ಲ ಅವನ ಜೀವ ತಿರುವಾಯೂರು ಯಾತ್ರೆ ಮಾಡಲು ತುಡಿದು ಕೊಳ್ಳಲಾರಂಭಿಸಿತು. ಆದರೆ ಗುರುಗಳು ಹಾಸಿಗೆ ಹಿಡಿದು ಮಲಗಿರುವಾಗ ಹೋಗುವುದಾದರೂ ಹೇಗೆ ಎಂಬ ಚಿಂತೆ ಅವನನ್ನು ಬಾಧಿಸುತ್ತಿತ್ತು. ಈ ಮೂಕಸಂಕಟವನ್ನು ಒಳಗೇ ಅನುಭವಿಸಿ ಸಾಕಾಗಿ ಸುಮ್ಮನಿರಲಾರದೆ ಸಂಜೀವಯ್ಯನ ಹತ್ತಿರ ತೋಡಿಕೊಂಡ. ಮಧುಸೂದನನಷ್ಟು ಕಳವಳ ಸಂಜೀವಯ್ಯನಿಗಿರಲಿಲ್ಲ.

" ಅಷ್ಟು ಹೋಗಬೇಕೆಂದು ಮನಸ್ಸಿದ್ದರೆ ಹೋಗಿ ಬಾ. ಏನೂ ಭಯವಿಲ್ಲ " ಎಂದು ಸಂಜೀವಯ್ಯ ನುಡಿದ.

" ಅವರು ಹೀಗೆ ಮಲಗಿರುವಾಗ ಹೇಗೆ ಹೋಗುವುದು ಎಂದು ಯೋಚಿಸು ತ್ತಿದೇನೆ."

" ಗುರುಗಳ ಸ್ಥಿತಿ ನೀನು ಭಾವಿಸಿರುವಷ್ಟು ಕಳವಳಕರವಾಗಿಲ್ಲ."

" ನಾನು ಹೋದಾಗ ಏನಾದರೂ ಹೆಚ್ಚು ಕಡಮೆ ಆದರೆ ?"

" ಏಕೆ, ನಾನಿಲ್ಲವೇ ?"

" ಒಂದು ವೇಳೆ ಅವರಿಗೆ ಕಾಹಿಲೆ ಹೆಚ್ಚಾದರೆ ನನಗೆ ಕೂಡಲೆ ಟೆಲಿಗ್ರಾಂ ಕೊಡುವಿರಾ ?"

" ನಿನಗೆ ತಿಳಿಸದೆ ಇರುತ್ತೇನೆಯೆ ? ಆ ಯೋಚನೆ ಇಟ್ಟುಕೊಳ್ಳಬೇಡ. ಹೋಗುವ ಹಾಗಿದ್ದರೆ ನಿರಾತಂಕವಾಗಿ ಹೋಗಿ ಬಾ. ಗುರುಗಳ ಯೋಗಕ್ಷೇಮ ನನಗಿರಲಿ "

ಎಂದು ಸಂಜೀವಯ್ಯ ಭರವಸೆಯಿತ್ತ. ತೂಗುತ್ತಿದ್ದ ಮಧುಸೂದನನ ಮನಸ್ಸು ಸ್ವಲ್ಪ ನೆಮ್ಮದಿಗೆ ಬಂದಿತು.

ಇನ್ನು ಗುರುಗಳಿಗೆ ಹೇಳಿ ಅವರ ಅಪ್ಪಣೆ ಪಡೆಯುವುದು ಒಂದುಳಿದಿತ್ತು. ಹೋಗು ಎನ್ನುತ್ತಾರೋ, ಬೇಡ ಎನ್ನುತ್ತಾರೋ ಎಂಬ ಶಂಕೆಯೂ ಸ್ವಲ್ಪಮಟ್ಟಿಗೆ ಬಾಧಿಸುತ್ತಿತ್ತು. ಅವರು ಅನುಮಾನಿಸಿದರೆ ಪ್ರವಾಸ ನಿಲ್ಲಿಸಿಯೇ ಬಿಡುವುದೆಂದು ತೀರ್ಮಾನಿಸಿದ್ದ. ಅಳುಕುತ್ತಲೇ ಅವರ ಕಿವಿಯ ಮೇಲೆ ಸುದ್ದಿ ಹಾಕಿದ.

ಸುದ್ದಿ ಕೇಳಿ ಅವರ ಮುಖ ಒಂದು ಕ್ಷಣ ಗಂಭೀರವಾಯಿತು. ಆದರೆ ಮರುಕ್ಷಣವೇ ಮುಗುಳ್ನಗೆ ಅವರ ತುಟಿಯಂಚಿನಲ್ಲಿ ಕಾಣಿಸಿಕೊಂಡಿತು.

" ಹೋಗಿಬಿಟ್ಟು ಬಾ ಮಗು. ಧಾರಾಳವಾಗಿ ಹೋಗಿಬಿಟ್ಟು ಬಾ "

ಎಂದು ನುಡಿದು ಕ್ಷಣಕಾಲ ಅವನನ್ನೇ ದಿಟ್ಟಿಸಿ ನೋಡಿದರು. ಮಧು ಸೂದನನ ಮನಸ್ಸಿನಲ್ಲಿ ಏನೋ ಕಸಿವಿಸಿಯಾಯಿತು.

" ತಾವು ಅಪ್ಪಣೆ ಕೊಟ್ಟರೆ ಹೋಗಿ ಬರಬೇಕೆಂದಿದ್ದೇನೆ. ಹೀಗೆ ಕಾಹಿಲೆ ಮಲಗಿರುವವಾಗ ಹೇಗೆ ಹೋಗುವುದೆಂದು ನಾನೂ ಯೋಚಿಸುತ್ತಲೇ ಇದ್ದೆ."

" ನನಗೇನೂ ಕಾಹಿಲೆಯಿಲ್ಲ, ನೀನು ಗಾಬರಿಯಾಗಬೇಡ ಅಂತ ಅವತ್ತೇ ಹೇಳಲಿಲ್ಲವೆ ? ನೀನು ವೃಥಾ ಗಾಬರಿಪಟ್ಟುಕೊಳ್ಳುತ್ತಿದ್ದೀ. ಯಾವ ಯೋಚ ನೆಯೂ ಇಲ್ಲದೆ ಹೋಗಿ ಆರಾಧನೆ ನೋಡಿಕೊಂಡು ಬಾ. ಸಂಗೀತಗಾರನಾದವನು ಜನ್ಮದಲ್ಲಿ ಒಂದು ಸಲವಾದರೂ ಅಲ್ಲಿಗೆ ಹೋಗಬೇಕಪ್ಪಾ. ಹೋಗಿ ಕೈಲಾದ ಗಾನಸೇವೆ ಮಾಡಿ ಬಾ. ತ್ಯಾಗರಾಜರ ಕೃಪೆಯಿಂದ ವಿದ್ವನ್ಮಂಡಲಿಯಲ್ಲಿ ನಿನ್ನ ಕೀರ್ತಿ ಬೆಳಗಲಿ. ಅದನ್ನು ಕೇಳಿ ಸಂತೋಷಪಡುವ ಭಾಗ್ಯ ನನ್ನದಾಗಲಿ "

ಎಂದು ತಲೆ ಸವರಿ ಮನಃಪೂರ್ವಕವಾಗಿ ಹರಸಿದರು. ಅವರ ಮಾತು ಕೇಳಿ ಮಧುಸೂದನನ ಕೊರಳಸೆರೆ ಬಿಗಿಯುವ ಹಾಗಾಯಿತು. ಹೆಚ್ಚು ಮಾತಾಡದೆ ಅವರ ಪಾದಮುಟ್ಟಿ ಕಣ್ಣಿಗೊತ್ತಿಕೊಂಡು ಅವರಿಂದ ಬೀಳ್ಕೊಂಡು ಹೊರಟುಬಿಟ್ಟ.

ತಂಜಾವೂರಿಗೆ ಸೇರಿದ ಹಾಗೇ ತಿರುವಾಯೂರು ಗ್ರಾಮ. ಮಧು ಸೂದನ ಮೂರು ದಿನಗಳ ಬಳಿಕ ಅಲ್ಲಿಗೆ ಹೋಗಿ ಇಳಿದಾಗ ಸಂಗೀತಗಾರರು ತಂಡತಂಡವಾಗಿ ಬಂದಿಳಿಯುತ್ತಿದ್ದುದು ಗೋಚರವಾಯಿತು. ದಕ್ಷಿಣದ ಪ್ರಸಿದ್ಧ ವಿದ್ವಾಂಸರನೇಕರು ಬಂದು ಬೇರೆ ಬೇರೆ ಕಡೆ ಬಿಡಾರ ಮಾಡಿದ್ದರು.

ಬೆಂಗಳೂರು ಮೈಸೂರುಗಳಿಂದ ಬಂದಿದ್ದ ಅನೇಕ ವಿದ್ವಾಂಸರು ಒಂದು ಕಡೆ ಇಳಿದಿದ್ದರು. ಅವರಲ್ಲನೇಕರ ಪರಿಚಯ ಮಧುಸೂದನನಿಗಿತ್ತು. ಇದಲ್ಲದೆ ಹಲವಾರು ಕಲಾವಿದರೂ ಭಾಷಣಕಾರರೂ ಬಂದಿದ್ದರು. ಉತ್ಸವದಲ್ಲಿ ಸೇವಾ ಭಾಗಿಗಳಾಗುವ ವಿದ್ವಾಂಸರ ವಿವಿಧ ಕಚೇರಿಗಳನ್ನು ಕೇಳುವ ಕುತೂಹಲದಿಂದ ರಸಿಕಜನರ ದೊಡ್ಡ ಸಮೂಹವೇ ಬಂದು ಸೇರಿತ್ತು. ತಿರುವಾಯೂರು ಜಾತ್ರೆಯ ಕೇಂದ್ರದಂತೆ ಜಗಜಗಿಸುತ್ತಿತ್ತು.

ಆರಾಧನೆಯ ಮೂರು ದಿನಗಳ ಕಾರ್ಯಕಲಾಪಗಳಲ್ಲಿ ಹಾಡಿಕೆ, ವಾದ್ಯ ಸಂಗೀತ, ಹರಿಕಥೆ, ಭಜನೆ ಮುಂತಾದ ಹಲವು ಏರ್ಪಾಡುಗಳು ಸೇರಿದ್ದವು. ಸಂಗೀತಗಾರರ ಯೋಗ್ಯತೆ, ಸ್ಥಾನಮಾನಗಳನ್ನು ಗಮನಿಸಿ ಸೇವಾವಕಾಶಕ್ಕೆ ಏರ್ಪಾಡು ಮಾಡಲಾಗಿತ್ತು. ಎಲ್ಲಾ ವಿದ್ವಾಂಸರಿಗೂ ಹಾಡುವ ಅಥವಾ ವಾದ್ಯ ನುಡಿಸುವ ಅವಕಾಶವಿರಲಿಲ್ಲ. ಉತ್ಸವ ಸಮಿತಿಯ ಕಾರ್ಯದರ್ಶಿ ಗೋವಿಂದ ರಾಜನ್ನರಿಗೆ ವೇಳೆಗಳನ್ನು ಗೊತ್ತುಪಡಿಸುವ ಕೆಲಸದಲ್ಲಿ ಬಿಡುವೇ ಇದ್ದಂತಿರಲಿಲ್ಲ. ದೊಡ್ಡ ವಿದ್ವಾಂಸರ ದಾಕ್ಷಿಣ್ಯವನ್ನು ಅವರು ಕಳೆದುಕೊಳ್ಳುವ ಹಾಗಿರಲಿಲ್ಲ; ಚಿಲ್ಲರೆಯವರ ಕಾಟದಿಂದ ಪಾರಾಗುವ ಹಾಗೂ ಇರಲಿಲ್ಲ.

ಭವ್ಯವಾಗಿ ಹಾಕಿಸಿದ್ದ ಚಪ್ಪರದಲ್ಲಿ ಒಂದು ಕಡೆ ಸೀತಾ ಲಕ್ಷ್ಮಣ ಆಂಜ ನೇಯ ಸಮೇತನಾದ ಶ್ರೀರಾಮಚಂದ್ರನ ಮೂರ್ತಿ ಪ್ರಮಾಣದ ಪಟವನ್ನಿಟ್ಟು ಅದನ್ನು ಹೂಮಾಲೆಗಳಿಂದ ಅಲಂಕರಿಸಿದ್ದರು. ಅದರ ಮುಂದೆ ಜಪಮಾಲೆ ಹಿಡಿದು ರಾಮಧ್ಯಾನಾಸಕ್ತರಾಗಿ ಕುಳಿತಿದ್ದ ತ್ಯಾಗರಾಜರ ತೈಲಚಿತ್ರವನ್ನಿಟ್ಟು ಅದನ್ನು ಹೂವಿನಿಂದ ಅಲಂಕರಿಸಿದ್ದರು ಪಕ್ಕದಲ್ಲೇ ಸಂಗೀತ ಕಾರ್ಯಕ್ರಮ ಗಳಿಗೆ ವೇದಿಕೆ ಸಿದ್ಧವಾಗಿತ್ತು.

ಮೊದಲನೆಯ ದಿನ ಅರಿಯೂಕುಡಿ ರಾಮಾನುಜ ಅಯ್ಯಂಗಾರ್, ಶಮ್ಮಂಗುಡಿ ಶ್ರೀನಿವಾಸ ಅಯ್ಯರ್, ಮುಸಿರಿ ಸುಬ್ರಹ್ಮಣ್ಯ ಅಯ್ಯರ್ ಮುಂತಾ ದವರ ಗಾನಸೇವೆ, ರಾಜರತ್ನಂ ಪಿಳ್ಳೆಯವರ ನಾಗಸ್ವರ, ಕೀರ್ತನಾಚಾರ್ಯ ಅಳಗಿರಿ ಭಾಗವತರ ಹರಿಕಥಾ ಕಾಲಕ್ಷೇಪ ಮುಂತಾದ ಕಾರ್ಯಕ್ರಮಗಳಾದವು. ಪ್ರೊ|| ಸಾಂಬಮೂರ್ತಿಗಳು ತ್ಯಾಗರಾಜರ ಜೀವನವನ್ನು ಕುರಿತು ವಿದ್ವತ್ಪೂರ್ಣ ವಾಗಿ ಭಾಷಣ ಮಾಡಿದರು.

ಎರಡನೆಯ ದಿನಕ್ಕೆ ವಿದ್ವಾಂಸರ ಇನ್ನೊಂದು ಪಟ್ಟಿ ಗಾನಸೇವೆಗೆ ಸಿದ್ಧವಾಗಿತ್ತು.

ಈ ಮಹಾಸಾಗರದಲ್ಲಿ ತಾನೊಂದು ಬಿಂದುವೆಂದು ಮಧುಸೂದನನಿಗೆ ಭಾಸವಾಯಿತು. ಈ ವಿದ್ವಾಂಸರ ವಿಜೃಂಭಣೆಯಲ್ಲಿ ತನಗೆ ಸೇವಾವಕಾಶ ಸಿಕ್ಕುವ ಅವಕಾಶವಿಲ್ಲವೆಂಬುದನ್ನು ಅವನು ಖಂಡಿತ ಮಾಡಿಕೊಂಡಿದ್ದ. ಆರಾಧನೆಯಲ್ಲಿ ಭಾಗವಹಿಸಿದ್ದೇನೋ ಆಗಿತ್ತು. ಆದರೆ ಹಾಡದೆಯೆ ಹಿಂತಿರುಗಿ ಹೋಗಬೇಕಲ್ಲಾ ಎಂದು ಮನಸ್ಸು ಕಿರಿಕಿರಿಪಡುತ್ತಿತ್ತು. ಎಷ್ಟೋ ಜನ ಚಿಲ್ಲರೆ ವಿದ್ವಾಂಸರು ಕಾರ್ಯದರ್ಶಿಗೆ ಕೈತೋರಿಸಿ ಅವಲಕ್ಷಣವೆನ್ನಿಸಿಕೊಂಡು ಬರುತ್ತಿದ್ದುದನ್ನು ಮಧುಸೂದನ ನೋಡುತ್ತಲೇ ಇದ್ದ.

ಹಲವು ಸಂಗೀತಗಾರರ ಬಿಡುವಿಲ್ಲದ ಕಾರ್ಯಕ್ರಮದೊಡನೆ ಎರಡನೆಯ ದಿನವೂ ಸಂಭ್ರಮದಿಂದ ಕಳೆದುಹೋಯಿತು.

ಮಧುಸೂದನ ಎರಡು ದಿನವೂ ಸಭೆಗೆ ಬಂದು ಸುಮ್ಮನೆ ಕುಳಿತು ಹೋಗುತ್ತಿದ್ದುದನ್ನು ಒಬ್ಬ ವಿದ್ವಾಂಸರು ಗಮನಿಸುತ್ತಿದ್ದರು. ಮೂರನೆಯ ದಿನ ಆರಾಧನೆಯ ಕಾರ್ಯಕ್ರಮ ಆರಂಭವಾಗುವ ಮುನ್ನ ಅವರು ಮಧುಸೂದನನನ್ನು ಚಪ್ಪರದ ಹೊರಗೆ ಭೇಟಿಯಾದರು.

"ನೀವು ಮೈಸೂರಿನ ಮಧುಸೂದನರಲ್ಲವೆ?"

"ಹೌದು ಸ್ವಾಮಿ. ತಾವು ಯಾರೋ ಗೊತ್ತಾಗಲಿಲ್ಲ."

"ನನ್ನ ಹೆಸರು ಅನಂತಶಾಸ್ತ್ರಿ. ಮದರಾಸು ಸ್ಥಳ."

"ನನ್ನನ್ನು ತಾವು ಬಲ್ಲಿರಾ?"

"ರಸಿಕರಂಜಿನೀ ಸಭೆಯಲ್ಲಿ ನಿಮ್ಮ ಕಚೇರಿಯಾದ ದಿನ ಬಂದಿದ್ದೆ."

"ತುಂಬ ಸಂತೋಷ."

"ಇವೊತ್ತು ನಿಮ್ಮ ಸೇವೆ ಉಂಟಲ್ಲವೆ?"

"ಇಲ್ಲ ದೇವರು. ಆ ಪುಣ್ಯ ಕೇಳಿಕೊಂಡು ಬರಲಿಲ್ಲ."

"ಏಕೆ, ಇದೆಯೆಂದು ನಾನು ತಿಳಿದಿದ್ದೆನಲ್ಲ?"

ಎಂದು ಆಶ್ಚರ್ಯ ವ್ಯಕ್ತಪಡಿಸಿದರು. ಮಧುಸೂದನ ಸಂಗತಿ ತಿಳಿಸಿದ ೀಲೆ ಶಾಸ್ತ್ರಿಗಳ ಮುಖದ ಮೇಲೆ ವಿಷಾದದ ಗೆರೆ ಮೂಡಿತು.

"ನೀವು ತಪ್ಪು ತಿಳಿದುಕೊಂಡಿರುವಿರೆಂದು ಕಾಣುತ್ತದೆ. ಯೋಗ್ಯ ವಿದ್ವಾಂಸರೆಲ್ಲರಿಗೂ ಸೇವಾವಕಾಶವುಂಟು. ಸ್ವಲ್ಪ ತಾಳಿ, ಬರುತ್ತೇನೆ"

ಎಂದು ಗಡಿಬಿಡಿಯಿಂದ ಹೊರಟುಹೋದರು. ಮಧುಸೂದನ ಅವರು ಹೋದ ದಿಕ್ಕನ್ನೇ ನೋಡಿ ನಿಟ್ಟುಸಿರು ಬಿಟ್ಟುಚಪ್ಪರದೊಳಗೆ ಬಂದು ಹಿಂಭಾಗ ದಲ್ಲಿ ಒಂದು ಕಡೆ ಕುಳಿತುಕೊಂಡ.

ಗಾನಸೇವೆ ಆರಂಭವಾಗಿ ಒಂದು ಘಂಟೆಯ ಹೊತ್ತಾಗಿತ್ತು. ಸಭೆಯಲ್ಲಿ ಜನ ಕಿಕ್ಕಿರಿದುಬಿಟ್ಟದ್ದರು. ಒಬ್ಬ ವಿದ್ವಾಂಸರ ಕಾರ್ಯಕ್ರಮವಾದ ಮೇಲೆ ಇನ್ನೊಬ್ಬ ವಿದ್ವಾಂಸರು ವೇದಿಕೆಗೆ ಬಂದು ಕೂಡುತ್ತಿದ್ದರು. ಸಂಗೀತ ಸುಧೆ ನಿರರ್ಗಳವಾಗಿ ಹರಿಯುತ್ತಿತ್ತು. ಮಧುಸೂದನ ಸಭೆಯ ಸುತ್ತ ಒಮ್ಮೆ ಕಣ್ಣು ಹಾಯಿಸಿ ನೋಡಿದ. ಎಲ್ಲೂ ಅನಂತಶಾಸ್ತ್ರಿಗಳ ಸುಳುವು ಕಾಣಲಿಲ್ಲ. ಪರಿಮಳ ಧೂಪಗಳಿಂದ ವಿರಾಜಿಸುತ್ತಿದ್ದ ಶ್ರೀರಾಮನ ಮತ್ತು ತ್ಯಾಗರಾಜರ ಪಟಗಳನ್ನೇ ನೋಡುತ್ತ ಅವನು ಸುಮ್ಮನೆ ಕುಳಿತ. ಮನಸ್ಸು ವ್ಯಾಕುಲಗೊಂಡಿತ್ತು.

ಇದ್ದಕ್ಕಿದ್ದ ಹಾಗೆ ಹಿಂದಿನಿಂದ ಯಾರೋ ಬೆನ್ನ ಮೇಲೆ ಕೈಯಿಟ್ಟ ಹಾಗಾಯಿತು. ತಿರುಗಿ ನೋಡಿದ. ಅನಂತಶಾಸ್ತ್ರಿ.

"ಬನ್ನಿ"

ಎಂದು ಮಧುಸೂದನನ್ನು ಎಬ್ಬಿಸಿ ತಮ್ಮ ಜೊತೆಯಲ್ಲಿ ಕರೆದೊಯ್ದರು.

ಕಾರ್ಯದರ್ಶಿ ಗೋವಿಂದರಾಜನ್ ಹೊರಗೆ ಕಾದಿದ್ದರು. ಮಧುಸೂದನ ಹತ್ತಿರ ಬಂದಕೂಡಲೇ ಅವನ ಎರಡು ಕೈಗಳನ್ನೂ ವಿಶ್ವಾಸದಿಂದ ಹಿಡಿದುಕೊಂಡು,

"ಹಾಡುವುದಕ್ಕೆ ಇಷ್ಟು ಸಂಕೋಚಪಟ್ಟುಕೊಳ್ಳಬೇಕೆ? ನಿಮ್ಮಂಥ ವಿದ್ವಾಂಸರ ಗಾನಸೇವೆಗೆ ಅಡ್ಡಿಯೆ?"

ಎಂದರು. ಮಧು ತನ್ನ ತಪ್ಪು ಕಲ್ಪನೆಗಾಗಿ ವಿಷಾದಿಸಿದ.

"ಮುಂದಿನ ಕಾರ್ಯಕ್ರಮ ನಿಮ್ಮದಾಗಲಿ"

ಎಂದು ಗೋವಿಂದರಾಜನ್ ಸೂಚಿಸಿದರು.

"ಎಷ್ಟು ಅವಧಿ ದಯಪಾಲಿಸಿರುವಿರಿ?"

"ದಯಪಾಲಿಸುವವನು ಶ್ರೀರಾಮ. ನಮ್ಮ ಕೈಯಲ್ಲೇನಿದೆ? ಸಾಮಾನ್ಯ ವಾಗಿ ಸೇವೆಗೆ ಅರ್ಧಘಂಟೆ, ಒಂದು ಘಂಟೆ ಹೀಗೆ ನಿಗದಿ ಮಾಡುತ್ತಿದ್ದೇವೆ.

ಇಲ್ಲದಿದ್ದರೆ ಕಾರ್ಯಕ್ರಮಗಳು ನಮ್ಮ ಹತೋಟಿಗೆ ಸಿಕ್ಕುವುದಿಲ್ಲ. ಹಲವು ವಿದ್ವಾಂಸರು ಸೇವೆ ಸಲ್ಲಿಸಲು ಕಾದಿರುತ್ತಾರೆ. ಕಾಲದ ವಿಷಯ ಸ್ವಲ್ಪ ಹೆಚ್ಚು ಕಡಮೆ ನೋಡಿಕೊಂಡರಾಯಿತು, ಅಷ್ಟೆ. ಅದನ್ನೇ ತುಂಬ ಮನಸ್ಸಿಗೆ ಹಚ್ಚಿ ಕೊಳ್ಳಬೇಡಿ"

ಎಂದು ಧೈರ್ಯವಿತ್ತರು. ಮಧುಸೂದನನ ಮನಸ್ಸು ನಿರಾಳವಾಯಿತು.

ಒಬ್ಬ ವಿದ್ವಾಂಸರು ತಮ್ಮ ಸೇವೆ ಮುಗಿಸಿ ವೇದಿಕೆ ಬಿಟ್ಟು ಇಳಿದಿದ್ದರು. ಮುಂದಿನ ಸರದಿ ಮಧುಸೂದನನದಾಗಿತ್ತು. ಗೋವಿಂದರಾಜನ್ ಅವನನ್ನು ಕರೆದುಕೊಂಡು ಬಂದು ವೇದಿಕೆಯ ಬಳಿ ಬಿಟ್ಟರು. ಪಿಟೀಲು ನುಡಿಸಲು ಕುಂಭಕೋಣಂ ವೆಂಕಟಸುಬ್ಬಯ್ಯ, ಮೃದಂಗಕ್ಕೆ ಕೊಚಿನ್ನಿನ ಕುಂಜುನಾಯರ್ ಸಿದ್ಧವಾಗಿದ್ದರು. ಇಬ್ಬರೂ ಘನ ವಿದ್ವಾಂಸರು.

ಮಧುಸೂದನ ವೇದಿಕೆಯನ್ನೇರಿ ಸಭೆಗೆ ಕೈಮುಗಿದು ಕುಳಿತ. ಪಕ್ಕ ವಾದ್ಯಗಾರರು ಅವನ ಪಕ್ಕದಲ್ಲಿ ಮಂಡಿಸಿ ವಾದ್ಯಗಳನ್ನು ಶ್ರುತಿಮಾಡಿ ಕೊಂಡರು.

ಕಲ್ಯಾಣಿ ರಾಗದ 'ವನಜಾಕ್ಷಿ' ವರ್ಣದಿಂದ ಪ್ರಾರಂಭ. ಮಧುಸೂದನ ಮೂರು ಕಾಲಗಳಲ್ಲಿಯೂ ಬಿಗಿಯಾಗಿ ಹಾಡಿ, ನವೀನವಾದ ಶೈಲಿಯಲ್ಲಿ ಸ್ವರ ಹಾಕಿದ. ಅನಂತರ ಹಂಸಧ್ವನಿಯ 'ವಾತಾಪಿ ಗಣಪತಿಂ' ತೆಗೆದುಕೊಂಡು ಅದರ ಸಾಹಿತ್ಯದ ಪ್ರೌಢಿಮೆ, ಚೌಕವಾದ ಸ್ವರವಿನ್ಯಾಸ ಮನಸ್ಸಿಗಿಳಿಯುವಂತೆ ಹಾಡಿದ. ಆಮೇಲೆ ತ್ಯಾಗರಾಜರ ಕೃತಿಗಳನ್ನಾರಿಸಿಕೊಂಡು ಹುಸೇನಿಯಲ್ಲಿ 'ರಾಮಾ ನಿನ್ನೇ ನಮ್ಮಿನಾನುರಾ' ಗೌಳದಲ್ಲಿ 'ತೆರತೀಯಗರಾದಾ' ಖರ ಹರಪ್ರಿಯದಲ್ಲಿ 'ರಾಮಾನೀಯಡಾ' ಕೃತಿಗಳನ್ನು ಭಾವವ್ಯಂಜಕವಾಗಿ ಹಾಡಿದ.

ಅರ್ಧ ಮುಕ್ಕಾಲು ಘಂಟೆ ಕಳೆದುಹೋಗಿತ್ತು. ಮಧು ಕನ್ನಡ ರಾಗ ವನ್ನು ಆಲಾಪನೆಗೆ ತೆಗೆದುಕೊಂಡು ಬಹು ಇಂಪಾಗಿ ಆಲಾಪಿಸುತ್ತ, ಒಂದು ಆವರ್ತವನ್ನು ಪಿಟೀಲಿಗೆ ತನಿ ಬಿಟ್ಟು ಕಾರ್ಯದರ್ಶಿಯಿದ್ದಾರೇನೋ ಎಂದು ಹಿಂದೆ ತಿರುಗಿ ನೋಡಿದ. ಗೋವಿಂದರಾಜನ್ನರ ಸುಳುವು ಎಲ್ಲೂ ಕಾಣಿಸಲಿಲ್ಲ. ಸಭೆ ನಿಶ್ಶಬ್ದವಾಗಿ ಆಲಿಸುತ್ತ ಕುಳಿತಿತ್ತು. ಉತ್ಸವ ಸಮಿತಿಯ ಕಾರ್ಯ ಚಾಲಕ ಸಿಬ್ಬಂದಿಯವರೂ ತಮ್ಮ ಓಡಾಟ ನಿಲ್ಲಿಸಿಬಿಟ್ಟು ಎಲ್ಲೆಂದರೆ ಅಲ್ಲೇ ನಿಂತು ಕೇಳುತ್ತಿದ್ದರು.

ಮಧುಸೂದನನಿಗೆ ಆಲಾಪನೆಯ ತರುವಾಯ ಅದರ ಮುಂದಿನ ಕೃತಿ ಹಾಡಿ ಸೇವೆ ಮುಗಿಸಬೇಕೋ ಅಥವಾ ಇನ್ನೂ ಮುಂದುವರಿಸಬೇಕೋ ಎನ್ನುವುದು ಗೊತ್ತಾಗಲಿಲ್ಲ. ತಾನು ಹೆಚ್ಚು ಹೊತ್ತು ಬಳಸಿಕೊಂಡುಬಿಟ್ಟಿರಬಹುದೆಂಬ ಆತಂಕ ಅವನ ಮುಖದಲ್ಲಿ ಮೂಡಿತು. ದಟ್ಟವಾಗಿ ಸುತ್ತಲೂ ಆವರಿಸಿರುವ ಅರಣ್ಯದಲ್ಲಿ ಮುಂದೆ ಎಲ್ಲಿ ಹೋಗಬೇಕೆಂದು ಅರಿಯದೆ ಪಥಿಕ ಭ್ರಾಂತನಾಗಿ ನಿಲ್ಲುವಂತೆ ಕನ್ನಡ ರಾಗದ ಒಂದು ಆವರ್ತ ಮುಟ್ಟಿದ ಅವನ ಮನಸ್ಸು ಮುಂದೆ ಹೋಗಲು ಶಂಕಿಸುತ್ತ ನಿಂತುಬಿಟ್ಟಿತು. ಅವನು ಗಾಂಧಾರದಲ್ಲಿ ನಿಲ್ಲಿಸಿದ ಆ ಒಂದು ನುಡಿಕಾರವನ್ನೇ ವೆಂಕಟಸುಬ್ಬಯ್ಯ ಹಿತವಾಗಿ ತಂತಿಯಲ್ಲಿ ಜಪಿಸುತ್ತಿದ್ದರು.

ಗಾಯಕನ ಮನಸ್ಸಿನ ಭವ ಮುಂದುಗಡೆಯ ಸಾಲಿನಲ್ಲಿ ಮಂಡಿಸಿದ್ದ ಘನ ವಿದ್ವಾಂಸರಲ್ಲಿ ಅ ನೇ ಕ ರಿ ಗೆ ಅರ್ಥವಾಗಿಹೋಯಿತು. ಅವರಲ್ಲೊಬ್ಬ ಹಿರಿಯ ವಿದ್ವಾಂಸರು ಎದ್ದು ನಿಂತು,

"ಆತಂಕಕ್ಕೆ ಕಾರಣವಿಲ್ಲ. ಸೇವ ನಡೆಯಲಿ"

ಎಂದು ಸೂಚಿಸಿ ಕುಳಿತರು. ಅಕ್ಕಪಕ್ಕದ ಹತ್ತಾರು ಕಂಠಗಳು ಅದನ್ನೇ ಅನುಮೋದಿಸಿದವು. ಕಚೇರಿ ಮುಂದೆ ಸಾಗಿತು. ಮಧುಸೂದನ ರಾಗವನ್ನು ಘನವಾಗಿ ಪೋಷಿಸಿ, ದಿವ್ಯವಾದ ಒಂದು ಕೃತಿ ಹಾಡಿದ. ಆಮೇಲೆ ಒಂದು ಸಂಸ್ಕೃತ ಶ್ಲೋಕವನ್ನು ಅರ್ಥವತ್ತಾಗಿ ಅಪರೂಪವಾದ ನಾಲ್ಕು ರಾಗಗಳಲ್ಲಿ ಹಾಡಿದ. ಮಂಗಳದೊಡನೆ ಹಾಡಿಕೆ ಮುಗಿಸುವ ಹೊತ್ತಿಗೆ ಒಂದೂವರೆ ಘಂಟೆಗೆ ಮೇಲ್ಪಟ್ಟು ಗಾನಸೇವೆ ನಡೆದಿತ್ತು. ಮಧುಸೂದನ ಸಭೆಗೆ ಕೈಮುಗಿದು ಮೇಲಕ್ಕೆದ್ದಾಗ ಪ್ರಚಂಡ ಕರತಾಡನವಾಯಿತು. ಗೋವಿಂದರಾಜನ್ ಪಕ್ಕದಲ್ಲೇ ಬಂದು ನಿಂತಿದ್ದರು. ಮಧು ವೇದಿಕೆಯಿಂದಿಳಿದ ಕೂಡಲೆ ಅವರು ಅವನ ಕೈಹಿಡಿದು ಚಪ್ಪರದ ಒಳಮನೆಗೆ ಕರೆದೊಯ್ದರು. ಸಿಬ್ಬಂದಿಯವನೊಬ್ಬ ಬೆಳ್ಳಿಯ ಲೋಟದಲ್ಲಿ ಹದವಾಗಿ ಕಾಯಿಸಿದ್ದ ಕೇಸರಿ ಹಾಲನ್ನು ತಂದಿತ್ತ.

"ತೆಗೆದುಕೊಳ್ಳಿ, ದಣಿದಿದ್ದೀರಿ"

ಎಂದು ಗೋವಿಂದರಾಜನ್ ಉಪಚಾರ ಹೇಳಿದರು.

"ಈ ಅಲ್ಪ ಸೇವೆಗೆ ದಣಿವೆಂದರೇನು ?"

"ದಣಿವಾಗಿರುವುದು ನಿಜ. ಆದರೆ ಸೇವೆ ಅಲ್ಪವಲ್ಲ"

" ಅಷ್ಟಕ್ಕೂ ಅವಕಾಶ ಮಾಡಿಕೊಟ್ಟದ್ದು ತಮ್ಮ ಔದಾರ್ಯ "

" ಹಾಡಿಕೆ ಇಷ್ಟು ದಿವ್ಯವಾಗಿರುತ್ತಿತ್ತೆಂದು ತಿಳಿದಿದ್ದರೆ ನಮ್ಮ 'ಔದಾರ್ಯ'ವನ್ನು ಮೊದಲಲೆಯ ದಿನವೇ ಇನ್ನಷ್ಟು ಚೆನ್ನಾಗಿ ಪ್ರಕಾಶಪಡಿಸಿ ಲಾಭ ಪಡೆದುಕೊಳ್ಳಬಹುದಾಗಿತ್ತು "

ಎಂದು ಗೋವಿಂದರಾಜನ್ ನುಡಿದು ನಕ್ಕರು. ಅಷ್ಟು ಹೊತ್ತಿಗೆ ಸಭೆಯಲ್ಲಿ ಕುಳಿತಿದ್ದ ಘನ ವಿದ್ವಾಂಸರು ಒಬ್ಬೊಬ್ಬರಾಗಿ ಮಧುಸೂದನನನ್ನು ಮಾತಾಡಿಸಲು ಹುಡುಕಿಕೊಂಡು ಬರುತ್ತಿದ್ದರು. ಚಪ್ಪರದಲ್ಲೂ ಸಾಕಷ್ಟು ಕೋಲಾಹಲವುಂಟಾಗಿತ್ತು. ಮುಂದಿನ ಕಾರ್ಯಕ್ರಮಗಳನ್ನು ಸಭಿಕರು ಅಷ್ಟಾಗಿ ಗಮನಿಸದೆ ಮಧುಸೂದನನ ಹಾಡಿಕೆ ಕುರಿತು ಚರ್ಚೆ ಆರಂಭಿಸಿಬಿಟ್ಟಿದ್ದರು.

ಮಧುಸೂದನ ಭಾವಿಸಿದಷ್ಟು ಬೇಗ ತಂಜಾವೂರನ್ನು ಬಿಡುವುದು ಸಾಧ್ಯವಾಗಲಿಲ್ಲ. ನಗರದ ಸಂಗೀತ ಸಮಾಜದವರು ಅವನ ಒಂದು ಕಚೇರಿ ಮಾಡಿಸದೆ ಊರಿಗೆ ಕಳಿಸುವುದಿಲ್ಲವೆಂದು ಹಟ ಹಿಡಿದು ಬಲವಂತದಿಂದ ನಿಲ್ಲಿಸಿಕೊಂಡುಬಿಟ್ಟರು. ಈ ಮಸಲತ್ತಿನಲ್ಲಿ ಅನಂತಶಾಸ್ತ್ರಿ, ಗೋವಿಂದರಾಜನ್ನರ ಕೈವಾಡವೂ ಇತ್ತು. ಮಧುಸೂದನನಿಗೆ ತಪ್ಪಿಸಿಕೊಳ್ಳಲು ಬೇರೆ ಮಾರ್ಗವೇ ಇರಲಿಲ್ಲ. ಅವನು ಗೋವಿಂದರಾಜನ್ನರ ಅತಿಥಿಯಾಗಿ ಉಳಿಯಬೇಕಾಯಿತು.

ಆರಾಧನೆ ಮುಗಿದ ಬಳಿಕ ಪರಸ್ಥಳಗಳಿಂದ ಬಂದಿದ್ದ ಸಂಗೀತಗಾರರು ಹೊರಟುಬಿಟ್ಟರು. ನಾಲ್ಕೈದು ದಿನ ಒಂದೇ ಸಮನೆ ಪರಿಶ್ರಮಿಸಿ ಉತ್ಸವವನ್ನು ಯಶಸ್ವಿಗೊಳಿಸಿದ್ದ ತ್ಯಾಗಬ್ರಹ್ಮ ಮಹೋತ್ಸವ ಸಮಿತಿಗೆ ಉಸಿರಾಡಲು ಸ್ವಲ್ಪ ಬಿಡುವು ಸಿಕ್ಕಿತು. ಮಧುಸೂದನನಿಗೆ ಸುತ್ತಣ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿಕೊಂಡು ಬರುವುದರಲ್ಲಿ ಗೋವಿಂದರಾಜನ್ ನಿರತರಾದರು.

## ೨೨

ಸಂಗೀತ ಸಮಾಜದವರು ಕಚೇರಿಯ ಬಗೆಗೆ ವಿಶೇಷ ಪ್ರಚಾರ ಕೈಗೊಂಡಿದ್ದರು. ಈ ಕಾರ್ಯಕ್ರಮವನ್ನು ತಂಜಾವೂರಿನ ರಸಿಕಸಮೂಹವಲ್ಲದೆ ವಿದ್ವನ್ಮಣಿಗಳೂ ಆತುರದಿಂದ ನಿರೀಕ್ಷಿಸುತ್ತಿದ್ದರು. ಪಕ್ಕವಾದ್ಯಕ್ಕೆ ಹೆಸರಾಂತ ವಿದ್ವಾಂಸರನ್ನೇ ಹಿಡಿದಿದ್ದರು. ಮಧುಸೂದನನ ಹಾಡಿಕೆಗೆ ವಾದ್ಯಗಳನ್ನು ನುಡಿಸಲು ಪಾಪವೆಂಕಟರಾಮಯ್ಯ, ಪಾಲಘಾಟ್ ಮಣಿ ಸಂತೋಷದಿಂದ ಒಪ್ಪಿಕೊಂಡಿದ್ದರು. ದಕ್ಷಿಣಾದಿ ಸಂಗೀತದ ಮೂವರು ಘನ ವಿದ್ವಾಂಸರುಗಳ ಕಚೇರಿ ಕೇಳುವ ಅವಕಾಶ ಕಳೆದುಕೊಳ್ಳಬಾರದೆಂದು ತಿಳಿಸಿ ಹೇರಳವಾಗಿ ನೋಟೀಸ್ ಹಂಚಲಾಗಿತ್ತು.

ಕಾರ್ಯಕ್ರಮ ಪೂರ್ತಿ ಯಶಸ್ವಿಯಾಗುವುದೆಂಬುದರಲ್ಲಿ ಗೋವಿಂದರಾಜನ್ನರಿಗಾಗಲಿ, ಅನಂತಶಾಸ್ತ್ರಿಗಳಿಗಾಗಲಿ, ಸಮಾಜದ ಕಾರ್ಯಕರ್ತರಿಗಾಗಲಿ ಸಂದೇಹವೇ ಉಳಿದಿರಲಿಲ್ಲ. ಅವರ ನಿರೀಕ್ಷೆಯನ್ನು ಸಫಲಗೊಳಿಸುವ ಹಾಗೆ ಆ ಸಂಜೆ ನಗರಭವನ ಕಿಕ್ಕಿರಿದು ತುಂಬಿಹೋಯಿತು. ಮುಂದುಗಡೆಯ ಶ್ರೇಣಿ ಗಣ್ಯ ವಿದ್ವಾಂಸರಿಗೂ, ರಸಿಕ ಅಧಿಕಾರಿ ವರ್ಗಕ್ಕೂ ಮೀಸಲಾಗಿತ್ತು. ಉಳಿದ ಭಾಗಗಳನ್ನು ಸಂಗೀತಪ್ರಿಯಸಮೂಹ ಆವರಿಸಿಬಿಟ್ಟಿತು. ಎಷ್ಟೋ ಜನಕ್ಕೆ ಸ್ಥಳಾವಕಾಶ ಸಿಕ್ಕದೆ ಅವರು ಸಭಾಮಂದಿರದ ಹೊರಗೇ ಧ್ವನಿವರ್ಧಕಗಳನ್ನು ನೆಚ್ಚಿ ಕೂಡಬೇಕಾಯಿತು.

ಸಂಜೆ ಐದೂವರೆಗೆಂದು ಗೊತ್ತಾಗಿದ್ದ ಕಚೇರಿ ಆರಕ್ಕೆ ಆರಂಭವಾಯಿತು.

ಒಳಗೆ ಬರಲವಕಾಶವಿಲ್ಲದೆ ಹೊರಗೆ ಸೇರಿದ್ದ ಜನರನ್ನು ಸಮಾಧಾನಪಡಿಸು ವುದರಲ್ಲೇ ಕಾಲ ವ್ಯಯವಾಗಿತ್ತು.

ಮಧುಸೂದನ ಜನರಂಜಿನೀ ರಾಗದ ವರ್ಣವೊಂದರೊಡನೆ ಹಾಡಿಕೆ ಯನ್ನಾರಂಭಿಸಿದ. ಹಾಡಿಕೆಗೆ ಪೋಷಕವಾಗಿದ್ದ ಪಿಟೀಲು ಮೃದಂಗಗಳ ಪಕ್ಕ ವಾದ ನಡೆಯಿಂದ ವರ್ಣಕ್ಕೆ ರಂಗೇರಿತು ಸ್ವರ ತಾಳಗಳಲ್ಲಿ ಮೂವರಲ್ಲಿ ಯಾರಿಗೆ ಯಾರೂ ಕಡಮೆಯಿಲ್ಲವೆಂಬ ಭಾವನೆ ಶ್ರೋತೃಗಳಿಗೆ ಉಂಟಾಯಿತು. ಗಾಯಕನ ಬನಿಯಾದ ಶಾರೀರದಿಂದ ರಾಗ ಭಾವಗಳು ಹೊಮ್ಮಿಬರುತ್ತಿದ್ದವು.

ವರ್ಣದ ಮುಗಿತಾಯಕ್ಕೇ ಚಪ್ಪಾಳೆ ಬಿದ್ದುದು ಮಧುಸೂದನನ ಉತ್ಸಾಹವನ್ನು ಹೆಚ್ಚಿಸಿತು. ಅವನು ವರಾಳಿಯನ್ನು ಆಲಾಪಿಸಿ ಅದರಲ್ಲಿ ಒಂದು ಕೃತಿ ಹಾಡಿದ. ಆಮೇಲೆ ಎರಡು ಮೂರು ಸಣ್ಣ ಸಣ್ಣ ಕೃತಿಗಳನ್ನು ಹಾಡಿ, ಬಳಿಕ ಒಂದು ನೂತನ ರಾಗವನ್ನು ಆಲಾಪನೆಗೆ ತೆಗೆದುಕೊಂಡ.

ವಾದ್ಯಗಾರರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ತಂತಿಗಳ ಮೇಲೆ ಕಮಾನನ್ನು ಹಾಕುವುದಕ್ಕಿದ್ದ ಪಾಪಾರವರ ಕೈ ಒಂದು ಕ್ಷಣ ಹಾಗೆಯೇ ನಿಂತಿತು. ಅವರು ಮಧುಸೂದನನ ಮುಖ ನೋಡಿ ನಕ್ಕು ವಾದ್ಯ ನುಡಿಸಲು ತೊಡಗಿದರು. ಮಣಿಯವರಂತೂ ಕುತೂಹಲದ ಹುತ್ತವಾಗಿ ಆಲಿಸುತ್ತ ಕುಳಿತರು. ಮುಂದುಗಡೆಯ ಶ್ರೇಣಿಯಲ್ಲಿ ಕುಳಿತಿದ್ದ ವಿದ್ವನ್ಮಣಿಗಳೂ ಒಬ್ಬರ ಕಿವಿಯಲ್ಲೊಬ್ಬರು ಏನೋ ಪಿಸುಗುಟ್ಟಿದರು. ರಸಿಕಜನ ಸದ್ದಿಲ್ಲದೆ ಕುತೂಹಲ ದಿಂದ ಕೇಳುತ್ತ ಕುಳಿತಿದ್ದರು.

ರಾಗ ಅಪೂರ್ವಮಾಧುರ್ಯದಿಂದ ಹೊಮ್ಮತೊಡಗಿತು. ಗಾಯಕನ ಕಂಠದಿಂದ ವಿಶಿಷ್ಟವಾದ ಉರುಟುಗಳು ಧುಮುಕುತ್ತಿದ್ದವು. ಸೂಕ್ಷ್ಮವಾದ ಲಾಲಾತಂತುವಿನಿಂದ ಜೇಡ ರೇಷ್ಮೆಯಂಥ ನವಿರಾದ ಬಲೆ ನೆಯ್ಯುವಂತೆ ಜೀರಾದ ಶಾರೀರ ನಿರಂತರವಾದ ಭಾವತಂತುವನ್ನು ನೆಯ್ಯುತ್ತಿತ್ತು. ವಿಚಿತ್ರ ವಾದ ಛಾಯೆಗಳಿಂದ ಆಲಾಪನೆ ವೃದ್ಧಿಗೊಂಡು ಅನಿರ್ವಚನೀಯವಾದ ಒಂದು ವಾತಾವರಣವನ್ನು ನಿರ್ಮಿಸುತ್ತಿತ್ತು. ರಾಗಭಾವದಲ್ಲಿ ತಲ್ಲೀನರಾಗಿ ಆಲಿಸು ತ್ತಿದ್ದ ವಿದ್ವಜ್ಜನರ ಕುತ್ತಿಗೆ ಭಾವದ ಆಘಾತಕ್ಕೆ ಬಿಗಿದು ಬರುತ್ತಿತ್ತು. ಹರ್ಷವೋ ದುಃಖವೋ ಎಂಬುದು ಅರಿವಾಗದೆ ಮನಸ್ಸು ಯಾವುದೋ ಅತಿರೇಕಕ್ಕೆ ಧಾವಿಸುತ್ತಿತ್ತು. ಹೊಸ ಅನುಭವಕ್ಕೆ ಸಿಕ್ಕಿ ಶ್ರೋತೃಜನದ ಮೈ ನವಿರೇಳುತ್ತಿತ್ತು.

ಒಂದು ಆವರ್ತದಿಂದ ಇನ್ನೊಂದು ಆವರ್ತಕ್ಕೆ, ಒಂದು ಘಟ್ಟದಿಂದ ಇನ್ನೊಂದು ಘಟ್ಟಕ್ಕೆ ರಾಗದ ಸ್ವರೂಪವನ್ನು ಚಿತ್ರವತ್ತಾಗಿ ವಿನ್ಯಾಸ ಮಾಡಿದ ಗಾಯಕ ಆಲಾಪನೆ ಮುಗಿಸಿ ಕೃತಿ ಆರಂಭಿಸಿದಾಗ ಹಲವರ ಕಣ್ಣುಗಳು ಒದ್ದೆಯಾಗಿದ್ದವು.

"ಮಂದ ಮಂದಸ್ಮಿತೇ ಭುವನ ಮೋಹಿನಿ..."

ಮನೋಜ್ಞ ಪದಪುಂಜದಿಂದ ಕೂಡಿದ ಸಾಹಿತ್ಯ ಶ್ರಾವಕರ ಚಿತ್ತವನ್ನು ಸೂರೆಗೊಂಡಿತು. ರಮ್ಯವಾದ ಸ್ವರಜೋಡಣೆ ಬಂಗಾರಕ್ಕೆ ಕುಂದಣ ವಿಟ್ಟಂತಾಯಿತು.

"ಯಾವುದೀ ರಾಗ? ಕೃತಿ ಯಾವುದು?"

ಎಂಬ ಪ್ರಶ್ನೆ ಅರಿತ ಜನರ ನಡುವೆ ಮಥಿಸಲಾರಂಭಿಸಿತು. ಶಾಸ್ತ್ರಜ್ಞಾನ ಸಾಲದ ಜನ ಹಾಡಿಕೆಯ ವಶೀಕರಣಕ್ಕೆ ಮಾರುವೋಗಿ,

"ಏನು ಹಾಡಿಕೆ; ಎಂಥ ಶಾರೀರ"

ಎಂದು ಅಚ್ಚರಿಪಡುತ್ತಿದ್ದರು.

ಇಷ್ಟು ಹೊತ್ತಿಗೆ ಆರೇಳು ಕೃತಿಗಳ ಗಾಯನವಾಗಿರಬಹುದು. ವಾದ್ಯ ಗಾರರಿಗೆ ತನಿ ಬಿಟ್ಟ ತರುವಾಯ ಮಧು ದೇವರನಾಮುಗಳನ್ನು ಹಾಡಲು ಆರಂಭಿಸಿದ. ಪುರಂದರದಾಸರ "ಸಿಕ್ಕಿದ ನೆಲೆ ಜಾಣೆ" "ಬರಿದೆ ಹೋಯಿತು ಹೊತ್ತು" "ಕದವ ಮುಚ್ಚಿದಳಿದಿಕೋ" ಎಂಬ ಕೃತಿಗಳಾದವು.

ಇದ್ದಕ್ಕಿದ್ದ ಹಾಗೆ ಸಭೆಯಲ್ಲಿ ಗದ್ದಲವಾಯಿತು. ಒಂದು ಕಡೆಯಿಂದ ಕೂಗೆದ್ದಿತು.

"ಭಾಗವತರೇ, ಇದು ಮೈಸೂರಲ್ಲ."

"ಕನ್ನಡದ ಸರಕು ಇಲ್ಲಿ ಬಿಚ್ಚಬೇಡಿ."

"ನಿಮ್ಮ ಸಂಗೀತ ಸಾಕುಮಾಡಿ."

ಕರ್ಕಶ ಧ್ವನಿ ಸಿಡಿಲಿನಂತೆ ಬಂದೆರಗಿತು. ಮಧುಸೂದನ ಹಾಡುವುದನ್ನು ನಿಲ್ಲಿಸಿ, ಅವಾಕ್ಕಾಗಿ ಸದ್ದು ಬರುತ್ತಿದ್ದ ಕಡೆಗೆ ನೋಡಿದ. ನಾಲ್ಕೈದು ಮಂದಿ ಯುವಕರು ಎದ್ದು ನಿಂತು ಕೈಬೀಸುತ್ತ ತಮಿಳಿನಲ್ಲಿ ಏನೇನೋ ಒದರುತ್ತಿದ್ದರು.

ಗಲಭೆಗೆ ಕಾರಣವನ್ನರಿಯಲು ಜನರೂ ಒಬ್ಬೊಬ್ಬರಾಗಿ ಎದ್ದು ನಿಲ್ಲುತ್ತಿದ್ದರು. ಸಮಾಜದ ಕಾರ್ಯಕರ್ತರು ಒಬ್ಬಿಬ್ಬರು ಅತ್ತ ಧಾವಿಸಿದರು.

ಕಾರ್ಯದರ್ಶಿ ವೇದಿಕೆಯ ಮೇಲೆ ಬಂದು ನಿಂತು ಜನರು ಸಮಾಧಾನ ದಿಂದ ಕೂಡಬೇಕೆಂದು ಮೈಕ್ ಮೂಲಕ ಪ್ರಾರ್ಥಿಸಿದರು. ಎದ್ದು ನಿಂತಿದ್ದ ಜನ ಕುತೂಹಲದಿಂದ ಗಲಭೆಗೆ ಕಾರಣವನ್ನರಸುತ್ತಿತ್ತು.

ಮಧುಸೂದನನ ಮನಸ್ಸೂ ಗಲಭೆಗೆ ಕಾರಣವನ್ನರಸುತ್ತಿತ್ತು. ಗೊಂದಲ ವೇಕೆಂಬುದನ್ನು ಕಂಡುಹಿಡಿಯಲು ಕಾರ್ಯದರ್ಶಿಯೂ ಪ್ರಯತ್ನಿಸುತ್ತಿದ್ದರು.

ಗಲಭೆ ಹುಟ್ಟಿದ ಸ್ಥಳಕ್ಕೆ ಹೋಗಿದ್ದ ಕಾರ್ಯಕರ್ತರು ಮೂವರು ನಾಲ್ವರು ತಮಿಳರನ್ನು ಪೋಲೀಸರ ನೆರವಿನೊಡನೆ ಹೊರಗೆ ಕಳಿಸಿ ಬಂದರು. ಗೋವಿಂದರಾಜನ್ನರ ಮುಖ ಚಿಕ್ಕದಾಗಿತ್ತು. ಅನಂತಶಾಸ್ತ್ರಿಗಳು ಶಲ್ಯದಿಂದ ಮುಖದ ಬೆವರೊರಸಿಕೊಳ್ಳುತ್ತಿದ್ದರು. ಮಧುಸೂದನ ಶಿಲಾವಿಗ್ರಹದಂತೆ ಕುಳಿತುಬಿಟ್ಟ. ಅವನ ಮನಸ್ಸು ಹಿಂದೆಂದೂ ಕಾಣದ ಸಂಕಟವನ್ನು ಅನುಭವಿಸುತ್ತಿತ್ತು.

"ಏನಂತೆ? ಏಕಂತೆ ಈ ಹೊಯ್ಲು?"

ಎಂದು ಮುಂದುಗಡೆ ಕುಳಿತಿದ್ದ ಅಧಿಕಾರಿಯೊಬ್ಬರು ಕುಪಿತರಾಗಿ ಕೇಳಿದರು.

"ಇನ್ನೈ ಗುಂಪಿನ ಕಿತಾಪತಿ"

ಎಂದು ಯಾರೋ ಉತ್ತರವಿತ್ತರು.

"ಅಯೋಗ್ಯರು, ಶುದ್ಧ ಅಯೋಗ್ಯರು"

ಎಂದು ಸಭ್ಯಜನ ಹಿಡಿ ಶಾಪ ಹಾಕಿತು. ಎರಡೂವರೆ ಘಂಟೆಯ ಕಚೇರಿ ಯಿಂದ ಕಲ್ಪಿತವಾಗಿದ್ದ ಸ್ವಪ್ನಸದೃಶ ಸುಂದರ ವಾತಾವರಣ ಹುಳಿಹಿಂಡಿದ ಹಾಲಿನಂತೆ ಒಡೆದುಹೋಗಿತ್ತು. ಭವ್ಯವಾದ ಗೋಪುರದಂತೆ ನಿರ್ಮಿತವಾಗಿದ್ದ ಮನೋಧರ್ಮ ಭಗ್ನವಾಗಿಹೋಗಿತ್ತು.

ಮಧುಸೂದನ ಒಂದು ಶ್ಲೋಕ ಹಾಡಿದ ಶಾಸ್ತ್ರಮಾಡಿ, ಮಂಗಳ ಹಾಡಿ ಕಚೇರಿ ಮುಗಿಸಿದ. ಹಾಡುತ್ತಿರುವವರು ತಾನೋ ಅಥವಾ ಇನ್ನಾರೋ ಎಂಬ ವಿಸ್ಮೃತಿ ಅವನನ್ನು ಆವರಿಸಿತು.

ಕೃತಜ್ಞತಾರ್ಪಣೆಗೆ ವೃದ್ಧ ವಿದ್ವಾಂಸ ಶೇಷಾಚಲ ಅಯ್ಯಂಗಾರರು ವೇದಿಕೆಯ ಮೇಲೆ ಬಂದು ನಿಂತರು. ಅವರ ಮುಖಭಾವದಿಂದಲೇ ಅವರು ಏನು ಮಾತಾಡಲಿದ್ದಾರೆಂಬುದು ಅರ್ಥವಾಗುತ್ತಿತ್ತು.

" ಇಂದಿನ ಘಟನೆಗೆ ನಾವು ತುಂಬ ವಿಷಾದಪಡಬೇಕಾಗಿದೆ. ವಯಸ್ಸಿನಲ್ಲಿ ಕಿರಿಯರಾದರೂ ಜ್ಞಾನದಲ್ಲಿ ಹಿರಿಯರಾದ ಒಬ್ಬ ವಿದ್ವಾಂಸರನ್ನು ಇಂದು ಕರೆಸಿಕೊಂಡಿದ್ದೇವ. ಅವರ ಹಾಡಿಕೆಯ ಸವಿಯನ್ನು ಸವಿದೂ ಅವರ ವಿದ್ವತ್ತಿಗೆ ಅಪಚಾರ ಮಾಡುವ ಧಾರ್ಷ್ಟ್ಯವನ್ನು ತೋರಿಸಿದ್ದೇವೆ. ಸಂಗೀತದ ಗಂಧ ತಿಳಿಯದ ನಾಲ್ವರು ತಿಳಿಗೇಡಿಗಳಿಂದ ತಂಜಾವೂರಿಗೇ ಅಪಮಾನವಾಗಿದೆ. ಇಂಥ ಅಲ್ಪರು ಎಲ್ಲಾ ಕಡೆಯೂ ಇದ್ದೇ ಇರುತ್ತಾರೆ ಎಂಬುದು ನಾವು ಮಾಡಿ ಕೊಳ್ಳಬೇಕಾಗಿರುವ ಸಮಾಧಾನ. ಈ ಸಮಾಧಾನದ ಮಾತನ್ನೇ ಗಾಯಕರಿಗೆ ಹೇಳಿ ಅವರಿದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದೆಂದು ಬೇಡುತ್ತೇನೆ.

" ನಾನೂ ಮೈಸೂರಿನ ಅತಿಥ್ಯದ ಸವಿಯನ್ನು ಕಂಡಿದ್ದೇನೆ. ಇಂದಿನ ಪಕ್ಕವಾದ್ಯ ವಿದ್ವಾಂಸರಾದ ನಮ್ಮ ಪಾಪಾರವರೂ ಮಣಿಯವರೂ ಕೂಡ ಮೈಸೂರಿನ ಆತಿಥ್ಯದ ರುಚಿ ಬಲ್ಲವರೇ. ನಾವು ಯಾರೇ ಹೋಗಲಿ ಮೈಸೂರಿನ ಜನ ನಯವಿನಯಗಳಿಂದ ನಡೆದುಕೊಂಡಿದ್ದಾರೆ; ನಮ್ಮಲ್ಲಿ ಸೌಜನ್ಯ ತೋರಿಸಿ ದ್ದಾರೆ. ದಕ್ಷಿಣದ ವಿದ್ವಾಂಸರಿಗೆ ಮೈಸೂರು ದೊಡ್ಡ ಆಶ್ರಯವಾಗಿದೆ. ನಮ್ಮ ವಿದ್ವಾಂಸರು ಕನ್ನಡದ ಕೃತಿಗಳನ್ನು ಎಷ್ಟೇ ಅಬದ್ಧವಾಗಿ ಹಾಡಿದರೂ ತಾಳ್ಮೆ ಕಳೆದುಕೊಳ್ಳದೆ ಮೈಸೂರಿನ ರಸಿಕಜನ ಸನ್ಮಾನಿಸುತ್ತ ಬಂದಿರುವುದು ಅವರ ಔದಾರ್ಯಕ್ಕೆ ಒಂದು ಸಾಕ್ಷಿ. ಈ ಮಾತನ್ನು ಈ ವೇದಿಕೆಯಿಂದ ಘಂಟಾ ಘೋಷವಾಗಿ ಹೇಳುತ್ತೇನೆ. ಇಂಥದರಲ್ಲಿ ಇಲ್ಲಿನ ಜನ ಮೈಸೂರಿನ ವಿದ್ವಾಂಸರ ವಿಚಾರದಲ್ಲಿ ಕೃತಘ್ನತೆಯಿಂದ ವರ್ತಿಸಿರುವುದು ಅಕ್ಷಮ್ಯ ಅಪರಾಧವೇ ಸರಿ. ಈ ಅಪರಾಧಕ್ಕಾಗಿ ನಾನು ಈ ಸಭೆಯ ಪರವಾಗಿ, ತಂಜಾವೂರು ನಾಗರಿಕರ ಪರವಾಗಿ ವಿದ್ವಾನ್ ಮಧುಸೂದನರಲ್ಲಿ ಕ್ಷಮೆ ಬೇಡುತ್ತೇನೆ."

ಶೇಷಾಚಲ ಅಯ್ಯಂಗಾರರು ಉದ್ವೇಗದಿಂದ ಮಾತಾಡುತ್ತಿದ್ದರು. ಅವರ ಮನಸ್ಸಿನ ಕುದಿತವನ್ನು ಎತ್ತಿ ತೋರಿಸುವಂತೆ ಮುಖ ಕೆಂಪೇರಿತ್ತು;

ಹಣೆಯ ಮೇಲೆ ಬೆವರು ಹನಿ ಸಾಲಿಡುತ್ತಿತ್ತು. ಆದರೆ ಅವರು ಮಾತನ್ನು ನಿಲ್ಲಿಸುವ ಸ್ಥಿತಿಯಲ್ಲಿದ್ದಂತೆ ಕಾಣಲಿಲ್ಲ.

"ಗಾಯಕರು ಇಂದೊಂದು ಅಪೂರ್ವರಾಗವನ್ನು ಹಾಡಿದರು. ಅದರ ಹೆಸರು 'ಕಲಾವತಿ'–ಅವರೇ ಕಂಡು ಹಿಡಿದಿರುವ ಹೊಸರಾಗ. ವಾಸ್ತವವಾಗಿ ಅದೊಂದು ರಾಗಿಣಿ. ಮೈನವಿರೇಳುವಂತೆ ಅದ್ಭುತರಸವನ್ನು ಪ್ರತಿಪಾದಿಸುವ ಆ ರಾಗವನ್ನು ಎಷ್ಟು ಕೇಳಿದರೂ ತಣಿಯದು. ಸೊಗಸಾದ ಸಾಹಿತ್ಯವುಳ್ಳ ಆ ರಾಗದ ಕೃತಿಯೂ ಅಷ್ಟೆ. ಅದೂ ಹೊಸತು; ಅವರದೇ. ಇಂಥ ಹೊಸ ರಾಗ ರಾಗಿಣಿಗಳೂ ಕೃತಿಗಳೂ ಅವರ ಬತ್ತಳಿಕೆಯಲ್ಲಿ ಇನ್ನೂ ಇವೆ.

"ಒಂದು ಕಚೇರಿಯಿಂದಲೇ ಅವರ ವಿದ್ವತ್ತಿನ ಆಳವನ್ನು ಅಳೆಯುವುದು ಕಷ್ಟ. ಅವರ ಗಾಯನದ ವಿಸ್ತಾರ ವೈವಿಧ್ಯಗಳೂ ಸ್ವಲ್ಪಕ್ಕೆ ಮನವರಿಕೆಯಾಗು ವುದಿಲ್ಲ. ನಮ್ಮ ಮೇಲೆ ವಿಶ್ವಾಸವಿಟ್ಟು ಅವರು ಇನ್ನೊಮ್ಮೆ ದಯಮಾಡಿಸಿ ಯಾರೆಂದು ನಾನು ನಂಬುತ್ತೇನೆ. ಈ ಸಣ್ಣ ಕಹಿ ಪ್ರಸಂಗವನ್ನು ಮರೆತು, ನಮ್ಮ ಹೃತ್ಪೂರ್ವಕವಾದ ವಂದನೆಯನ್ನು ಸ್ವೀಕರಿಸಬೇಕೆಂದು ಅವರನ್ನು ಕೋರುತ್ತೇನೆ"

ಎಂದು ನುಡಿದು ವೇದಿಕೆಯಿಂದ ಮೆಲ್ಲನೆ ಕೆಳಗಿಳಿದು ಬಂದರು. ಅವರು ಬಂದು ತಮ್ಮ ಸ್ಥಾನದಲ್ಲಿ ಕೂಡುವವರೆಗೂ ಚಪ್ಪಾಳೆ ನಿಲ್ಲಲೇ ಇಲ್ಲ.

ಸಮಾಜದ ಕಾರ್ಯದರ್ಶಿ ಒಂದೆರಡು ನಿಮಿಷ ಮಾತಾಡಿ ವಿದ್ವಾಂಸ ತ್ರಯವನ್ನು ವಂದಿಸಿ ಮೂವರಿಗೂ ಹಾರ ಹಾಕಿದರು. ಬೆಳ್ಳಿಯ ತಟ್ಟೆಯಲ್ಲಿ ಫಲ ತಾಂಬೂಲಗಳೊಡನೆ ಎಂಟುನೂರು ರೂಪಾಯಿಯ ನೋಟುಗಳನ್ನಿಟ್ಟು ಮಧುಸೂದನನಿಗೆ ಅರ್ಪಿಸಿದರು. ಸಭೆಯಲ್ಲಿದ್ದ ಗಣ್ಯರನೇಕರು ವೇದಿಕೆ ಹತ್ತಿ ಬಂದು ಮಧುಸೂದನನ ಪರಿಚಯಮಾಡಿಕೊಂಡು ಮುಕ್ತಕಂಠದಿಂದ ಪ್ರಶಂಸೆ ಮಾಡಿ ತೆರಳಿದರು.

ಮಧುಸೂದನ ಬಿಡಾರಕ್ಕೆ ಬರುವ ಹೊತ್ತಿಗೆ ಇನ್ನೊಂದು ಆಘಾತ ಸಿದ್ಧ ವಾಗಿತ್ತು.

ಆಗತಾನೇ ಮೈಸೂರಿನಿಂದ ಬಂದಿದ್ದ ಟೆಲಿಗ್ರಾಮ್ ಅವನ ಆಗಮನ ವನ್ನು ಕಾಯುತ್ತಿತ್ತು. ಆತುರದಿಂದ ಕವರನ್ನು ಒಡೆದು ಓದಿದ. ನಾಲಗೆ ಬಿಸಿ ಯಾಯಿತು; ಕಾಲಿನಲ್ಲಿ ಶಕ್ತಿಯೇ ಉಡುಗಿಹೋದಂತಾಯಿತು.

"ಗುರುಗಳು ಈ ಬೆಳಗ್ಗೆ ವೈಕುಂಠವಾಸಿಗಳಾದರು. ನಮಗೆ ದಿಕ್ಕೇ ತೋರದಂತಾಗಿದೆ. ತಕ್ಷಣ ಹೊರಟು ಬರುವುದು – ಸಂಜೀವಯ್ಯ."

ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತಾಯಿತು. ಮಧು ಬವಳಿ ಬಂದವನಂತೆ ನೆಲಕ್ಕೆ ಕುಸಿದುಬಿಟ್ಟ.

## ೨೩

“ ಜೀವನವೇ ಹಾಗೆ, ಸುಖದುಃಖಗಳ ಏರಿಳಿತ.”

ದುಃಖದಿಂದ ಕಂಗೆಟ್ಟು ಕರ್ತವ್ಯಮೂಢನಾಗಿ ಕುಳಿತಿದ್ದ ಮಧುಸೂದನನಿಗೆ ಸುಬ್ಬಕೃಷ್ಣ ಉಪದೇಶ ಮಾಡುತ್ತಿದ್ದ.

“ ಏನು ಜೀವನವೋ, ಏನು ಪ್ರಪಂಚವೋ, ಇದಕ್ಕೆ ಬೆಂಕಿಬೀಳ.”

“ ನೀನು ಹಾಕುವ ಬೆಂಕಿಗೆ ಈ ಪ್ರಪಂಚ ದಗ್ಧವಾಗಿ ಹೋಗುವ ಹಾಗಿದ್ದರೆ ಇಷ್ಟು ಹೊತ್ತಿಗೆ ಸಾವಿರ ಜನ ಅದನ್ನು ಸಾವಿರ ಸಲ ದಹಿಸಿಬಿಡುತ್ತಿದ್ದರು ”

“ ದಹಿಸುವ ಹಾಗಿದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ಈ ಕ್ಲೇಶಗಳೇ ಇರುತ್ತಿರಲಿಲ್ಲ ”

“ ಕ್ಲೇಶ ಬಂದಾಗ ಹಾಗೆನ್ನಿಸುವುದು ನಿಜ. ಆದರೆ ಅದನ್ನೇ ಸಾವಧಾನವಾಗಿ ಯೋಚಿಸಿದಾಗ ಬೇರೆ ಸತ್ಯ ಹೊಳೆಯುತ್ತದೆ ”

“ ಏನದು ಬೇರೆ ಸತ್ಯ ?”

“ ಕಾಲಕಾಲಕ್ಕೆ ನಡೆಯಬೇಕಾದ್ದೆಲ್ಲವೂ ನಡೆಯಲೇಬೇಕು. ಅದು ಪ್ರಕೃತಿ ನಿಯಮ. ಹುಟ್ಟನ್ನು ನಾವು ಹೇಗೆ ತಡೆಯಲಾರೆವೋ ಸಾವನ್ನೂ ಹಾಗೆಯೇ ತಡೆಯಲಾರೆವು. ಸೃಷ್ಟಿಯಾದ ವಸ್ತು ನಶಿಸಲೇಬೇಕಲ್ಲವೆ ?”

“ ಹೌದು. ಆದರೆ ಹೀಗೆ ? – ಇಷ್ಟು ನಿರ್ದಯವಾಗಿ ?”

“ ಅದು ನಿನ್ನ ದೃಷ್ಟಿಗೆ ಕಾಣುವ ರೀತಿ. ದಯೆ – ನಿರ್ದಯ ಎಂದು

ಕೊಳ್ಳುವುದು ನಿನ್ನ ಮಮತೆಯ ಭ್ರಾಂತಿ. ಕಾಲದ ಕರಾಳ ಖಡ್ಗಕ್ಕೆ ಅವರಿವರೆಂಬ ಭೇದವೇ ಇಲ್ಲ. ಅದಕ್ಕೆ ಪಂಡಿತರೂ ಒಂದೇ, ಪಾಮರರೂ ಒಂದೇ."

" ಗುರುಗಳು ನಮ್ಮನ್ನಗಲಿದ್ದನ್ನು ಈ ವೇದಾಂತದಿಂದ ಸಮರ್ಥಿಸಲು ಯತ್ನಿಸುತ್ತಿರುವೆಯೇನು ?"

" ಇದು ವೇದಾಂತವೂ ಅಲ್ಲ, ನಾನು ಯಾವುದನ್ನೂ ಸಮರ್ಥಿಸುತ್ತಲೂ ಇಲ್ಲ. ಕಾಲಕಾಲಕ್ಕೆ ನಡೆಯಬೇಕಾದ ವ್ಯಾಪಾರಗಳು ನಡೆಯುವುದು ಪ್ರಕೃತಿ ಧರ್ಮ ಎಂದು ಮಾತ್ರ ಹೇಳುತ್ತಿದೇನೆ, ಅಷ್ಟೆ. ಈ ವ್ಯಾಪಾರ ಸೃಷ್ಟಿಯಾಗ ಬಹುದು ಅಥವಾ ಲಯವಾಗಬಹುದು. ಪ್ರಕೃತಿ ಜೀವಿಗಳಾಗಿ ಅದರ ಕ್ರಿಯಾ ಪ್ರಪಂಚದಿಂದ ಬಾಹಿರರಾಗಬೇಕೆಂದು ಬಯಸುವುದು ಬರಿಯ ಹುಚ್ಚುತನ.

" ಹಾಗಾದರೆ ಆಪ್ತರ ಸಾವಿಗೆ ಶೋಕಿಸುವುದೂ ಹುಚ್ಚುತನವೆ ?"

" ದುಃಖಕ್ಕೂ ಮಿತಿಯುಂಟು. ಅತಿಯಾಗಿ ಅದರಲ್ಲೇ ಮುಳುಗುವುದು ಹುಚ್ಚುತನವಲ್ಲದೆ ಇನ್ನೇನು ? ಅದರಿಂದ ಯಾರಿಗೆ ಲಾಭ ?"

" ನಿಷ್ಕರುಣಿಗಳಂತೆ ನಿರಾತಂಕವಾಗಿದ್ದುಬಿಡುವುದರಿಂದ ಲಾಭವೇನು ?"

" ನಾನು ಹಾಗೆ ಹೇಳುತ್ತಿಲ್ಲ. ಆತ್ಮೀಯರ ಸಾವಿಗೆ ದುಃಖಿಸುವುದು ಮಾನವಧರ್ಮ. ಆದರೆ ಅದಕ್ಕೆ ಅಂಕೆಯಿರಬೇಕು. ಈಗ ನಿನಗೊಂದು ಪ್ರಶ್ನೆ ಹಾಕುತ್ತೇನೆ. ಮನುಷ್ಯ ದುಃಖ ಬಂದಾಗ ಶೋಕಿಸುತ್ತಾನೆ, ಸುಖ ಬಂದರೆ ಹಿಗ್ಗುತ್ತಾನೆ. ಏಕೆಂಬುದನ್ನು ಬಲ್ಲೆಯಾ ?

" ನೀನೇ ಹೇಳು "

" ಸುಖ ಮನಸ್ಸಿಗೆ ಪ್ರಿಯವಾದದ್ದು, ದುಃಖ ಅಪ್ರಿಯವಾದದ್ದು. ತನಗೆ ಬೇಕಾದುದನ್ನು ಮನಸ್ಸು ಒಪ್ಪಿಕೊಳ್ಳುತ್ತದೆ; ಬೇಡವಾದುದನ್ನು ದೂರೀಕರಿಸಲು ಪ್ರಯತ್ನಿಸುತ್ತದೆ. ದುಃಖ ಯಾವ ರೂಪದಲ್ಲೂ, ಯಾವಾಗಲೂ ಮನುಷ್ಯನಿಗೆ ಬೇಡವಾದ ವಸ್ತು. ಅದರಿಂದ ತಪ್ಪಿಸಿಕೊಳ್ಳಲು ಮನುಷ್ಯ ಯಾವಾಗಲೂ ಪ್ರಯತ್ನಿಸುತ್ತಿರುತ್ತಾನೆ. ಅದು ಅನಿವಾರ್ಯವಾಗಿ ಒದಗಿದಾಗ ಅದನ್ನು ಭರಿಸಲು ಸಾಧ್ಯವಾಗದೆ ಒದ್ದಾಡುತ್ತಾನೆ."

" ಅದರಿಂದ ತಪ್ಪಿಸಿಕೊಳ್ಳುವುದಕ್ಕೆ ನೀನು ಸೂಚಿಸುವ ಮಾರ್ಗವಾದರೂ ಏನು ?"

"ಅದು ನಮ್ಮ ಮನಸ್ಸಿನ ಸ್ಥಿತಿಯನ್ನು ಅವಲಂಬಿಸುತ್ತದೆ. ಸುಖದುಃಖ ಗಳನ್ನು ಕಲ್ಪಿಸಿಕೊಳ್ಳುವುದೂ ಮನಸ್ಸೇ; ಅದರಿಂದ ಹಿಗ್ಗಿ ಕುಗ್ಗುವುದೂ ಮನಸ್ಸೇ. ಮನಸ್ಸನ್ನು ಸಂಯಮದಲ್ಲಿಟ್ಟುಕೊಂಡರೆ ಎರಡಕ್ಕೂ ಸಿಕ್ಕದೆ ಇರ ಬಹುದು."

"ಅದು ಜ್ಞಾನಿಗಳ ಮಾತಾಯಿತು. ನಮ್ಮಂಥವರಿಗೆ ಹೇಗೆ ಸಾಧ್ಯ?"

"ನೀನು ಅಜ್ಞಾನಿಯೇನು? ಅನುಷ್ಠಾನಕ್ಕೆ ತಂದರೆ ಎಲ್ಲವೂ ಸಾಧ್ಯ. ಯೋಗಿಯಂತೆ ನಿರ್ಲಿಪ್ತನಾಗಿರಬೇಕೆಂದು ನಾನು ಹೇಳುತ್ತಿಲ್ಲ. ಅದು ಸಾಧ್ಯವೂ ಅಲ್ಲ. ಆದರೆ ಆಘಾತವನ್ನೆದುರಿಸುವ ದಾರ್ಢ್ಯವಿರಬೇಕು."

"ಅಂಥ ದಾರ್ಢ್ಯವಿಲ್ಲದಿದ್ದವರ ಗತಿ?"

"ಇಗೋ, ನಿನ್ನ ಹಾಗೆ ಒದ್ದಾಡುವುದು. ನೀನು ದುಃಖಪಟ್ಟುಕೊಂಡು. ಎಲ್ಲ ಕೆಲಸವನ್ನೂ ಕಡೆಗಾಣಿಸಿ ಕುಳಿತರೆ ಅಗಲಿದ ಜೀವ ಹಿಂತಿರುಗಿಬರುವು ದೇನು?. ನಿನ್ನ ಶೋಕದಿಂದ ಆ ಜೀವಕ್ಕೆ ತೃಪ್ತಿಯಾಗುವುದೇನು? ನೀನು ಮಾಡಬೇಕಾದ್ದೇನು? ಮಾಡುತ್ತಿರುವುದೇನು?"

"ಏನೆಂಬುದನ್ನಾದರೂ ವಿವರಿಸಬಾರದೆ?"

"ನನಗೆ ತಿಳಿದಮಟ್ಟಿಗೆ ಹೇಳುತ್ತಲೇ ಇದೇನೆ. ತಂದೆಗಿಂತ ಹೆಚ್ಚಾಗಿ ಪೋಷಿಸಿ, ಉದ್ಧಾರಮಾಡಿದ ಗುರುಗಳ ಸಾವಿಗೆ ವ್ಯಥೆಪಡುತ್ತಿರುವೆ, ನಿಜ. ಆದರೆ ಅದನ್ನೇ ಹಚ್ಚಿಕೊಂಡು ಕುಳಿತರೆ ಕೊನೆಯೆಲ್ಲಿ? ಆದದ್ದು ಆಗಿ ಹೋಯಿತು. ಅದನ್ನು ಯಾರೂ ತಪ್ಪಿಸುವಂತಿರಲಿಲ್ಲ. ಇನ್ನು ಅದರ ಯೋಚನೆ ಸಾಕುಮಾಡಿ ಮುಂದಿನ ಕರ್ತವ್ಯಕ್ಕೆ ಗಮನ ಕೊಡು. ಅವರ ಕೀರ್ತಿಯನ್ನು ನಿನ್ನ ಕಾರ್ಯದ ಮೂಲಕ ಚಿರಸ್ಥಾಯಿಯಾಗಿಸಲು ಪ್ರಯತ್ನಪಡು. ಅವರ ಸಾವಿನಿಂದ ನಿನ್ನಲ್ಲಿ ಸೋಲಿನ ಮನೋಭಾವ ಉಂಟಾಗುವುದು ಬೇಡ. ಇಮ್ಮಡಿಯಾದ ದೃಢನಿಷ್ಠೆಯ ಕೆಲಸಕ್ಕೆ ಅದು ಪ್ರಚೋದಕವಾಗಲಿ. ಗಾನ ಕಲೆಗಾಗಿ ತ್ರಿಕರಣ ಶುದ್ಧಿಯಿಂದ ದುಡಿ. ಅದೇ ನೀನು ಅವರಿಗೆ ನೀಡಬಹು ದಾದ ಶ್ರದ್ಧಾಂಜಲಿ. ಅವರ ಪವಿತ್ರ ಸ್ಮರಣೆಗೆ ಇದಕ್ಕಿಂತ ಮಿಗಿಲಾದ ಕಾಣಿಕೆ ಯನ್ನು ನೀನು ಅರ್ಪಿಸಲಾರೆ."

"ನಿಜ, ನಿಜ."

ಎಂದು ಮಧುಸೂದನ ನೀಳವಾಗಿ ಸುಯ್ದು. ಒಂದು ತಿಂಗಳಿಂದ ಅವನ

ಮನಸ್ಸಿಗೆ ಲಭಿಸದಿದ್ದ ಶಾಂತಿ ಇಂದು ಲಭಿಸಿತ್ತು. ಸುಬ್ಬಕೃಷ್ಣನ ಹಿತನುಡಿ ಗುರಿಮುಟ್ಟಿತ್ತು.

ಗುರುಗಳು ಎಲ್ಲವನ್ನೂ ಬಿಟ್ಟು ಹೊರಟು ಹೋಗಿದ್ದರು. ಭೌತಿಕವಾಗಿ ಅವರ ಚಿಹ್ನೆ ಯಾವುದೂ ಉಳಿದಿರಲಿಲ್ಲ. ಕೊನೆಗಳಿಗೆಯಲ್ಲಿ ಅವರ ಮುಖ ವನ್ನು ನೋಡುವ ಪುಣ್ಯವೂ ಮಧುಸೂದನನಿಗೆ ಲಭಿಸಿರಲಿಲ್ಲ. ಅದಕ್ಕಾಗಿ ಅವನ ಮನಸ್ಸು ತುಂಬ ತಳಮಳಗೊಂಡಿತ್ತು. ತಂಜಾವೂರಿಗೆ ಹೋದದ್ದಕ್ಕಾಗಿ ತನ್ನನ್ನೇ ತಾನು ಹತ್ತಾರು ಸಲ ಶಪಿಸಿಕೊಂಡಿದ್ದ. ಸಂಜೀವಯ್ಯನ ಸಮಾಧಾನ ವಾಕ್ಯಗಳಿಂದಲೂ ದುಃಖ ಶಮನವಾಗಿರಲಿಲ್ಲ. ಆದರೆ ಆತ್ಮ ಪಶ್ಚಾತ್ತಾಪದ ಬೆಂಕಿಯಲ್ಲಿ ಬೇಯುತ್ತಿದ್ದ ಹೃದಯಕ್ಕೆ ಸುಬ್ಬಕೃಷ್ಣನ ಹಿತವಾಕ್ಕು ತಂಪೆರೆದಿತ್ತು.

" ಗುರುಗಳು ನನ್ನನ್ನು ಜ್ಞಾಪಿಸಿಕೊಂಡರೆ ?"

ಎಂದು ಊರಿಗೆ ಬಂದ ಕೂಡಲೇ ಸಂಜೀವಯ್ಯನನ್ನು ಕೇಳಿದ್ದ.

" ಹೌದು ಜ್ಞಾಪಿಸಿಕೊಂಡರು. ಮಧು ಬಂದನೇ ಎಂದು ಸಾಯುವ ದಿನವೂ ಕೇಳಿದರು "

ಎಂದು ಸಂಜೀವಯ್ಯ ನುಡಿದಿದ್ದ.

" ಅಯ್ಯೋ, ಪಾಪೀ "

ಎಂದು ತನ್ನನ್ನು ತಾನೇ ಹಳಿದುಕೊಂಡು ಮಧುಸೂದನ ಬೆಂದು ಹೋಗಿದ್ದ. ಸುಬ್ಬಕೃಷ್ಣನ ಅನುನಯವಿಲ್ಲದಿದ್ದರೆ ಆ ದುಃಖ ಪಶ್ಚಾತ್ತಾಪಗಳ ಕಮರಿಯಿಂದ ಅವನನ್ನು ಮೇಲಕ್ಕೆತ್ತುವುದು ಸಾಧ್ಯವಾಗುತ್ತಿರಲಿಲ್ಲ.

ಗುರುಗಳಿಲ್ಲವೆಂಬ ನಿಜವನ್ನು ಮನಸ್ಸು ಗ್ರಹಿಸುವುದೇ ಕಷ್ಟವಾಗಿತ್ತು. ಆದರೊಡನೆ ಹೋರಾಡಿ ತಹಬಂದಿಗೆ ತರಬೇಕಾದರೆ ತಿಂಗಳ ಮೇಲೆ ಹಿಡಿಸಿತ್ತು. ಈ ಅವಧಿಯಲ್ಲಿ ಸುಬ್ಬಕೃಷ್ಣ ಎಡಬಿಡದೆ ಜೊತೆಯಲ್ಲಿದ್ದು ಹಟಮಾರಿ ಮಗುವಿ ನಂತೆ ಪದೇಪದೇ ಚಿಂತೆಯ ಕಮರಿಗೆ ಮಗುಚಿಕೊಳ್ಳಲಾಶಿಸುತ್ತಿದ್ದ ಮಧು ಸೂದನನ ಮನಸ್ಸನ್ನು ಪ್ರಯತ್ನಪೂರ್ವಕವಾಗಿ ಬೇರೆ ಕಡೆಗೆ ತಿರುಗಿಸುತ್ತಿದ್ದ. ಅನುನಯಕ್ಕೆ ಬಗ್ಗದಿದ್ದ ಕಡೆ ಆಗ್ರಹ ಅವನ ಅಸ್ತ್ರವಾಗುತ್ತಿತ್ತು.

ಸುಬ್ಬಕೃಷ್ಣನ ಹಿತವಾಕ್ಕುಗಳಲ್ಲಿ ಗೀತೆ ಉಪನಿಷತ್ತುಗಳ ವಾಕ್ಯಗಳು ಅಲ್ಲಲ್ಲಿ ತಲೆದೋರುತ್ತಿದ್ದವು. ಮಧುಸೂದನನಿಗೆ ಅವು ಅಪರಿಚಿತವೇನೂ ಅಲ್ಲ

ದಿದ್ದರೂ ಆ ಸಂದರ್ಭಕ್ಕೆ ಆ ಮಾತುಗಳು ಅವನ ಮನಸ್ಸಿಗೆ ನೆಮ್ಮದಿ ಯನ್ನುಂಟುಮಾಡುತ್ತಿದ್ದವು. ಸಾಮಾನ್ಯ ಸಂದರ್ಭದಲ್ಲಿ ಹೊಳೆಯದಿದ್ದ ಅರ್ಥ ವಿಶೇಷ ಆಗ ಗೋಚರವಾಗುತ್ತಿತ್ತು. ತೂಗಿ ತಟ್ಟಿಸಿಕೊಂಡು ನಿದ್ದೆಹೋಗುವ ಹಸುಳೆಯಂತೆ ಆ ಸಾಂತ್ವನದಿಂದ ಮಧುಸೂದನನ ಮನಸ್ಸು ಒಂದು ನೆಲೆಗೆ ಬಂದು ಮುಟ್ಟಿತು.

ಸುಬ್ಬಕೃಷ್ಣ ಹೇಳಿದ್ದೂ ನಿಜವೇ. ಕೊನೆಗಾಣದ ಚಿಂತೆಯಲ್ಲಿ ಮುಳುಗಿ ಕರ್ತವ್ಯಪರಾಙ್ಮುಖನಾಗಿ ಕುಳಿತುಕೊಳ್ಳುವ ಹಾಗಿರಲಿಲ್ಲ. ಮಾಡಬೇಕಾದ ಕೆಲಸ ಕೈತುಂಬ ಇತ್ತು. ಅದಕ್ಕೆಲ್ಲ ಗಮನಕೊಡುವುದು ತೀರ ಅಗತ್ಯವಾಗಿತ್ತು. ಪಾಠ ಪ್ರವಚನಗಳು, ಸಂಗೀತ ಕಚೇರಿಗಳು ಮಧುಸೂದನನ ಕಾಲವನ್ನು ಪೂರ್ತಿ ಆಕ್ರಮಿಸಿಕೊಂಡವು. ಪ್ರಯೋಗಭಾಗದಲ್ಲಿ ಅವನು ಮಾಡಬೇಕಾದ ಕೆಲಸ ಬಹಳವಾಗಿತ್ತು. ಅದರ ಕಡೆಗೆ ಅವನು ಹೆಚ್ಚು ಲಕ್ಷ್ಯ ಕೊಡ ಲಾರಂಭಿಸಿದ.

## ೨೪

ಸಂಗೀತ ಪ್ರಪಂಚದಲ್ಲಿ ಅನೇಕ ರಾಗಗಳು ಬರಬೇಕಾದಷ್ಟು ಪ್ರಶಸ್ತಿಗೆ ಬಂದಿರಲಿಲ್ಲ. ಒಬ್ಬರಿಬ್ಬರನ್ನು ಬಿಟ್ಟರೆ ಘನವಿದ್ವಾಂಸರೆನ್ನಿಸಿಕೊಂಡವರೇ ಬಳಕೆಯ ರಾಗಗಳನ್ನು ಬಿಟ್ಟು ಅಪರೂಪ ರಾಗಗಳಿಗೆ ಹೆಚ್ಚಾಗಿ ಕೈಹಾಕುತ್ತಿರಲಿಲ್ಲ. ಕಲ್ಯಾಣಿ, ಕಾಂಭೋಜಿ, ಭೈರವಿ, ತೋಡಿ ಮುಂತಾದುವನ್ನು ಹಾಡುವಷ್ಟು ಉತ್ಸಾಹದಿಂದ ಅವರು ಅಪ್ರಸಿದ್ಧರಾಗಗಳನ್ನು ಹಾಡುತ್ತಿರಲಿಲ್ಲ.

ಬಳಕೆಯ ರಾಗಗಳಂತೂ ನೂರಾರು ವರ್ಷಗಳ ಪರಿಶ್ರಮಪೋಷಣೆಗಳಿಂದ ವೃದ್ಧಿಯಾಗಿ ಹಾಡಿಕೆಗೆ ವಿಸ್ತಾರವಾಗಿ ಒದಗುತ್ತಿದ್ದವು. ಅವುಗಳಲ್ಲಿ ಜನರಂಜನೆ ಸುಲಭಸಾಧ್ಯವಾಗಿತ್ತು. ಆದರೆ ಈ ಮಾತನ್ನು ಅಪ್ರಸಿದ್ಧ ರಾಗಗಳ ವಿಚಾರವಾಗಿ ಹೇಳುವಂತಿರಲಿಲ್ಲ. ಅದನ್ನು ತೆಗೆದುಕೊಂಡು ಪಳಗಿಸಿ, ನೂತನ ಸ್ವರಶೈಲಿಗಳಿಂದ ವಿಸ್ತಾರಗೊಳಿಸುವ ಶ್ರಮ ಅನೇಕರಿಗೆ ಬೇಡವಾಗಿತ್ತು. ಅವುಗಳ ವಕ್ರಸಂಚಾರವೂ ಪರಿಮಿತಕ್ಷೇತ್ರವೂ ಹಲವರನ್ನು ಎದೆಗೆಡಿಸುತ್ತಿದ್ದವು. 'ವಿರಿಬೋಣಿ'ಯಿಂದ ಆರಂಭವಾದರೆ 'ಪವಮಾನ ಸುತುಡು'ವಿನಲ್ಲಿ ಮುಕ್ತಾಯವಾಗುವುದೇ ಸಂಗೀತ ಕಚೇರಿಗಳ ವೈಶಿಷ್ಟ್ಯವಾಗಿಹೋಗಿತ್ತು.

ವಿದ್ವಾಂಸರಲ್ಲಿ ಸ್ವತಂತ್ರವಿಚಾರ ಧೋರಣೆ ಕಡಮೆಯಾಗಿತ್ತು. ಜೊತೆಗೆ ಉದಾಸೀನವೂ ಬೆರೆತು ಪ್ರಾಚೀನವಾದ ಅನೇಕ ಘನರಾಗಗಳು ಪಾಲಕರಿಲ್ಲದ ಅನಾಥ ಶಿಶುಗಳಂತೆ ದಿಕ್ಕುಗೆಟ್ಟುಹೋಗಿದ್ದವು. ಚೆಲುವೆಯಾದರೂ ಆದರಿಸುವವರಿಲ್ಲದ ಬಡವರ ಮನೆಯ ಹೆಣ್ಣಿನ ಹಾಗೆ ಎಷ್ಟೋ ರಾಗಗಳು ಲಕ್ಷಣ

ಗ್ರಂಥಗಳ ಪುಟಗಳನ್ನು ಬಿಟ್ಟು ಸಂಗೀತವೇದಿಕೆಗಳಿಗೆ ಬಂದಿರಲಿಲ್ಲ. ಹತ್ತಕ್ಕೊಬ್ಬ ವಿದ್ವಾಂಸರು ಧೂಳು ಮುಸುಕಿದ ಆ ರಾಗರಾಗಿಣಿಗಳನ್ನೆತ್ತಿಕೊಂಡು ತಮ್ಮ ಪರಿಶ್ರಮದಿಂದ ಅವಕ್ಕೆ ಹೊಳಪು ಕೊಟ್ಟು ಕಚೇರಿಗಳಲ್ಲಿ ಹಾಡಿದಾಗ ರಸಿಕಜನ ಆ ಸುಖಕ್ಕೆ ಮನಸೋಲುತ್ತಿದ್ದರು.

ಕಾಲದ ಮುಸುಕಿನಲ್ಲಿ ಮರೆಯಾಗಿದ್ದ ಅಪರೂಪ ರಾಗಗಳ ಕಡೆಗೆ ಮಧುಸೂದನನ ಲಕ್ಷ್ಯಹರಿಯಿತು. ಅವನು ಅವುಗಳ ವೈಶಿಷ್ಟ್ಯವನ್ನು ಕುತೂಹಲದಿಂದ ಬೆದಕತೊಡಗಿದ. ನೂತನ ಸ್ವರಸಂಚಾರಗಳಿಂದ ಆ ರಾಗಗಳ ಬೆಡಗನ್ನು ಹೆಚ್ಚಿಸಿ ಕಚೇರಿಗಳಲ್ಲಿ ಹಾಡಬೇಕೆಂಬ ಚಪಲ ಅವನಲ್ಲಿ ಬಲಿಯಿತು.

ಪ್ರಚಾರ ತಪ್ಪಿರುವ ಹಲವು ರಾಗಗಳನ್ನು ವಿವಿಧ ಸಂಚಾರಗಳಲ್ಲಿ ಪ್ರಯೋಗಿಸಿ ನೋಡುವುದು ಅವನ ದಿನಚರಿಯಾಯಿತು. ಆಗ ಹೊಸ ಹೊಸ ಭಾವಗಳು ಅಂಕುರಿಸುತ್ತಿದ್ದವು. ಕೆಲವು ಭಾವಗಳಂತೂ ಯಾವ ಅಂಕೆಗೂ ಸಿಕ್ಕದೆ ವಿಲಕ್ಷಣ ತೇಜಸ್ಸಿನಿಂದ ಹರಿಯುತ್ತಿದ್ದವು. ಅಂಥವುಗಳಿಗೆ ಹೊಸ ರಾಗಗಳೇ ಬೇಕಾಗಿದ್ದವು. ಲಕ್ಷಣಸಮ್ಮತಿಯಿಂದ ಅವಕ್ಕೇಕೆ ರಾಗದ ರೂಪು ಕೊಡಬಾರದೆಂದು ಮಧುಸೂದನ ಹಲವು ವೇಳೆ ಯೋಚಿಸುತ್ತಿದ್ದ. ಅಂಥ ಒಂದು ಆಲೋಚನೆಯ ಪ್ರತಿಫಲವೇ ' ಕಲಾವತಿ '.

ಪ್ರಾಚೀನ ಕೃತಿಗಳ ಪರಿಚಯ ಅಭ್ಯಾಸಗಳ ಜೊತೆಗೆ ಸ್ವತಃ ನಡಸುತ್ತಿದ್ದ ಸಾಹಿತ್ಯ ಕೃಷಿಯೂ ಸೇರಿ ಅವನ ಭಾಷಾಜ್ಞಾನ ತಕ್ಕಮಟ್ಟಿಗೆ ವಿಸ್ತಾರವಾಗಿತ್ತು. ಅದರ ಫಲವಾಗಿ ನೂತನ ರಾಗಗಳಲ್ಲಿ ಸ್ವತಂತ್ರವಾಗಿ ಕೃತಿ ರಚಿಸುವ ಸಾಮರ್ಥ್ಯವೂ ಉಂಟಾಗಿತ್ತು. ಇಂಥ ಕೃತಿರಚನೆಗಳಲ್ಲಿ ಸುಬ್ಬಕೃಷ್ಣನ ಸಹಾಯವೂ ಇಲ್ಲದೆ ಇರುತ್ತಿರಲಿಲ್ಲ.

ಕಲಾವತಿ ರಾಗದೊಡನೆ ಮಧುಸೂದನ ಚಿತ್ರಮಯೂರಿ, ನಾದಶ್ರೀ, ಪದ್ಮರಾಗ, ಜಯಮಾಲಿನೀ ರಾಗಗಳನ್ನೂ ಕಂಡುಹಿಡಿದಿದ್ದ. ಗುರುಗಳು ಬದುಕಿದ್ದಾಗಲೇ ಈ ಕೆಲಸ ನಡೆದಿತ್ತು. ಈ ಐದು ರಾಗಗಳನ್ನೂ ತಾನು ನಿಯೋಜಿಸಿರುವುದಾಗಿ ಗುರುಗಳಿಗೆ ಅರಿಕೆ ಮಾಡಿಕೊಂಡು ಅವುಗಳನ್ನು ಅವರ ಮುಂದೆ ಹಾಡಿ ತೋರಿಸಿದ್ದ. ಅವರು ಅವುಗಳನ್ನು ಮೆಚ್ಚಿ ಆಶೀರ್ವದಿಸಿದ್ದರು. ಆ ಆಶೀರ್ವಾದದೊಡನೆ ಒಂದು ಎಚ್ಚರಿಕೆಯನ್ನೂ ಕೊಟ್ಟಿದ್ದರು :

" ಹೊಸ ರಾಗಗಳ ನಿರ್ಮಾಣ ಬಹು ತೊಡಕಿನ ಕೆಲಸ. ಮೊದಲು

ಅವುಗಳ ಅಗತ್ಯದ ಪ್ರಶ್ನೆ ಬರುತ್ತದೆ. ಎರಡನೆಯದಾಗಿ ಅಂಥ ಕರ್ತೃತ್ವಕ್ಕೆ ಮನ್ನಣೆ ದೊರಕಬೇಕಾದರೆ ವಯಸ್ಸಿನ ಹಿರಿತನ ಬೇಕು. ಇದರಲ್ಲಿ ಜ್ಞಾನಾನುಭವಗಳಿಗೇ ಪ್ರಾಶಸ್ತ್ಯ. ಪಂಡಿತರಲ್ಲದವರು ಮಾಡುವ ಕೆಲಸಕ್ಕೆ ಶಾಸ್ತ್ರ ಸಮ್ಮತಿ ಕಡಮೆ. ಸಂಪ್ರದಾಯವೂ ಅದಕ್ಕನುಗುಣವಾಗಿಯೇ ಇದೆ. ಒಬ್ಬ ವಿದ್ವಾಂಸ ಒಂದು ಹೊಸ ರಾಗ ನಿರ್ಮಿಸಿದರೆ ಅದಕ್ಕೆ ಅವನ ಅರ್ಹತೆಯೇನು, ವಿದ್ವತ್ತೇನು, ಅನುಭವವೇನು, ವಯಸ್ಸೇನು ಎಂಬ ಪ್ರಶ್ನೆ ಹುಟ್ಟುತ್ತದೆ. ನಿನ್ನ ರಾಗಗಳು ಲಕ್ಷಣಬದ್ಧವಾಗಿಯೇನೋ ಇವೆ; ಕೃತಿಗಳಲ್ಲೂ ಭಾವಮಾಧುರ್ಯವಿದೆ. ಆದರೆ ವಯಸ್ಸಿನಲ್ಲಿ ನೀನಿನ್ನೂ ಕಿರಿಯ. ಶ್ರಮಪಟ್ಟು ರಾಗಗಳನ್ನೇನೋ ನಿಯೋಜಿಸಿದ್ದಾಗಿದೆ. ನಾಲ್ಕು ದಿನ ಒಳಗೇ ಇರಲಿ. ಇಷ್ಟು ಬೇಗ ಸಭೆಗಳಲ್ಲಿ ಹಾಡಲು ಚಪಲ ಪಡಬೇಡ. ಅದರಿಂದ ಅನೇಕರಿಗೆ ಅಸಮಾಧಾನವಾಗಬಹುದು"

ಎಂದು ನುಡಿದು ಅಪ್ರತ್ಯಕ್ಷವಾಗಿ ಶಿಷ್ಯನನ್ನು ಶ್ಲಾಘಿಸಿದ್ದರು.

ಮಧುಸೂದನ ಈ ಎಚ್ಚರಿಕೆಯನ್ನು ಮರೆತಿರಲಿಲ್ಲವಾದರೂ ತಂಜಾವೂರು ಕಚೇರಿಯಲ್ಲಿ ಉತ್ಸಾಹದಿಂದ ಹಾಡುತ್ತ ಭಾವೋದ್ವೇಗಕ್ಕೆ ವಶನಾಗಿ 'ಕಲಾವತಿ'ಯನ್ನು ಹಾಡಿಬಿಟ್ಟಿದ್ದ. ಇತರರಾಗಗಳನ್ನೂ ಸಮಯ ಸಿಕ್ಕಿದಾಗ ಒಂದೊಂದಾಗಿ ಅಲ್ಲಲ್ಲೇ ಹಾಡಬೇಕೆಂಬ ಕುತೂಹಲ ಒಳಗೇ ಕುಣಿಯುತ್ತಿತ್ತು.

ಉತ್ತರಾದಿ ಸಂಗೀತ ಕ್ರಮಕ್ಕೂ ಅವನು ಗಮನ ಕೊಡದಿರಲಿಲ್ಲ. ಸ್ವತಃ ಗುರುಗಳಿಂದಲೇ ಅದರ ಪ್ರಕ್ರಿಯೆಗಳನ್ನೆಲ್ಲಾ ಸಾಕಷ್ಟು ಮಟ್ಟಿಗೆ ತಿಳಿದುಕೊಂಡು ಅಭ್ಯಸಿಸಿದ್ದ. ಹಿಂದೂಸ್ತಾನೀ ಸಂಗೀತದ ಶ್ರುತಿಸೌಖ್ಯಕ್ಕೆ ಮನ ಸೋತಿದ್ದ ಮಧುಸೂದನ ಅದರ ಮರ್ಮಗಳನ್ನು ಗ್ರಹಿಸಿ, ಪಳಗಿಸಿಕೊಂಡು ಸಮಯ ಬಂದರೆ ಉಪಯೋಗಕ್ಕಿರಲೆಂದು ಇಟ್ಟುಕೊಂಡಿದ್ದ. ಅವನ ಜ್ಞಾನ ಭಂಡಾರ ಹಲವಾರು ತುಮ್ರಿ, ಚೀಸುಗಳಿಂದ ಪುಷ್ಟವಾಗಿತ್ತು.

ಮಧುಸೂದನನ ಆರ್ಥಿಕಸ್ಥಿತಿಯೂ ಈಚೆಗೆ ಸಾಕಷ್ಟು ಸುಧಾರಿಸಿತ್ತು. ಸಂಗೀತ ಕಚೇರಿಗಳಿಂದ ಕೈತುಂಬಿ ಚೆಲ್ಲುವಷ್ಟು ಹಣ ಬಾರದಿದ್ದರೂ ತೃಪ್ತಿಕರವಾದ ಆದಾಯವೇನೋ ಇತ್ತು. ಗಣ್ಯವಾದ ಸ್ಥಳದಲ್ಲಿ ತಿಂಗಳಿಗೊಂದಾದರೂ ಕಚೇರಿ ಇಲ್ಲದೆ ಇರುತ್ತಿರಲಿಲ್ಲ. ಮೈಸೂರಿನಲ್ಲಿ ಮಾಡುತ್ತಿದ್ದ ಕಚೇರಿಗಳು ಹಲವು ವೇಳೆ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಮಾಡತಕ್ಕವಾಗಿದ್ದವು. ಆರ್ಥಿಕ

ದೃಷ್ಟಿಯಿಂದ ಲಾಭವಾಗುತ್ತಿದ್ದುದು ಹೊರಗಡೆಯ ಕಚೇರಿಗಳಿಂದಲೇ. ಮಧುರೆ, ತಿರುಚನಾಪಳ್ಳಿ, ತಿರುವಾಂಕೂರು, ಪಾಲಘಾಟ್, ಕುಂಭಕೋಣಂ ಮುಂತಾದ ದಕ್ಷಿಣದ ಸಂಗೀತ ಕೇಂದ್ರಗಳಿಂದ ಆಗಾಗ ಆಹ್ವಾನಗಳು ಬರುತ್ತಲೇ ಇದ್ದವು.

ಮನೆಯಲ್ಲಿ ಯಾವುದಕ್ಕೂ ಕೊರತೆಯಿರಲಿಲ್ಲ. ವೆಂಕಮ್ಮನವರು ಸುತ್ತು ಕೆಲಸಕ್ಕೆ ಒಬ್ಬಾಕೆಯನ್ನು ಗೊತ್ತುಮಾಡಿಕೊಂಡಿದ್ದರು. ಮನೆಗೆ ಬೇಕಾದ ತಿಂಗಳು ಗಟ್ಟಲೆಯ ಸಾಮಾನುಗಳನ್ನು ವರ್ತನೆ ಅಂಗಡಿ ತಪ್ಪದೆ ಕಳಿಸುತ್ತಿತ್ತು. ಇತರ ಕೆಲಸ ಬೊಗಸೆಗಳಿಗೆ ಒಕ್ಕಲಗಿತ್ತಿಯಿದ್ದಳು. ಅಡುಗೆ ಮಾಡುವುದನ್ನು ಮಾತ್ರ ಅವರು ಯಾರಿಗೂ ಬಿಟ್ಟುಕೊಡುತ್ತಿರಲಿಲ್ಲ. ತಮ್ಮ ರುಚಿ ಮಗನ ರುಚಿಗಳಿಗೆ ಸರಿಹೋಗುವಂತೆ ಹೆರವರು ಮಾಡಿ ಬಡಿಸಲಾರರೆಂಬುದು ಅವರ ನಂಬಿಕೆ ಯಾಗಿತ್ತು. ಆರೋಗ್ಯ ಚೆನ್ನಾಗಿರಲಿ, ಇಲ್ಲದಿರಲಿ ಈ ಕೆಲಸವನ್ನು ಮಾತ್ರ ಅವರು ಇನ್ನೊಬ್ಬರಿಗೆ ವಹಿಸಲು ಸಿದ್ಧರಾಗಿರಲಿಲ್ಲ.

ಈಚೆಗೆ ಅವರ ದೇಹಸ್ಥಿತಿಯೂ ಅಷ್ಟು ಚೆನ್ನಾಗಿರಲಿಲ್ಲ. ಒಂದೊಂದು ಸಲ ಇದ್ದಕ್ಕಿದ್ದ ಹಾಗೆ ಎದೆಯಲ್ಲಿ ನೋವು ಕಾಣಿಸಿಕೊಳ್ಳುತ್ತಿತ್ತು. ಮತ್ತೆ ಹೇಗೆ ಬರುತ್ತಿತ್ತೋ ಹಾಗೆಯೇ ಹೋಗಿಬಿಡುತ್ತಿತ್ತು. ಅವರೇನಾದರೂ ಮುದುರಿ ಕೊಂಡು ಮಲಗಿಕೊಂಡರೆ ಮಧು ಗಾಬರಿಯಾಗಿಬಿಡುತ್ತಿದ್ದ. ಕೂಡಲೆ ಒಂಟಿಕೊಪ್ಪಲ್ ಫಾರ್ಮಸಿಯ ಡಾಕ್ಟರಿಗೆ ಕರೆ ಹೋಗುತ್ತಿತ್ತು. ಅವರು ಬಂದು ನೋಡಿ ಏನೂ ಇಲ್ಲವೆಂದು ಹೇಳಿ ಹೋದಾಗಲೇ ಮಧುಸೂದನನಿಗೆ ಸಮಾಧಾನ. ಮಗನ ಮಮತೆ ನೋಡಿ ವೆಂಕಮ್ಮನವರ ಅಂತಃಕರಣ ತುಂಬಿ ಬರುತ್ತಿತ್ತು.

ಎಲ್ಲದರಲ್ಲಿಯೂ ತೃಪ್ತಿಯಿದ್ದರೂ ವೆಂಕಮ್ಮನವರಿಗೆ ಮಗನ ವಿಷಯದಲ್ಲಿ ಒಂದು ಅಸಮಾಧಾನವಿದ್ದೇ ಇತ್ತು. ಅವನು ಪ್ರವಾಸ ಹೋದಾಗಲೋ, ಇತರ ಕೆಲಸಗಳಲ್ಲಿ ಮಗ್ನನಾದಾಗಲೋ ಅವರಿಗೆ ಹೊತ್ತು ಹೋಗುವುದೇ ಬೇಸರ ವಾಗುತ್ತಿತ್ತು. ಸರೀಕರ ಮನೆಗಳಲ್ಲಿ ಹಿರಿಯರು ಸೊಸೆ ಮೊಮ್ಮಕ್ಕಳನ್ನು ಕಂಡು ನಲಿಯುತ್ತಿದ್ದುದನ್ನು ನೋಡಿ ವೆಂಕಮ್ಮನವರ ಮನಸ್ಸಿಗೆ ಕಿರಿಕಿರಿ ಯಾಗುತ್ತಿತ್ತು. ಪಕ್ಕದ ಮನೆಯ ವಿಟ್ಟು ವಯಸ್ಸಿನಲ್ಲಿ ಮಧುಸೂದನನಿ ಗಿಂತಲೂ ಒಂದೆರಡು ವರ್ಷ ಚಿಕ್ಕವನಾಗಿದ್ದರೂ ಎರಡು ಮಕ್ಕಳ ತಂದೆಯಾಗಿದ್ದ. ಹಿಂದಿನ ಮನೆಯ ನಾಗೂಬಾಯಿ ಹೊಸದಾಗಿ ಪ್ರಸ್ತವಾಗಿ ಮನೆಗೆ ಬಂದ

ಸೊಸೆಗೆ ಮನೆಯ ಸೂತ್ರ ವಹಿಸಿಕೊಟ್ಟು, ರಾಮ, ಕೃಷ್ಣ ಎನ್ನುತ್ತ ಪುರಾಣ ಪುಣ್ಯ ಕಥೆಗಳಲ್ಲಿ ಮಗ್ನವಾಗಿದ್ದರು.

ಇದೆಲ್ಲವನ್ನೂ ನೋಡುತ್ತಲೇ ಇದ್ದ ವೆಂಕಮ್ಮನವರಿಗೆ ಸಹಜವಾಗಿ ತಮಗೂ ಸೊಸೆ ಬರಬೇಕೆಂಬ ವಾಂಛೆಯಿತ್ತು. ಆದರೆ ಮಧುಸೂದನ ಯಾವ ಕಾರಣದಿಂದಲೋ ಮದುವೆಯ ಮಾತು ಬಂದಾಗಲೆಲ್ಲಾ ಅದನ್ನು ಮುಂದಕ್ಕೆ ತಳ್ಳುತ್ತಿದ್ದ. ಹೆಣ್ಣು ಕೊಡಲು ಹುಡುಕಿಕೊಂಡು ಬರುವವರ ಸಂಖ್ಯೆಗೇನೂ ಕಡಮೆಯಿರಲಿಲ್ಲ. ಆದರೆ ತಾಯಿ ಆ ಕನ್ಯಾಪಿತೃಗಳನ್ನು ಬರಮಾಡಿಕೊಳ್ಳು ತ್ತಿದ್ದಷ್ಟು ಉತ್ಸಾಹದಿಂದ ಮಗ ಬರಮಾಡಿಕೊಳ್ಳುತ್ತಿರಲಿಲ್ಲ. ವೆಂಕಮ್ಮ ನವರಿಗೆ ಅವನ ರೀತಿಯೇ ಅರ್ಥವಾಗದೆ ಪೇಚಾಟವಾಗುತ್ತಿತ್ತು.

ತಮ್ಮ ಮಾತಿಗೆ ಮಗ ಕಿವಿಗೊಡುವುದಿಲ್ಲವೆಂದರಿತು ವೆಂಕಮ್ಮನವರು ಒಂದೆರಡು ಸಲ ದಾಸರ ಕೈಯಲ್ಲಿ ಹೇಳಿಸಿದ್ದರು. ದಾಸರು ತಮ್ಮ ಸಹಜವಾದ ವಿನೋದ ಪ್ರಕೃತಿಯಿಂದ ಮಾತಾಡುತ್ತಿದ್ದರು.

"ಏನಪ್ಪಾ ಮಧು, ನಮಗೆ ಯಾವಾಗ ಹೋಳಿಗೆ ಹಾಕಿಸುತ್ತೀಯಪ್ಪಾ?"

ಮಧುಸೂದನ ಅವರ ಮಾತು ಅರ್ಥವಾಗದವನ ಹಾಗೆ ನಟಿಸುತ್ತಿದ್ದ.

"ಹೋಳಿಗೆಗೇನು ಕಷ್ಟ ದಾಸರೇ, ಯಾವಾಗ ಮಾಡಿಸಿದರೂ ಆಯಿತು."

"ಅಂಥ ಹೋಳಿಗೆಯಲ್ಲಪ್ಪಾ ನಾನು ಕೇಳಿದ್ದು."

"ಮತ್ತೆ ಇನ್ನೆಂಥಾದ್ದು ?"

"ನಿನ್ನ ಮದುವೆಯ ಊಟದ ಹೋಳಿಗೆ."

"ಓಹೋ ಅದೋ. ಅದಕ್ಕೇನಂತೆ ಎಂದಾದರೊಂದು ದಿನ ಬಿದ್ದೇ ಬೀಳತ್ತೆ."

"ಎಂದಾದರೂ ಒಂದು ದಿನ ಅಂತ ಕಾಯುತ್ತ ಕೂಡುವುದಕ್ಕಾಗು ವುದಿಲ್ಲಪ್ಪಾ. ನನಗೂ ವಯಸ್ಸಾಯಿತು. ನಿನ್ನ ಮದುವೆ ನೋಡಿ ನಾನು ಸಂತೋಷಪಡಬೇಡವೆ ? ನೀನು ಹೀಗೇ ಆಂಜನೇಯನ ಹಾಗೆ ಕೂತಿದ್ದರೆ ನಿಮ್ಮ ತಾಯಿಗೆ ತಾನೇ ಸಂತೋಷವೆ ? ಅವರಿಗಾದರೂ ಸೊಸೆ ಮನೆಗೆ ಬರಲಿ ಅಂತ ಅಪೇಕ್ಷೆಯಿರುವುದಿಲ್ಲವೆ ?"

"ಸರಿ ದಾಸರೇ, ಒಪ್ಪಿದೆ. ಆದರೆ ಅದಕ್ಕೂ ಕಾಲ ಬರಬೇಕಲ್ಲಾ ?"

"ಕಾಲ ಬಂದ ಬಂದು ಹೋಗುತ್ತಿದೆ. ನೀನೇ ಸುಮ್ಮನೆ ತಳ್ಳುತ್ತಿದ್ದೀ."

"ಸರಿಯಾದ ಕಡೆ ಬಂದರೆ ತಾನೆ? ಯಾವುದೋ ಒಂದು ಹೆಣ್ಣು ಅಂತ ಕಟ್ಟಿಕೊಂಡುಬಿಟ್ಟರೆ ಸಾಕೆ?"

"ಛೇ ಛೇ, ಯಾರಾದರೂ ಹಾಗೆ ಹೇಳುತ್ತಾರೆಯೇ? ನಾನು ಕಂಡ ಹಾಗೇ ದಿವಿನಾದ ಕಡೆಯ ಹೆಣ್ಣುಗಳೇ ಬಂದು ಬಂದು ಹೋಗುತ್ತಿವೆ ಯಲ್ಲಯ್ಯಾ? ಆ ನರಸೀಪುರದ ಹೆಣ್ಣು ಏನಾಗಿತ್ತು ಅಂತೀನಿ? ಯಳಂದೂರು ಜಹಗೀರುದಾರರ ಕಡೆಯ ಕನ್ಯೆ ಮುದ್ದುಗಾರನ ಹಾಗೆ ಇರಲಿಲ್ಲವೆ? ಆ ಕಳಲೆ ಯವರ ಸಂಬಂಧವಾದರೂ ಕಳಪೆಯಾಗಿತ್ತೆ? ನೀನು ಹ್ಞೂ ಎಂದರೆ ಸಾಕು, ಮುಂದಿನ ಕೆಲಸವೆಲ್ಲಾ ಹೂವಿನ ಸರ ಎತ್ತಿದ ಹಾಗೆ ನಡೆಯುತ್ತೆ."

"ಆಗಲಿ ನೋಡೋಣ"

ಎಂದು ನಿರಾಸಕ್ತಿಯಿಂದ ನುಡಿದು ಸುಮ್ಮನಾಗುತ್ತಿದ್ದ. ಅವನ ಆಳವನ್ನು ಕಂಡು ಹಿಡಿಯುವುದೇ ಕಷ್ಟವಾಗುತ್ತಿತ್ತು.

ವೆಂಕಮ್ಮನವರು ಸುಬ್ಬಕೃಷ್ಣನ ಮೊರೆಹೊಗುತ್ತಿದ್ದರು.

"ನೀನಾದರೂ ಒಂದು ಮಾತು ಹೇಳಿ ನೋಡು ಸುಬ್ಬು. ಮಧು ದೊಡ್ಡವನಾದ. ದಂಡಿಸಲು ಅವನೇನು ಮಗುವೆ?"

"ಆಗಲಮ್ಮಾ ಆಗಲಿ, ಹೇಳುತ್ತೇನೆ. ಆದರೆ ಅವನು ನನ್ನ ಪಟ್ಟಿಗೇ ಸಿಕ್ಕದೆ ನುಣುಚಿಕೊಳ್ಳುತ್ತಾನೆ."

ನಿಜವಾಗಿಯೂ ಮಧುಸೂದನನ ಮನಸ್ಸು ಸುಬ್ಬಕೃಷ್ಣನ ಯಾವ 'ಪಾತಾಳ ಗರಡಿ'ಗೂ ಸಿಕ್ಕುತ್ತಿರಲಿಲ್ಲ.

ವಾಸ್ತವವಾಗಿ ಅವನ ಮನಸ್ಸು ಮದುವೆಗೆ ವಿರೋಧವಾಗಿರಲಿಲ್ಲ. ಇದು ವರೆಗೆ ಬಂದಿದ್ದ ಹತ್ತಾರು ಹೆಣ್ಣುಗಳಲ್ಲಿ ಒಬ್ಬಳಾದರೂ ಅವನಿಗೆ ಸಮ್ಮತ ವಾಗಿರಲಿಲ್ಲ. ಅವನ ದೃಷ್ಟಿಯಲ್ಲಿ ರೂಪವೇ ಪ್ರಧಾನವಾಗಿದ್ದಿದ್ದರೆ ಅದನ್ನು ತಣಿಸುವ ಹೆಣ್ಣಿಗೇನೂ ಕೊರತೆಯಾಗಿರಲಿಲ್ಲ. ಹಾಗೆ ನೋಡಿದರೆ, ಬಂದಿದ್ದ ಹೆಣ್ಣುಗಳ ಪೈಕಿ ರೂಪವತಿಯರೇ ಹೆಚ್ಚಾಗಿದ್ದರು. ಅವರಿಗೆ ವಿದ್ಯೆಯೂ ಇಲ್ಲದೆ ಇರಲಿಲ್ಲ. ಒಬ್ಬಿಬ್ಬರು ಕಾಲೇಜು ಮೆಟ್ಟಲು ಹತ್ತಿದ್ದ ಬೆಡಗಿಯರೂ ಆಗಿದ್ದರು. ಆದರೆ ಮಧುಸೂದನನ ಮನಸ್ಸು ರೂಪಕ್ಕಿಂತ ಮಿಗಿಲಾದ ಯಾವುದೋ ಒಂದನ್ನು ಅರಸುತ್ತಿತ್ತು. ಬರಿಯ ಬಣ್ಣದ ಬೊಂಬೆಗಳ ಥಳುಕಿಗೆ ಅವನ ಕಣ್ಣು ಕೋರೈಸುತ್ತಿರಲಿಲ್ಲ.

ಯಾವುದನ್ನು ಕಾಣದೆ, ಅದೇ ಬೇಕೆಂದು ಅವನು ಹಗಲುಗಸು ಕಾಣುತ್ತಿದ್ದನೋ ಅದನ್ನು ಲಲಿತನಲ್ಲಿ ಮೊದಲ ಬಾರಿಗೆ ಕಂಡಾಗ ಅವನ ಮನಸ್ಸು ಉಲ್ಲಾಸಗೊಂಡಿತ್ತು. ಅವಳ ಚೆಲುವಿಗೆ ಇಮ್ಮಡಿಯಾದ ಕಳೆ ಕೊಡುವ ಆ ವಿಶೇಷವಸ್ತು ಅವಳಲ್ಲಿತ್ತು. ರತ್ನವೊಂದನ್ನು ಬೆಳಕಿಗೆ ಎತ್ತಿ ಹಿಡಿದಾಗ ಅದರ ಸುತ್ತ ಪರಿವೇಷವಾಗಿ ಮಿನುಗುವ ಕಾಂತಿಯೇ ಅದಕ್ಕೊಂದು ಭೂಷಣವಾಗಿ ನೋಡುವವರ ಚಿತ್ತವನ್ನು ಸೂರೆಗೊಳ್ಳುವಂತೆ ಲಲಿತನ ಚೆಲುವನ್ನಾವರಿಸಿದ್ದ ಜೀವಕಾಂತಿ ಮಧುಸೂದನನ ಕಣ್ಣನ್ನು ಕೋರೈಸಿ, ಅವನ ಹೃದಯವನ್ನೂ ಪೂರ್ತಿ ಸೆಳೆದುಕೊಂಡುಬಿಟ್ಟಿತ್ತು.

ಲಲಿತನನ್ನು ಮೆಚ್ಚಿದ ಮನಸ್ಸು ಬೇರೆ ಚೆಲುವನ್ನು ಮೆಚ್ಚಲು ನಿರಾಕರಿಸುತ್ತಿತ್ತು.

ಇಬ್ಬರಲ್ಲೂ ಪರಸ್ಪರ ಪ್ರಣಯ ಮೂಡಿದ ಮೇಲಂತೂ ಪರಿಸ್ಥಿತಿಯೇ ಬದಲಾಯಿಸಿತು.

ಮಧುಸೂದನ ಆಗಾಗ ಸುಬ್ಬಕೃಷ್ಣನ ಹತ್ತಿರ ನಟರಾಜ ಅಯ್ಯರರ ಅತಿಥ್ಯದ ವಿಷಯ ಕೊಂಡಾಡುತ್ತಿದ್ದ. ತನ್ನ ಮದರಾಸ್ ಪ್ರವಾಸವನ್ನು ಆಸಕ್ತಿಯಿಂದ ಬಣ್ಣಿಸುತ್ತಿದ್ದ. ಮಾತಿನ ಮಧ್ಯೆ ಲಲಿತನ ವಿಚಾರವೂ ಬರುತ್ತಿತ್ತು. ಅವಳ ನಾಟ್ಯ ನೈಪುಣ್ಯ, ನಯವಿನಯುಗಳನ್ನು ಪ್ರಶಂಸಿಸುತ್ತ ಒಮ್ಮೊಮ್ಮೆ ತನ್ನನ್ನೇ ಮರೆಯುತ್ತಿದ್ದ. ಅವನು ಎಷ್ಟೇ ಎಚ್ಚರಿಕೆ ತೆಗೆದುಕೊಂಡರೂ ಅವನ ಮಾತಿನ ರೀತಿಯಿಂದ, ಮುಖಭಾವದಿಂದ ಸುಬ್ಬಕೃಷ್ಣನಿಗೆ ಸಂಶಯ ಬಂದುಬಿಡುತ್ತಿತ್ತು. ಬಟ್ಟೆಯಲ್ಲಿ ಕಟ್ಟಿಟ್ಟ ಪರಿಮಳ ನೈಸರ್ಗಿಕವಾಗಿ ಹೊರಗೆ ಬರಲೆಳಸುವಂತೆ ಮಧುಸೂದನನ ಅಂತರಂಗದಲ್ಲಿ ಅರಳಿದ್ದ ಪ್ರಣಯ ಅವನಿಗೆ ತಿಳಿಯದಂತೆ ಹೊರಗೆ ಬರಲು ಹವಣಿಸುತ್ತಿತ್ತು.

ಮದರಾಸಿನಿಂದ ಪದೇ ಪದೇ ಮಧುಸೂದನನಿಗೆ ಕಾಗದ ಬರುತ್ತಿರುವ ವಿಷಯವೂ ಸುಬ್ಬಕೃಷ್ಣನಿಗೆ ತಿಳಿದಿತ್ತು. ಅವನ ಮೇಜಿನ ಮೇಲೆ ಸುವಾನೆ ಸೂಸುತ್ತಿದ್ದ ಕವರುಗಳನ್ನು ಎಷ್ಟೋ ಸಲ ಕಂಡಿದ್ದ. ಚಾಣಾಕ್ಷನಾದ ಅವನಿಗೆ ಎರಡಿಗೆ ಎರಡನ್ನು ಸೇರಿಸಿದರೆ ನಾಲ್ಕಾಗುತ್ತದೆ ಎಂಬುದನ್ನು ಹೊಸದಾಗಿ ಹೇಳಿಕೊಡಬೇಕಾಗಿರಲಿಲ್ಲ. ಅದಕ್ಕೇ ಸಮಯ ಸಿಕ್ಕಿದಾಗಲೆಲ್ಲಾ ಗೆಳೆಯನನ್ನು

ಕೀಟಲೆ ಮಾಡುತ್ತಿದ್ದ. ಮಧು ಅನ್ಯಮನಸ್ಕನಾಗಿ ಕುಳಿತಿದ್ದರಂತೂ ಸುಬ್ಬಕೃಷ್ಣ ಸುಮ್ಮನಿರುತ್ತಲೇ ಇರಲಿಲ್ಲ.

"ವಿದ್ವಾಂಸರಿಗೆ ಮದರಾಸಿನ ಭ್ರಮೆ ಹತ್ತಿರುವ ಹಾಗಿದೆ."

"ಇಲ್ಲ ಸುಮ್ಮನಿರು, ಮಹರಾಯ. ನೀನು ಬೇರೆ ಗೋಳು ಹೊಯಿದು ಕೊಳ್ಳಬೇಡ."

"ನನಗೆಲ್ಲಾ ಗೊತ್ತಮ್ಮ, ನನ್ನ ಹತ್ತಿರವೇ ಬಿಡಬೇಡ."

ಎಂದು ಸುಬ್ಬಕೃಷ್ಣ ಬಾಯಿ ಮುಚ್ಚಿಸುತ್ತಿದ್ದ. ಮಧುಸೂದನ ಮಾತಾಡುವುದಕ್ಕೇ ಅವಕಾಶವಾಗುತ್ತಿರಲಿಲ್ಲ.

## ೨೫

ಲಲಿತ ಹದಿನೈದು ದಿನಕ್ಕೊಮ್ಮೆ ತಪ್ಪದೆ ಕಾಗದ ಬರೆಯುತ್ತಿದ್ದಳು.

ಅವಳ ಎಲ್ಲಾ ಕಾಗದಗಳಲ್ಲಿಯೂ ಏಕನಾದದ ಹಾಗೆ ಒಂದೇ ಧ್ವನಿ ಮಿಡಿಯುತ್ತಿತ್ತು :

"ಮದರಾಸಿಗೆ ಯಾವಾಗ ಬರುತ್ತೀರಿ ?"

ಅದಕ್ಕೆ ಉತ್ತರ ಕೊಡುವುದು ಸುಲಭವಾಗಿರಲಿಲ್ಲ.

ಮಧುಸೂದನ ಮದರಾಸಿಗೆ ಹೋಗಿ ಬಂದು ಹಲವಾರು ತಿಂಗಳಾಗಿತ್ತು, ನಿಜ. ಲಲಿತ ಆ ಅವಧಿಯಲ್ಲಿ ಹತ್ತಾರು ಕಾಗದ ಬರೆದು, ಯಾವಾಗ ಬರುತ್ತೀರಿ ಎಂದು ಏಳೆಂಟು ಸಲ ಕೇಳಿದ್ದಳು.

ಅವಳಿಗೇನು ಉತ್ತರ ಬರೆಯುವುದು ?

ದೇಹ ಮೈಸೂರಿನಲ್ಲೇ ಇದ್ದರೂ ಮನಸ್ಸು ಮಾತ್ರ ರೆಕ್ಕೆ ತಳೆದು ದಿನಕ್ಕೆ ಹತ್ತು ಸಲವಾದರೂ ಮದರಾಸಿಗೆ ಹಾರಿ ಹೋಗುತ್ತಿತ್ತು. ಅವನ ಅಗಲಿಕೆಯಿಂದ ಅವಳು ಅಲ್ಲಿ ಪರಿತಪಿಸುತ್ತಿದ್ದ ಹಾಗೆಯೇ ಅವಳ ವಿರಹದಿಂದ ಅವನೂ ಇಲ್ಲಿ ಕುದಿಯುತ್ತಿದ್ದ. ಬೇಕೆಂದಾಗ ಮದರಾಸಿಗೆ ಹೋಗುವುದು ಸಾಧ್ಯವಿರಲಿಲ್ಲ. ಅದಕ್ಕೂ ಒಂದು ಕಾರಣ ಬೇಕಾಗಿತ್ತು. ಆ ಪ್ರಾಂತದಲ್ಲಿ ಸದ್ಯಕ್ಕೆ ಸಂಗೀತ ಕಚೇರಿ ಕೂಡ ಯಾವುದೂ ಇರಲಿಲ್ಲ. ನಿಮಿತ್ತವಿಲ್ಲದೆ ಹೋಗುವುದು ಚೆನ್ನಾಗಿರಲಿಲ್ಲ. ಅಂಥ ಗೌರವವಿಲ್ಲದ ಕೆಲಸಕ್ಕೆ ಅವನ ಮನಸ್ಸು ಒಡಂಬಡುತ್ತಿರಲಿಲ್ಲ. ಈಗ ಬರುತ್ತೇನೆ, ಆಗ ಬರುತ್ತೇನೆ ಎಂದು ಕುಂಟುನೆವ ಹೂಡುವ ಬದಲು ನಿಜಸ್ಥಿತಿ

ಸೂಚಿಸುವುದು ಅಗತ್ಯವಾಗಿತ್ತು. ಒಂದೆರಡು ಕಾಗದಗಳಲ್ಲಿ ಹಾಗೆ ಬರೆದೂ ಇದ್ದ. ಈ ಸ್ಥಿತಿ ಅವಳಿಗೆ ಅರ್ಥವಾಗುತ್ತಿದ್ದರೂ ಮನಸ್ಸು ಮಾತ್ರ ಅದನ್ನು ಒಪ್ಪಿಕೊಳ್ಳದೆ ತಂಟೆಮಾಡುತ್ತಿತ್ತು; ಪ್ರಣಯ ವಿವೇಕಕ್ಕೆ ಮುಸುಕು ಹಾಕುತ್ತಿತ್ತು.

"ನನ್ನ ಮೇಲೆ ನಿಮಗೆ ನಿಜವಾಗಿ ಪ್ರೇಮವಿಲ್ಲ. ಇದ್ದಿದ್ದರೆ ಹೀಗೆ ಗೋಳಾಡಿಸುತ್ತಿದ್ದಿರಾ? ಒಂದೆರಡು ದಿನದ ಮಟ್ಟಿಗೆ ಬರಬಾರದೆ? ಮನೆಯಲ್ಲಿ ಯಾರೂ ಏನೂ ಅಂದುಕೊಳ್ಳುವುದಿಲ್ಲ. ಏನೋ ಕೆಲಸದ ಮೇಲೆ ಬಂದಿರಬಹುದೆಂದು ತಿಳಿದುಕೊಳ್ಳುತ್ತಾರೆ. ಎರಡು ದಿನ ಹಾಯಾಗಿದ್ದು ಹೋಗಬಹುದು. ಸಂಕೋಚಪಡಬೇಡಿ. ಈ ಕಾಗದ ನೋಡಿ ನೀವು ಬರದಿದ್ದರೆ ಇನ್ನು ಮೇಲೆ ನಾನು ನಿಮಗೆ ಕಾಗದವನ್ನೇ ಬರೆಯುವುದಿಲ್ಲ"

ಎಂದು ಒಂದೆರಡು ಕಾಗದಗಳಲ್ಲಿ ನಿಷ್ಠುರ ಮಾಡಿಯೂ ಬರೆದಿದ್ದಳು.

ಇದಕ್ಕೆ ಏನಾದರೊಂದು ಉಪಾಯವನ್ನು ಹುಡುಕಲೇ ಬೇಕಾಗಿತ್ತು.

ಯೋಚಿಸಿ ಯೋಚಿಸಿ ಬೇಸತ್ತಿದ್ದ ಮಧುಸೂದನನಿಗೆ ಇದ್ದಕ್ಕಿದ್ದ ಹಾಗೆ ಒಂದು ಮಾರ್ಗ ಹೊಳೆಯಿತು.

ನಟರಾಜ ಅಯ್ಯರರೂ ಅವರ ಕುಟುಂಬವೂ ಹಿಂದೆ ಯಾವಾಗಲೋ ಒಂದು ಸಲ ದಸರ ಸಮಯಕ್ಕೆ ಮೈಸೂರಿಗೆ ಬಂದಿದ್ದುದಾಗಿ ಮಧುಸೂದನ ಅವರ ಬಾಯಿಂದಲೇ ಕೇಳಿದ್ದ. ದಸರ ಉತ್ಸವ ನೋಡಿದ ಜ್ಞಾಪಕ ಲಲಿತನಿಗೆ ಇತ್ತೋ ಇಲ್ಲವೋ ಗೊತ್ತಿರಲಿಲ್ಲ. ಹೇಗಿದ್ದರೂ ನವರಾತ್ರಿ ಸಮೀಪಿಸುತ್ತಿತ್ತು. ಆ ಸಮಯಕ್ಕೆ ಅವರನ್ನೆಲ್ಲಾ ಮೈಸೂರಿಗೆ ಬರಮಾಡಿಕೊಂಡರೆ ಸ್ವಾಮಿ ಕಾರ್ಯವೂ ಆಯಿತು, ಸ್ವಕಾರ್ಯವೂ ಆಯಿತು; ಅಯ್ಯರರು ತನಗಿತ್ತಿದ್ದ ಆತಿಥ್ಯಕ್ಕೆ ಪ್ರತಿಯಾಗಿ ಅವರನ್ನು ಉಪಚರಿಸುವ ಒಂದು ಅವಕಾಶವೂ ಸಿಕ್ಕಿದ ಹಾಗಾಯಿತು – ಎಂದು ಅವನು ಲೆಕ್ಕ ಹಾಕಿದ.

ಈ ಯೋಚನೆಯನ್ನು ಮನಸ್ಸಿನಲ್ಲೇ ಅಳೆದು ಸುರಿದು ಅವನು ಒಂದು ನಿರ್ಧಾರಕ್ಕೆ ಬಂದ.

ಮಾರನೆಯ ದಿನವೇ ಮಧುಸೂದನನಿಂದ ನಟರಾಜ ಅಯ್ಯರರಿಗೆ ಆದರಪೂರ್ವಕವಾದ ಆಹ್ವಾನ ಹೋಯಿತು. ಕಾಗದದಲ್ಲಿ, ಪತ್ನೀಪುತ್ರೀ ಸಮೇತರಾಗಿ ದಯಮಾಡಿಸಿ ನಾಲ್ಕುದಿನ ಇದ್ದು ನವರಾತ್ರಿ ನೋಡಿಕೊಂಡು ಹೋಗಬೇಕೆಂದು

ಕೋರಿದ್ದ. 'ಪತ್ನೀಪುತ್ರೀಸಮೇತರಾಗಿ' ಎನ್ನುವುದನ್ನು ಒತ್ತಿ ಹೇಳು ವುದನ್ನು ಅವನು ಮರೆತಿರಲಿಲ್ಲ.

ಕಾಗದ ನಟರಾಜ ಅಯ್ಯರರಿಗೆ ತಲಪಿದಾಗ ಅವರಿಗೆ ಸಂತೋಷದೊಡನೆ ಅಚ್ಚರಿಯೂ ಆಯಿತು. ನವರಾತ್ರಿಯ ಸಮಯಕ್ಕೆ ಸರಿಯಾಗಿ ಬಂದಿದ್ದ ವಿಶ್ವಾಸದ ಆಹ್ವಾನ, ಮಧುಸೂದನ ಸೌಜನ್ಯವನ್ನು ವ್ಯಕ್ತಪಡಿಸಿದ್ದ ರೀತಿ ಅವರ ಅಂತರಂಗವನ್ನು ಮುಟ್ಟಿದವು. ಮದರಾಸಿಗೆ ಅವನು ಬಂದಿದ್ದಾಗ ತಾವು ಮಾಡಿದ ಆತಿಥ್ಯದ ದಾಕ್ಷಿಣ್ಯವನ್ನು ತೀರಿಸಲು ಅವನು ಹೀಗೆ ಯೋಚಿಸಿದ್ದಾ ನೆಂದು ಅವರಿಗೆ ಅರ್ಥವಾಗುವುದು ಕಷ್ಟವಾಗಲಿಲ್ಲ. ಅವನ ಶಿಷ್ಟಾಚಾರದ ದೃಷ್ಟಿ ಯನ್ನು ಅವರು ಮೆಚ್ಚಿಕೊಂಡರು.

ಕಾಗದದ ವಿಷಯವನ್ನು ಮೀನಾಕ್ಷಮ್ಮನವರ ಹತ್ತಿರ ಪ್ರಸ್ತಾಪಿಸಿದಾಗ ಅವರೇನೋ ಅಷ್ಟು ಉತ್ಸಾಹವಿಲ್ಲದಿರುವವರ ಹಾಗೆ,

" ಹೋಗಿಬಿಟ್ಟು ಬನ್ನಿ ತಂದೆ – ಮಗಳು "

ಎಂದು ರಾಗವಾಗಿ ಎಳೆದರು.

" ನೀನು ?"

" ನಾನು ಯಾಕೆ ಸುಮ್ಮನೆ ?"

" ಸುಮ್ಮನೆ ಎಂದರೆ ಏನರ್ಥ ?"

" ಸುಮ್ಮನೆ ನಾನು ಬಂದು ಏನು ಮಾಡಬೇಕೂಂತ ? ಮನೆಯಲ್ಲಿ ಬೇರೆ ಯಾರೂ ಇರುವುದಿಲ್ಲ."

" ನಾವು ಹೋಗಿ ಏನು ಮಾಡುತ್ತೇವೋ ನೀನು ಬಂದೂ ಅದೇ ಮಾಡು ವುದು. ನಿನ್ನ ಮನೆ ಇದ್ದ ಕಡೆಯೇ ಇರತ್ತೆ. ಎರಡು ದಿವಸದಲ್ಲಿ ಅದೆಲ್ಲಿಗೂ ಹಾರಿಹೋಗುವುದಿಲ್ಲ. ಆ ಹುಡುಗ ಅಷ್ಟು ವಿಶ್ವಾಸದಿಂದ ಬರೆದಿದಾನೆ. ಎರಡು ದಿನ ಹೋಗಿ ಬಂದರೆ ನಿನ್ನ ಗೌರವಕ್ಕೇನೂ ಕಡಮೆಯಾಗುವುದಿಲ್ಲ. ನಡಿ ಸುಮ್ಮನೆ "

ಎಂದು ಗಲಾಟೆ ಮಾಡಿ ಹೆಂಡತಿಯನ್ನೂ ಹೊರಡಿಸಿಕೊಂಡು ಹೊರಟರು.

ಲಲಿತನಿಗಂತೂ ಚತುರ್ಭುಜವಾಗಿತ್ತು. ದಸರ ಸಮಯಕ್ಕೆ ಆಹ್ವಾನ ಬರಬಹುದೆಂದು ಅವಳಿಗೆ ಮುಂದಾಗಿಯೇ ಸೂಚನೆ ಗೊತ್ತಾಗಿದ್ದರೂ ಅದು

ಬರುವವರೆಗೂ ಮನಸ್ಸು ತಳಮಳಪಡುತ್ತಲೇ ಇತ್ತು. ಬಂದ ಮೇಲೆ ತಂದೆ ಏನೆನ್ನುವರೋ, ತಾಯಿ ಒಪ್ಪುತ್ತಾರೋ ಇಲ್ಲವೋ ಎಂಬ ಕಳವಳವೂ ಬಾಧಿಸ ತೊಡಗಿತು. ಆದರೆ ಕಾಗದ ನೋಡಿದ ಕೂಡಲೆ ಅಯ್ಯರರು ಸಂತೋಷದಿಂದ ತಮ್ಮ ಸಮ್ಮತಿ ಸೂಚಿಸಿಬಿಟ್ಟಿದ್ದರು. ಲಲಿತನಿಗೆ ಹಿಡಿಸಲಾರದ ತನ್ನ ಸಂತೋಷವನ್ನು ಮುಚ್ಚಿಟ್ಟುಕೊಳ್ಳುವುದೇ ಕಷ್ಟವಾಯಿತು.

ಮೂವರೂ ಕಾರಿನಲ್ಲಿ ಹೊರಡುವುದೆಂದೂ, ಮೈಸೂರಿಗೆ ಹೋದ ಮೇಲೆ ಶ್ರೀರಂಗಪಟ್ಟಣ, ಸೋಮನಾಥಪುರ, ನಂಜನಗೂಡು, ಕನ್ನಂಬಾಡಿ, ಶಿವ ಸಮುದ್ರಗಳನ್ನು ನೋಡಿ ಬರಬೇಕೆಂದೂ ಇತ್ಯರ್ಥವಾಯಿತು. ವಿಶ್ವಾಸದ ಆಹ್ವಾನಕ್ಕಾಗಿ ವಂದಿಸಿ, ತಾವು ಹೊರಡುವ ದಿನವನ್ನು ತಿಳಿಸಿ ಅಯ್ಯರರು ಮಧುಸೂದನನಿಗೆ ಪ್ರತ್ಯುತ್ತರ ಬರೆದು ಹಾಕಿದರು. ಲಲಿತ ತನಗೆ ಬೇಕಾದ ಸೀರೆ ಬ್ಲೌಸುಗಳನ್ನೂ ಇತರ ಬಟ್ಟೆಬರೆಗಳನ್ನೂ ವಿತರಣೆಯಿಂದ ಜೋಡಿಸಿ ತನ್ನ ಸೂಟ್‌ಕೇಸಿಗೆ ತುಂಬಿಕೊಂಡಳು. ಗಂಡ-ಹೆಂಡತಿಯರ ಬಟ್ಟೆಬರೆಗಳಿಗೆ ಇನ್ನೊಂದು ದೊಡ್ಡ ಸೂಟ್‌ಕೇಸೂ ಹೋಲ್ಡಾಲುಗಳಲ್ಲಿ ಮೂರು ಹಾಸಿಗೆಗಳೂ ಸಿದ್ಧವಾದವು. ಜೊತೆಗೆ ಮದರಾಸ್ ಮೂಸಂಬಿ ಹಣ್ಣಿನ ದೊಡ್ಡ ಬುಟ್ಟಿಯೂ ಒಂದು ಸೇರಿತು.

ಬೆಳಗ್ಗೆ ಮದರಾಸ್ ಬಿಟ್ಟ ಅಯ್ಯರರ ಕಾರು ಸಾಯಂಕಾಲಕ್ಕೆ ಮೈಸೂರು ಸೇರಿತು. ಅದು ಒಂಟಿಕೊಪ್ಪಲನ್ನು ಪ್ರವೇಶಿಸಿ ಮಧುಸೂದನನ ಮನೆಯ ಹತ್ತಿರ ಬಂದಾಗ ಬಾಗಿಲಲ್ಲಿ ಅವನೂ ಸುಬ್ಬಕೃಷ್ಣನೂ ನಿಂತಿದ್ದು ಸ್ವಾಗತಿಸಿದರು. ಮಧುಸೂದನ ಸುಬ್ಬಕೃಷ್ಣನನ್ನು ಅಯ್ಯರರಿಗೆ ಪರಿಚಯ ಮಾಡಿಸಿ ಕೊಟ್ಟ. ಲಲಿತನ ಕಡೆ ತಿರುಗಿ,

"ಇವರೇ ಶ್ರೀಮತಿ ಲಲಿತಾದೇವಿ. ನಾಟ್ಯದಲ್ಲಿ ತುಂಬ ಪರಿಶ್ರಮ ಪಡೆದಿದ್ದಾರೆ"

ಎಂದ. ಸುಬ್ಬಕೃಷ್ಣ ಕೈಜೋಡಿಸಿದ. ಲಲಿತ ಮಧುಸೂದನನ ಕಡೆ ನಗುಮೊಗದಿಂದ ನೋಡಿ ಆಮೇಲೆ ಸುಬ್ಬಕೃಷ್ಣನ ಕಡೆ ತಿರುಗಿ,

"ನಮಸ್ತೇ"

ಎಂದಳು. ಅವಳನ್ನು ಒಂದೇ ಕ್ಷಣದಲ್ಲಿ ಆಪಾದಮಸ್ತಕ ನೋಡಿದ ಸುಬ್ಬಕೃಷ್ಣ ಮಧುಸೂದನನ ಸದಭಿರುಚಿಯನ್ನು ಮನಸ್ಸಿನಲ್ಲೇ ಮೆಚ್ಚಿಕೊಂಡ.

ಅಷ್ಟು ಹೊತ್ತಿಗೆ ಬಾಗಿಲಿಗೆ ಬಂದಿದ್ದ ವೆಂಕಮ್ಮನವರು ವಿಶ್ವಾಸ ಪೂರ್ವಕವಾಗಿ ಮೀನಾಕ್ಷಮ್ಮನವರನ್ನೂ ಲಲಿತನನ್ನೂ ಒಳಗೆ ಕರೆದೊಯ್ದರು.

ಹಜಾರದಲ್ಲಿ ದೊಡ್ಡ ರತ್ನಕಂಬಳಿ ಹಾಸಿ ಗೋಡೆಗೆ ಒರಗುದಿಂಬು ಗಳನ್ನಿಟ್ಟಿತ್ತು. ಅಯ್ಯರರು ಸ್ವಲ್ಪ ಹೊತ್ತು ಕುಳಿತು ವಿಶ್ರಮಿಸಿಕೊಂಡರು. ಲಲಿತ ತಾಯಿಯ ಜೊತೆಯಲ್ಲಿ ಅಡುಗೆಮನೆ ಸೇರಿದಳು. ಎಲ್ಲರಿಗೂ ಫಲಾಹಾರ ಸಿದ್ಧವಾಗಿತ್ತು. ಕೇಸರಿಭಾತ್, ಬೋಂಡ ಕಾಫಿಗಳಿಂದ ಪ್ರಯಾಣದ ಆಯಾಸ ಸ್ವಲ್ಪಮಟ್ಟಿಗೆ ಪರಿಹಾರವಾಯಿತು.

ಅಯ್ಯರ್, ಮಧುಸೂದನ, ಸುಬ್ಬಕೃಷ್ಣ ಹೊರಗೆ ಕುಶಲ ಪ್ರಶ್ನೆಯಲ್ಲಿ ತೊಡಗಿದ್ದಾಗ ಅಡುಗೆಯ ಮನೆಯಲ್ಲಿ ಹೆಂಗಸರು ಪರಸ್ಪರ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಿದ್ದರು.

"ನಮ್ಮ ಹುಡುಗ ಮದರಾಸಿನಲ್ಲಿ ನೀವು ಮಾಡಿದ ಉಪಚಾರ ಸ್ಮರಿಸಿ ಕೊಳ್ಳದೆ ಇದ್ದದಿನವೇ ಇಲ್ಲಾಂದ್ರೆ ಮಾತು ಮಾತಿಗೂ ಅದನ್ನು ಹೇಳುತಾನೇ ಇರುತಾನೆ"

ಎಂದು ವೆಂಕಮ್ಮನವರು ಹೊಗಳಿದರು.

"ನಾವು ಮಾಡಿದ ಉಪಚಾರ ಅಷ್ಟರಲ್ಲೇ ಇದೆ. ಏನೋ ಎರಡು ದಿನ ಇದ್ದರಮ್ಮ. ಅಷ್ಟಕ್ಕೇ ಎಷ್ಟು ಸಂಕೋಚ ಪ್ರಕೃತಿ ಅವರದು. ಇನ್ನೂ ಎರಡು ದಿನ ಇರಿ ಅಂತ ಯಜಮಾನರು ಒತ್ತಾಯ ಮಾಡಿದರೂ ಇರಲಿಲ್ಲ"

ಎಂದು ಮೀನಾಕ್ಷಮ್ಮನವರು ತಮ್ಮ ಹರಕುಮುರುಕಾದ ಕನ್ನಡದಲ್ಲಿ ನುಡಿದರು. ಗಂಡನ ಸರ್ವಿಸಿನ ಬಹುಭಾಗ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಕಳೆದಿದ್ದರೂ ಮೀನಾಕ್ಷಮ್ಮನವರು ಅದೇಕೋ ಚೆನ್ನಾಗಿ ಕನ್ನಡ ಕಲಿತು ಕೊಳ್ಳುವ ಉತ್ಸಾಹ ತೋರಿಸಿರಲಿಲ್ಲ.

"ಹೌದು, ಅವನು ಮನೆಯಲ್ಲೂ ಹಾಗೇ. ಸ್ವಲ್ಪಸಂಕೋಚದ ಸ್ವಭಾವ. ಅದಿರಲಿ, ಏನೋ ಬಡವರು ಅಂತ ತಾತ್ಸಾರ ಮಾಡದೆ ಕರೆದದ್ದಕ್ಕೆ ದೊಡ್ಡ ಮನಸ್ಸು ಮಾಡಿ ಬಂದಿರಲ್ಲಾ"

"ಬಡವರು ಅಂತ ಅನ್ನಬೇಡಿರಿ. ನಿಮ್ಮ ಮಗನ ಕೀರ್ತಿ ನೋಡಿದರೆ ಸಂತೋಷವಾಗತ್ತೆ. ಆ ಭಾಗ್ಯದ ಮುಂದೆ ಇನ್ನು ಭಾಗ್ಯವೆ ತಾಯಿ? ಅದು

ಬಾ ಎಂದರೆ ಇತರರಿಗೆ ಬರತ್ತೆಯೆ? ಮದರಾಸಿನಲ್ಲಿ ಅವರ ಕಚೇರಿ ಕೇಳಿ ಜನ ಸಂತೋಷಪಟ್ಟದ್ದು ನೀವು ನೋಡಬೇಕಾಗಿತ್ತು"

ಎಂದು ಮೀನಾಕ್ಷಮ್ಮನವರು ಪ್ರತ್ಯುಪಚಾರ ನುಡಿದರು.

ಮಗನ ಪ್ರಶಂಸೆ ಕೇಳಿ ವೆಂಕಮ್ಮನವರ ಹೃದಯ ಹೆಮ್ಮೆಯಿಂದ ಉಬ್ಬಿತು.

ಹೊರಗಡೆಯೂ ಇದೇ ಥಾಟಿಯಲ್ಲಿ ಮಾತುಕತೆ ನಡೆಯುತ್ತಿತ್ತು. ಮಧುಸೂದನನೂ ಉಪಚಾರ ಹೇಳುತ್ತಿದ್ದ.

"ಮನೆ ತುಂಬ ಕಿಷ್ಕಿಂಧ. ತಾವು ಸಂಕೋಚ ಪಟ್ಟುಕೊಳ್ಳಬಾರದು."

"ಕಿಷ್ಕಿಂಧವೇ? ಚೆನ್ನಾಗಿ ಹೇಳಿದಿರಿ, ಮಿ॥ ಮಧುಸೂದನ್. ಇಷ್ಟು ಅಚ್ಚುಗಟ್ಟಾದ ಮನೆ ಇದ್ದಿದ್ದರೆ ನಾನು ಒಂದು ಮದುವೆ ನಡಸುಬಿಡುತ್ತಿದ್ದೆ."

ಎಲ್ಲರೂ ನಕ್ಕರು.

ಮಾತಾಡುತ್ತ ಆಡುತ್ತ ಹೊತ್ತು ಕಳೆದು ರಾತ್ರಿಯ ಊಟದ ವೇಳೆ ಬಳಿ ಸಾರುತ್ತಿತ್ತು.

ವೆಂಕಮ್ಮನವರು ಸೊಗಸಾದ ಈರನಗೆರೆ ಬದನೇಕಾಯಿ ಹಾಕಿ ಹುಳಿ ಮಾಡಿ, ಹಪ್ಪಳ ಸಂಡಿಗೆ ಕರಿದಿದ್ದರು. ಮಧುಸೂದನ ಸುಬ್ಬಕೃಷ್ಣನನ್ನೂ ಅಲ್ಲೇ ಊಟಕ್ಕೆ ಎಬ್ಬಿಸಿದ.

ಪರಸ್ಪರ ಉಪಚಾರದಲ್ಲಿ ಊಟ ಸಾಗಿತು.

ಊಟವಾದಮೇಲೆ ಗಂಡಸರೆಲ್ಲರೂ ರೂಮಿಗೆ ಹೋದರು. ಸೊಗಸಾದ ಮೈಸೂರು ಚಿಗುರು ವೀಳೆಯದೆಲೆ, ಬಣ್ಣಕಟ್ಟಿದ ಅಡಿಕೆ ಅವರ ಆಗಮನ ಕಾಯುತ್ತಿದ್ದವು. ಮೈಸೂರು ಎಲೆ ಎಂದರೆ ಅಯ್ಯರರಿಗೆ ತುಂಬ ಇಷ್ಟ. ಎರಡು ಕವಳಿಗೆ ಬುತ್ತಿ ಚಿಗುರು ಅವರ ದವಡೆ ಸೇರಿತು. ಸ್ವಲ್ಪ ಹೊತ್ತು ಲೋಕಾಭಿರಾಮವಾಗಿ ಮಾತಾಡುತ್ತಿದ್ದು ಆಮೇಲೆ ಸುಬ್ಬಕೃಷ್ಣ ಹೊರಟ. ಅಯ್ಯರ್, ಮಧುಸೂದನ ಮುಂದುಗಡೆಯ ರೂಮಿನಲ್ಲೇ ಮಲಗಿದರು. ಮೀನಾಕ್ಷಮ್ಮ, ಲಲಿತ ಹಜಾರದಲ್ಲಿ ಹಾಸಿಕೊಂಡರು. ವೆಂಕಮ್ಮನವರಿಗೂ ಅಲ್ಲಿ ಸ್ಥಳವಿದ್ದರೂ ಅವರು ಅಡುಗೆಮನೆಯಲ್ಲೇ ಮಲಗಿಕೊಂಡರು.

ಬೆಳಗ್ಗೆ ಮುಂದಿನ ಕಾರ್ಯಕ್ರಮವನ್ನು ನಿರ್ಧರಿಸುವ ಕೆಲಸವಿತ್ತು.

ಚಾಮುಂಡಿಬೆಟ್ಟ, ಲಲಿತ ಮಹಲ್, ಖಾಸ್ ಬಂಗಲೆಗಳನ್ನು ಬೆಳಗ್ಗೆ

ನೋಡುವುದೆಂದೂ ಸಾಯಂಕಾಲ ಬೃಂದಾವನಕ್ಕೆ ಹೋಗುವುದೆಂದೂ ನಿಶ್ಚಯ ವಾಯಿತು. ಸ್ನಾನ ಕಾಫಿ ತಿಂಡಿ ಮುಗಿಸಿಕೊಂಡು ಎಲ್ಲರೂ ಕಾರಿನಲ್ಲಿ ಬೆಟ್ಟಕ್ಕೆ ಹೊರಟರು. ಚಾಮುಂಡೇಶ್ವರಿಯ ದರ್ಶನ ಮಾಡಿಕೊಂಡು ಇಳಿದು ಬರುತ್ತ ಲಲಿತ ಮಹಲ್ ನೋಡಿಕೊಂಡು ಖಾಸ್ ಬಂಗಲೆ ತಲಪಿದರು. ಅಲ್ಲೆಲ್ಲಾ ಸುತ್ತಾಡಿಕೊಂಡು ಮನೆಗೆ ಹಿಂತಿರುಗುವುದಕ್ಕೆ ಹನ್ನೆರಡು ಘಂಟೆಯಾಯಿತು.

ಸಂಜೆ ವಸ್ತುಪ್ರದರ್ಶನಕ್ಕೆ ಹೋಗಬೇಕೋ ಕನ್ನಂಬಾಡಿಗೆ ಹೋಗ ಬೇಕೋ ಎಂಬ ಜಿಜ್ಞಾಸೆ ಬಂದಿತು. ಕನ್ನಂಬಾಡಿಗೇ ಹೋಗೋಣವೆಂದು ಲಲಿತ ಒತ್ತಾಯ ಮಾಡಿದಳು. ಎಲ್ಲರೂ ಆರೂವರೆಗೆ ಕಾರಿನಲ್ಲಿ ಒಂಟಕೊಪ್ಪಲು ಬಿಟ್ಟು ಏಳು ಘಂಟೆಗೆ ಬೃಂದಾವನ ತಲಪಿದರು. ಲಲಿತ ಬುದ್ಧಿ ತಿಳಿದ ಮೇಲೆ ಬೃಂದಾವನ ನೋಡಿಯೇ ಇರಲಿಲ್ಲ. ಬಣ್ಣ ಬಣ್ಣದ ದೀಪಗಳಿಂದ ಮೆರೆಯುತ್ತಿದ್ದ ಕಾರಂಜಿಗಳನ್ನು ನೋಡಿ ಅವಳು ಮುಗ್ಧಳಾಗಿ ನಿಂತುಬಿಟ್ಟಳು. ಹಂತಹಂತ ವಾಗಿ ಇಳಿದು ಬರುತ್ತಿದ್ದ ಕಾಲುವೆಗಳ ನಡುವೆ ಹಾಕಿದ್ದ ವರ್ಣದೀಪಗಳ ಛಾಯೆಯಿಂದ ಹರಿಯುತ್ತಿದ್ದ ನೀರೆಲ್ಲಾ ನಾನಾ ಬಣ್ಣ ತಳೆದು ಸುಂದರವಾಗಿ ಕಾಣುತ್ತಿತ್ತು.

ವಿಶಾಲವಾದ ಸರೋವರದಲ್ಲಿ ಒಂದೆರಡು ದೋಣಿಗಳು ಚಲಿಸುತ್ತಿದ್ದವು. ಮಧ್ಯದಲ್ಲಿ ಜಲರಾಶಿಯನ್ನು ಚಿಮ್ಮುತ್ತ ಕ್ಷಣಕ್ಕೊಂದು ಬಣ್ಣ ತಳೆಯುತ್ತಿದ್ದ ಭಾರಿ ನೀರ್ಕೊಳವೆ ಮನಮೋಹಕವಾಗಿತ್ತು. ಸರೋವರದ ಮೆಟ್ಟಲಿನ ಬಳಿ ಬಂದು ನಿಂತು ಆ ದೃಶ್ಯವನ್ನೇ ನೋಡುತ್ತ ತಲ್ಲೀನರಾಗಿದ್ದ ಇವರನ್ನು ಅಂಬಿಗ ನೊಬ್ಬ ವಿನಯದಿಂದ ಆಹ್ವಾನಿಸಿದ. ನಟರಾಜ ಅಯ್ಯರರು ಹೆಂಡತಿಯ ಮುಖ ನೋಡಿದರು. ಆಕೆ ತಲೆ ಅಲ್ಲಾಡಿಸಿ ಅಸಮ್ಮತಿ ಸೂಚಿಸಿದರು. ಅಯ್ಯರರು ಮಧುಸೂದನನ ಕಡೆ ತಿರುಗಿ,

" ನೀವಿಬ್ಬರೂ ದೋಣಿಯಲ್ಲಿ ಹೋಗಿ ಬನ್ನಿ."

" ನೀವು ?"

" ನಾನೂ ಇವಳೂ ಇಲ್ಲಿಂದಲೇ ನೋಡುತ್ತ ಕುಳಿತಿರುತ್ತೇವೆ "

ಎಂದು ನಕ್ಕರು.

ಲಲಿತ ಮಧುಸೂದನ ದೋಣಿ ಹತ್ತಿ ಕುಳಿತರು. ಅಂಬಿಗ ಸಾವಧಾನ ವಾಗಿ ಹುಟ್ಟು ಹಾಕತೊಡಗಿದ. ದೋಣಿ ನಿಧಾನವಾಗಿ ತೇಲುತ್ತ ದಡದಿಂದ

ದೂರವಾಯಿತು. ಕಾರಂಜಿಗಳ ಮೇಲೆ ಬೀಳುತ್ತಿದ್ದ ಬಣ್ಣಬಣ್ಣದ ಬೆಳಕಿನ ಛಾಯೆ ಸರೋವರದಲ್ಲಿ ಪ್ರತಿಫಲಿಸಿತ್ತು. ಸರಸ್ಸು ಪೂರ್ತಿ ಕತ್ತಲೂ ಅಲ್ಲದ ಪೂರ್ತಿ ಬೆಳಕೂ ಅಲ್ಲದ ಒಂದು ಸ್ನಿಗ್ಧಕಾಂತಿಯಲ್ಲಿ ಹೊಳೆಯುತ್ತಿತ್ತು. ಹತ್ತಿರ ಹತ್ತಿರವಾಗುತ್ತಿದ್ದ ನಡುನೀರಿನ ನೀರ್ಕೊಳವೆ ಸುಯ್ಯೆಂಬ ಸದ್ದಿನೊಡನೆ ವರ್ಣರಂಜಿತವಾದ ನಿರಂತರ ಜಲಧಾರೆಯನ್ನು ಸೂಸುತ್ತಿತ್ತು. ಮಧುಸೂದನ ಪಕ್ಕದಲ್ಲಿ ಕುಳಿತಿದ್ದ ಲಲಿತನ ಎರಡು ಕೈಗಳನ್ನೂ ಹಿಡಿದುಕೊಂಡ. ಅವಳು ಮೆಲ್ಲಗೆ ಎಚ್ಚರಿಸಿದಳು :

"ದೋಣಿಯವನಿದ್ದಾನೆ."

"ಅವನಿಗೇನೂ ಕಾಣುವುದಿಲ್ಲ, ಈ ಕಡೆ ಬೆನ್ನು ತಿರುಗಿಸಿಕೊಂಡಿದ್ದಾನೆ."

"ನಿನ್ನೆಯಿಂದ ನನ್ನನ್ನು ಸರಿಯಾಗಿ ಮಾತೇ ಆಡಿಸಿಲ್ಲ."

"ಸಮಯವೇ ಸಿಕ್ಕಲೊಲ್ಲದು, ಲಲಿತ."

"ಮಧ್ಯಾಹ್ನವೆಲ್ಲಾ ಒಬ್ಬರೇ ರೂಮಿನಲ್ಲಿ ಕುಳಿತಿದ್ದಿರಿ."

"ನಿಮ್ಮ ತಂದೆ ಅಲ್ಲೇ ಮಲಗಿದ್ದರಲ್ಲಾ."

"ಥೂ, ಈ ಸೌಭಾಗ್ಯಕ್ಕೆ ಏಕೆ ಬರಬೇಕಾಗಿತ್ತೋ"

ಎಂದು ಬೆಸರಪಟ್ಟುಕೊಂಡಳು.

"ಕೋಪಿಸಿಕೊಳ್ಳಬೇಡ, ಚಿನ್ನಾ"

"ಕೋಪ ಬರುವ ಹಾಗೆಮಾಡಿ ಕೋಪಿಸಿಕೊಳ್ಳಬೇಡ ಅಂದರೆ?"

"ನಾನೇನು ಮಾಡಲಿ ಹೇಳು?"

"ನನ್ನನ್ನೇ ಕೇಳಿ, ಇದಕ್ಕೆ ಏಕೆ ಬಾ ಅನ್ನಬೇಕಾಗಿತ್ತೋ?"

"ನೋಡು, ನೀನು ಸುಮ್ಮನೆ ಬೇಸರಪಟ್ಟುಕೊಳ್ಳುತ್ತಿದ್ದೀ."

"ಬೆಸರಪಟ್ಟುಕೊಳ್ಳದೆ ನಗಲೆ? ನನಗೆ ಅಳು ಬರುವ ಹಾಗಾಗತ್ತೆ"

ನಿಜವಾಗಿಯೂ ಅಳು ಬರುವ ಹಾಗೆಯೇ ಆಗಿತ್ತು. ಮಧುಸೂಧನ ಅವಳನ್ನು ಮೃದುವಾಗಿ ಅಪ್ಪಿಕೊಂಡ. ದೋಣಿಯ ಇನ್ನೊಂದು ಕೊನೆಯಲ್ಲಿ ಕುಳಿತು ಹುಟ್ಟು ಹಾಕುತ್ತಿದ್ದ ಅಂಬಿಗ ತನ್ನದೇ ಆದ ಬೇರೊಂದು ಪ್ರಪಂಚದಲ್ಲಿ ಮುಳುಗಿಹೋಗಿದ್ದ.

ದೋಣಿ ಎದುರು ದಡ ಸಮೀಪಿಸುತ್ತಿತ್ತು. ಅಂಬಿಗ ಇವರ ಕಡೆ ತಿರುಗಿ,

"ಎದುರು ದಡಕ್ಕೆ ಬಿಡಲೋ, ಇಂಗೇನೇ ತಿರುಗಿಸಲೋ ಬುದ್ಧೀ?"

" ಎದುರು ದಡಕ್ಕೇ ಹೋಗು. ಆ ಮಂಟಪದಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಬರೋಣ."

" ಅಂಗೇ ಆಗಲಿ ಬುದ್ದಿ. ನೋಡಿಕೊಂಡು ಬನ್ನಿ ತಳಾರದಲ್ಲಿ "

ಎಂದು ಉತ್ತರವಿತ್ತ. ದೋಣಿ ಮುಂದೆ ಸಾಗತೊಡಗಿತು.

ದಡದ ಮೇಲೆ ಎತ್ತರವಾಗಿದ್ದ ಸ್ಥಳದಲ್ಲಿ ಸೊಗಸಾದ ಮಂಟಪವಿತ್ತು. ಒಳಗೆ ಮಂದಪ್ರಕಾಶವುಳ್ಳ ಕಂದೀಲು. ಸುತ್ತಲೂ ಬಣ್ಣದ ದೀಪಗಳಿಂದ ಕೂಡಿದ ಕಿರುಕಾರಂಜಿಗಳು. ಅಲ್ಲಲ್ಲೇ ಗುಂಪಾಗಿದ್ದ ಲತಾಗೃಹಗಳು. ರಸ ಸನ್ನಿವೇಶ ಕೈಬೀಸಿ ಕರೆಯುತ್ತಿತ್ತು.

ಮಧುಸೂದನ ಲಲಿತನ ಕೈಹಿಡಿದು ದೋಣಿಯಿಂದ ಇಳಿಸಿ ಅವಳನ್ನು ಮಂಟಪದೆಡೆಗೆ ಕರೆದೊಯ್ದ.

ಅಂಬಿಗ ದೋಣಿಯನ್ನು ದಡಕ್ಕೆ ನೂಕಿ ಹಗ್ಗ ಬಿಗಿದು, ಬೀಡಿ ಹೊತ್ತಿಸಿ ಕೊಂಡು ಆರಾಮವಾಗಿ ಸೇದುತ್ತ ಅವರು ಹೋದ ದಿಕ್ಕನ್ನೇ ನೋಡುತ್ತಾ ಕುಳಿತ. ಇಂಥ ಅನೇಕ ಜೋಡಿಗಳನ್ನು ತನ್ನ ದೋಣಿಯಲ್ಲಿ ಮಂಟಪದೆಡೆಗೆ ಹಾಯಿಸಿದ ಅನುಭವ ಅವನಿಗಿತ್ತು.

ಮಂಟಪದ ಸುತ್ತ ಬೇರೆ ಜನರ ಸಂಚಾರವಿರಲಿಲ್ಲ. ಮಂಟಪ ನೋಡಲು ಬಂದಿದ್ದ ಜನ ಮಬ್ಬಾಗುತ್ತಿದ್ದ. ಹಾಗೆಯೇ ಆಚೆಯ ದಡಕ್ಕೆ ಹೊರಟುಹೋಗಿ ದ್ದರು ಜನರಿಲ್ಲದ್ದನ್ನು ಕಂಡು ಲಲಿತನಿಗೂ ಹರ್ಷವಾಗಿತ್ತು. ಇಬ್ಬರೂ ಗೆಲುವಿ ನಿಂದ ಮಂಟಪದ ಬಳಿಸಾರಿದರು. ಮಧುಸೂದನ ಅವಳನ್ನು ಹತ್ತಿರದಲ್ಲೇ ಇದ್ದ ಒಂದು ಲತಾಗೃಹಕ್ಕೆ ಕರೆದೊಯ್ದು. ಅವನ ಕೈ ಅವಳನ್ನು ಬಳಸಿತು.

" ಈಗಲೂ ಕೋಪವೆ, ರಾಣಿ ?"

ಲಲಿತ ಮಾತಾಡಲಿಲ್ಲ. ಮುಖವೆತ್ತಿ ಅವನನ್ನು ದಿಟ್ಟಿಸಿ ನೋಡಿದಳು. ಆ ನೋಟದಲ್ಲಿ ಮಾತಿಗೂ ಮೀರಿದ ಅನಂತಪ್ರೇಮ ಬುಗ್ಗೆಯಾಗಿ ಚಿಮ್ಮುತ್ತಿತ್ತು.

" ಕೋಪವಿಲ್ಲವೆಂದು ಹೇಳಬಾರದೆ ?"

" ಇಲ್ಲವೆಂದರೆ ಏನು ಬಹುಮಾನ ಕೊಡುವಿರಿ "

" ಇಗೋ, ಇದು "

ಎಂದು ಮೃದುವಾಗಿ ತೋರಿಸಿದ. ಪ್ರಣಯಿಗಳು ಗಾಢಾಲಿಂಗನದಲ್ಲಿ

ಒಂದಾಗಿ ಪ್ರಪಂಚವನ್ನೇ ಮರೆತರು. ಸುತ್ತಣ ಪ್ರಕೃತಿ ಆ ನವಾನುರಾಗವನ್ನು ಸದ್ದಿಲ್ಲದೆ ಬೆರಗಾಗಿ ನೋಡುತ್ತಿತ್ತು. ಲತಾಗೃಹಗಳನ್ನು ಹೊಕ್ಕು ಬಳಸುತ್ತಿದ್ದ ತಂಗಾಳಿ ಬೇರೆಲ್ಲೂ ಹೋಗಲಿಚ್ಛಿಸದೆ ಅಲ್ಲೇ ಸುತ್ತಿ ಸುತ್ತಿ ಸುಳಿಯುತ್ತಿತ್ತು, ಮೆಟ್ಟಿಲು ಮೆಟ್ಟಿಲಾಗಿ ಇಳಿಯುತ್ತಿದ್ದ ನೀರ್ದೊರೆಗಳು ಗೆಲುವಿನಿಂದ ಮುಂದೆ ಸಾಗುತ್ತಿದ್ದವು.

ಲಲಿತ ಮೆಲ್ಲನೆ ಮಧುಸೂದನನ ತೋಳಸೆರೆಯಿಂದ ಬಿಡಿಸಿಕೊಂಡು ಎದ್ದಳು.

"ಏಕೆ ಚಿನ್ನಾ, ಆಗಲೇ ಹೋಗಲು ಅವಸರವೆ?"

"ಇಲ್ಲ, ನಾಳೆ ಏನು ಕಾರ್ಯಕ್ರಮ ಹಾಕಿದ್ದೀರೆಂದು ಕೇಳಬೇಕೆನ್ನಿಸುತ್ತದೆ."

"ನಾಳೆಯ ಕಾರ್ಯಕ್ರಮದ ಯೋಚನೆ ಈಗೇಕೆ?"

"ಈಗ ಅದು ತಿಳಿದರೆ ವಾಸಿ."

"ಕಾರ್ಯಕ್ರಮ ಹಾಕುವವಳು ನೀನೋ – ನಾನೋ?"

"ಅಣ್ಣ ನೀವೂ ಸೇರಿ ಹಾಕಿಬಿಟ್ಟರೆ ಆಗೇಹೋಯಿತು."

"ನಾಳೆ ಒಂದು ಉಪಾಯ ಮಾಡೋಣ ಸುಮ್ಮನಿರು."

"ಏನು ಉಪಾಯ?"

"ಅಣ್ಣ ಅಮ್ಮನನ್ನು ನಂಜನಗೂಡಿಗೆ ರವಾನಿಸೋಣ."

"ಅದು ಹೇಗೆ ಸಾಧ್ಯ?"

"ಕಪಿಲಾಸ್ನಾನ, ದೇವರ ದರ್ಶನ ಮಾಡಿಕೊಂಡು ಬನ್ನಿ ಎಂದರಾಯಿತು."

"ಊಟಕ್ಕೆ?"

"ಶಿವಕೂಟದಲ್ಲಿ ಊಟದ ಏರ್ಪಾಡಿದೆ."

"ಜೊತೆಗೆ ನಮ್ಮನ್ನೂ ಬನ್ನಿ ಎಂದರೆ?"

"ಅದು ತಪ್ಪಿಸಿಕೊಳ್ಳಲು ಮಾರ್ಗವಿದೆ."

"ಹಾಗಾದರೆ ಸಾಯಂಕಾಲದವರೆಗೂ ನಾವು ನಾವೇ!"

ಎಂದು ಹರ್ಷದಿಂದ ಕುಣಿದಾಡಿದಳು.

ಹೊತ್ತು ಹೋಗುತ್ತಿತ್ತು. ಈ ದಡದಲ್ಲಿ ದೋಣಿಯವನು ತಮಗಾಗಿ

ಕಾದು ಕುಳಿತಿದ್ದ. ಆ ದಡದಲ್ಲಿ ಅಯ್ಯರ್ ದಂಪತಿಗಳು ಕಾದಿದ್ದರು. ಹಿಂತಿರುಗಿ ಹೋಗಲೇಬೇಕಾಗಿತ್ತು. ಮಂಟಪಕ್ಕೆ ಹೋಗುವಾಗ ಇದ್ದ ಉತ್ಸಾಹ ಹಿಂತಿರುಗುವಾಗ ಇರಲಿಲ್ಲ. ಇಬ್ಬರೂ ಒಬ್ಬರ ಕೈ ಒಬ್ಬರು ಹಿಡಿದುಕೊಂಡು ನಿಧಾನವಾಗಿ ನೀರಿನ ಹತ್ತಿರ ಇಳಿದು ಬಂದರು.

ದೋಣಿಯವನೂ ಕಿಲಾಡಿ. ನೀರಿನ ಬಳಿಗೆ ಅವರು ಬಂದದ್ದನ್ನು ಕಂಡು ಸೇದುತ್ತಿದ್ದ ಬೀಡಿ ಬಿಸುಟು ಎದ್ದುನಿಂತ.

" ಬಾಳ ಒತ್ತು ಓಗಿಬಿಟ್ಟೆರಲ್ಲಾ, ಬುದ್ದೀ "

ಎಂದ. ಮಧುಸೂದನ ಸುಮ್ಮನೆ ಹ್ಞೂಗುಟ್ಟಿದ.

" ಅಮ್ಮಾವರು ಮಂಟಪ ಗಿಂಟಪ ನೋಡಿಕೊಂಡು ಅಂಗೇ ಕುಂತು ಬುಟ್ಟೆರು ಅಂತ ಕಾಣುತ್ತೈತೆ "

ಎಂದು ಅರ್ಥಗರ್ಭಿತವಾಗಿ ನಕ್ಕ.

ಇಬ್ಬರೂ ಕುಳಿತ ಬಳಿಕ ದೋಣಿ ಚಲಿಸಲಾರಂಭಿಸಿತು. ಇಬ್ಬರಿಗೂ ಮಾತಾಡುವ ಮನಸ್ಸಿರಲಿಲ್ಲ. ಮೌನ ಕ್ಷಣ ಹಿಂದಿನ ರಸಾನುಭವವನ್ನು ಮೆಲುಕು ಹಾಕುತ್ತಿತ್ತು. ಎದುರು ದಡ ಬಳಿ ಸಾರುತ್ತಿತ್ತು. ತಂದೆ ತಾಯಿ ಏನೆನ್ನುವರೋ ಎಂದು ಲಲಿತನಿಗೆ ಒಳಗೇ ಕೊಂಚ ದಿಗಿಲು. ಆದರೆ ಅವರು ನಗುಮೊಗದಿಂದಲೇ ಸ್ವಾಗತಿಸಿದರು.

" ನಿಮ್ಮನ್ನು ವೃಥಾ ಕಾಯಿಸಿಬಿಟ್ಟೆವೆಂದು ಕಾಣುತ್ತದೆ "

ಎಂದು ಮಧುಸೂದನ ತಪ್ಪೊಪ್ಪಿಕೊಳ್ಳುವ ಧ್ವನಿಯಲ್ಲಿ ನುಡಿದ.

" ಏನೂ ಇಲ್ಲ, ಬನ್ನಿ. ನಾವೂ ಅದೂ ಇದೂ ಮಾತಾಡುತ್ತ ಕುಳಿತಿದ್ದೆವು "

ಎಂದು ಅಯ್ಯರ್ ಸಂಶಯ ಪರಿಹರಿಸಿದರು. ಕಾರು ಮೈಸೂರಿನತ್ತ ಹೊರಟಿತು.

## ೨೬

ಮಾರನೆಯ ದಿನ ಶ್ರೀರಂಗಪಟ್ಟಣಕ್ಕೆ ಹೋಗಬೇಕೋ ನಂಜನಗೂಡಿಗೆ ಹೋಗಬೇಕೋ ಎಂದು ರಾತ್ರಿ ಊಟವಾದ ಮೇಲೆ ಚರ್ಚೆ ಬಂದಿತು. ನಂಜನಗೂಡಿಗೇ ಹೋಗಿ ತೀರ್ಥಸ್ನಾನ, ದೇವರ ಸೇವೆ ಮಾಡಿಕೊಂಡು ಬರಬಹುದೆಂದು ಮಧುಸೂದನ ಸೂಚಿಸಿದ. ಮೀನಾಕ್ಷಮ್ಮನವರು ಸೂಚನೆಯನ್ನು ಉತ್ಸಾಹದಿಂದ ಅನುಮೋದಿಸಿದರು.

"ಏನು ನಂಜನಗೂಡೋ"

ಎಂದು ಲಲಿತ ಮೂಗಳೆದಳು. ಅವಳು ಅದಕ್ಕೆಲ್ಲಿ ಕಲ್ಲುಹಾಕುತ್ತಾಳೋ ಎಂಬ ಭೀತಿ ಮೀನಾಕ್ಷಮ್ಮನವರಿಗುಂಟಾಯಿತು.

"ನೀನು ಬರದೇ ಇದ್ದರೆ ಬೇಡ, ಮಹರಾಯಿತಿ. ನಾವೇ ಹೋಗಿ ಬರುತ್ತೇವೆ."

"ಹಾಗೇ ಮಾಡಿ"

ಎಂದು ಸುಮ್ಮನಾದಳು. ಮಧುಸೂದನನ ಮನಸ್ಸು ತಪ್ಪಿಸಿಕೊಳ್ಳಲು ಒಂದು ದಾರಿ ಹುಡುಕುತ್ತಿತ್ತು. ಅಷ್ಟರಲ್ಲಿ ಅಯ್ಯರರೇ ಪ್ರಶ್ನೆ ಹಾಕಿದರು:

"ನೀವೇನು ಮಾಡುತ್ತೀರಿ, ಮಿ|| ಮಧುಸೂದನ್ ?"

"ನಾನೇನೋ ಬರಲು ಸಿದ್ಧ. ಆದರೆ ನಾಳೆ ಇಲ್ಲಿ ಸ್ವಲ್ಪ ಕೆಲಸವಿತ್ತು...."

"ಹಾಗಾದರೆ ನೀವು ತೊಂದರೆ ತೆಗೆದುಕೊಳ್ಳಬೇಡಿ. ನಾವೇ ಹೋಗಿ ಸೇವೆ ಮುಗಿಸಿಕೊಂಡು ಸಾಯಂಕಾಲಕ್ಕೆ ಬಂದುಬಿಡುತ್ತೇವೆ."

" ಆಗಬಹುದು."

ಚರ್ಚೆ ಮುಂದೆ ಬೆಳೆಯಲಿಲ್ಲ. ಸಮಸ್ಯೆ ಅಷ್ಟು ಸುಲಭದಲ್ಲಿ ಬಗೆಹರಿಯುವುದೆಂದು ಮಧುಸೂದನನೂ ಯೋಚಿಸಿರಲಿಲ್ಲ.

ಬೆಳಗ್ಗೆ ಎದ್ದ ಕೂಡಲೆ ಅಯ್ಯರ್ ದಂಪತಿಗಳು ಕಾರಿನಲ್ಲಿ ನಂಜನಗೂಡಿಗೆ ಹೊರಟುಬಿಟ್ಟರು. ಮಧುಸೂದನ ಲಲಿತ ಕಾಫಿ ತಿಂಡಿ ಮುಗಿಸಿಕೊಂಡು ವಸ್ತುಪ್ರದರ್ಶನದ ಕಡೆಗೆ ಹೊರಟರು.

ಮೈಸೂರು ವಸ್ತುಪ್ರದರ್ಶನ ನೋಡಿ ಲಲಿತ ಬೆರಗಾಗಿ ಹೋದಳು. ಅಲ್ಲಿ ಯಾವುದೂ ಇಲ್ಲವೆನ್ನುವಂತಿರಲಿಲ್ಲ. ಆಟದ ಸಾಮಾನುಗಳು, ಅಲಂಕಾರದ ಸಾಮಾನುಗಳು, ಜವಳಿ ಅಂಗಡಿಗಳು, ಮೈಸೂರು ರೇಷ್ಮೆ ಮಳಿಗೆ. ರೇಷ್ಮೆ ಅಂಗಡಿ ಬಿಟ್ಟು ಕಾಲ್ತೆಗೆಯಲು ಅವಳಿಗೆ ಮನಸ್ಸೇ ಬರಲಿಲ್ಲ. ಜಾರ್ಜೆಟ್, ಕ್ರೇಪ್, ಟಿಷ್ಯೂ ಸೀರೆಗಳೂ, ಜರತಾರಿ ಕೆಲಸ ಮಾಡಿದ ಬಟ್ಟೆಗಳೂ ಕಣ್ಣನ್ನು ಸೆಳೆಯುತ್ತಿದ್ದವು. ಅವಳ ಮನಸ್ಸಿನಲ್ಲಾಗುತ್ತಿದ್ದ ವ್ಯಾಪಾರ ಮಧುಸೂದನನಿಗೆ ತಿಳಿಯದಿರಲಿಲ್ಲ.

" ಏನು ಬೇಕೋ ತೆಗೆದುಕೋ "

ಎಂದ. ಲಲಿತ ಗುಲಾಬಿ ಮತ್ತು ನೀಲಿಬಣ್ಣದಲ್ಲಿ ಎರಡು ಬ್ಲೌಸುಗಳಿಗೆ ಕ್ರೇಪಿನಲ್ಲಿ ಬಟ್ಟೆ ಚುನಾಯಿಸಿದಳು.

" ಸೀರೆ ಯಾವುದು ತೆಗೆದುಕೊಳ್ಳುತ್ತೀ ?"

" ನೀವೇ ಹೇಳಿ."

" ನಿನ್ನ ಮೈಬಣ್ಣಕ್ಕೆ ಆ ಪಾಚಿ ಕಲರ್ ಕ್ರೇಪ್ ಸೀರೆ ಚೆನ್ನಾಗಿ ಒಪ್ಪುತ್ತೆ ನೋಡು."

" ನೀವೂ ಪರವಾಗಿಲ್ಲ ಕಣ್ರೀ, ಹೆಂಗಸರ ಬಟ್ಟೆ ಚುನಾಯಿಸುವುದರಲ್ಲಿ !"

ಎಂದು ಅವನ ಆಯ್ಕೆಯನ್ನೇ ಮೆಚ್ಚಿಕೊಂಡಳು.

ಎಲ್ಲಾ ಸೇರಿಸಿ ಅಂಗಡಿಯವನು ೧೨೨-೮-೦ ಗೆ ಬಿಲ್ ಬರೆದು ಮುಂದಿಟ್ಟ. ಮಧುಸೂದನ ನೂರು ರೂಪಾಯಿನ ಎರಡು ನೋಟುಗಳನ್ನು ತೆಗೆದು ಅಂಗಡಿಯವನಿಗೆ ಕೊಡುವುದಕ್ಕೆ ಹೋದ.

" ಬೇಡ, ನೀವು ಕೊಡಬೇಡಿ "

ಎಂದು ಲಲಿತ ಅಡ್ಡಿಪಡಿಸಿದಳು.

" ಇಲ್ಲ, ನೀನು ಕೊಡುತ್ತೀಯಾ ?"

" ಹ್ಞೂ, ನನ್ನ ಹತ್ತಿರ ದುಡ್ಡಿದೆ, ಕೊಡುತ್ತೇನೆ."

" ನಿನ್ನ ಹತ್ತಿರ ದುಡ್ಡಿರುವುದು ನನಗೂ ಗೊತ್ತು, ಸುಮ್ಮನಿರು "

ಎಂದು ಮಧುಸೂದನ ಅವಳಿಗೆ ಅವಕಾಶ ಕೊಡದೆ ತಾನೇ ಬಿಲ್ ಹಣ ಪಾವತಿಮಾಡಿ ಸೀರೆ, ಬ್ಲೌಸು ಬಟ್ಟೆ ಕಟ್ಟಿಸಿಕೊಂಡು ಹೊರಟ. ಲಲಿತನ ನನ್ನೊಂದು ಯೋಚನೆ ಕಾಡುತ್ತಿತ್ತು.

" ನೀವು ತೆಗೆದುಕೊಟ್ಟಿರೆಂದು ಗೊತ್ತಾದರೆ ಚೆನ್ನಾಗಿರುವುದೆ ?"

" ಅದನ್ನು ಏಕೆ ಹೇಳಬೇಕು. ನಿನ್ನ ದುಡ್ಡಿನಲ್ಲೇ ತೆಗೆದುಕೊಂಡೆ ವೆಂದು ಹೇಳಿದರಾಯಿತು "

ಎಂದ. ಅವನ ಉಪಾಯವನ್ನು ಅವಳು ಮೆಚ್ಚಿಕೊಂಡಳು. ಇಬ್ಬರೂ ಮಾರ್ಕೆಟ್ ಕಡೆ ಹೋಗಿ ಹೂವು, ವೀಳೆಯದೆಲೆ ಕಟ್ಟಿಸಿಕೊಂಡು ಬಂದರು.

ಮನೆ ತಲಪುವ ಹೊತ್ತಿಗೆ ಅಡುಗೆ ಮುಗಿಸಿ ವೆಂಕಮ್ಮನವರು ಕಾಯುತ್ತ ಕುಳಿತಿದ್ದರು. ದೂರದಲ್ಲಿ ಲಲಿತ–ಮಧುಸೂದನ ಜೊತೆಯಾಗಿ ಬರುತ್ತಿರು ವುದನ್ನು ನೋಡಿ ಅವರ ಮನಸ್ಸಿನಲ್ಲಿ ಏನೇನೋ ಭಾವನೆಗಳು ಅಂಕುರಿಸಿದವು.

ಸ್ವಲ್ಪ ವಿಶ್ರಮಿಸಿಕೊಂಡ ಬಳಿಕ ಇಬ್ಬರಿಗೂ ಹಜಾರದಲ್ಲೇ ಎಲೆ ಹಾಕಿ ವೆಂಕಮ್ಮನವರು ಬಡಿಸಿದರು. ಊಟ ಸಾಗುತ್ತಿದ್ದಾಗ ನಡುವೆ ಉಪಚಾರ ಹೇಳುತ್ತಿದ್ದರು.

" ನಿಧಾನವಾಗಿ ಊಟಮಾಡು, ತಾಯಿ. ಜೊತೆಗೆ ಅಮ್ಮ ಇಲ್ಲ ಅಂತ ಸಂಕೋಚಪಟ್ಟುಕೊಳ್ಳಬೇಡ."

" ನನಗೇನೂ ಸಂಕೋಚ ಇಲ್ಲರೀ "

" ಸಂಕೋಚ ಇಲ್ಲ ; ಆದರೆ ಊಟ ಮಾತ್ರ ಮಾಡೊಲ್ಲ "

ಎಂದು ಮಧು ಜೋಡಿಸಿದ. ಲಲಿತ ಓರೆಗಣ್ಣಿಂದ ಅವನನ್ನು ನೋಡಿ ನಸುನಕ್ಕಳು. ಅಡುಗೆಮನೆಗೂ ಹಜಾರಕ್ಕೂ ಓಡಾಡುತ್ತಿದ್ದ ವೆಂಕಮ್ಮನವರ ಬೆನ್ನ ಹಿಂದೆ ನಡೆಯುತ್ತಿದ್ದ ಸರಸದ ನಡುವೆ ಊಟ ಸಾಗಿತು.

ಮಧುಸೂದನ ಮಧ್ಯಾಹ್ನದವರೆಗೆ ತನ್ನ ರೂಮಿನಲ್ಲೇ ಮಲಗಿ ವಿಶ್ರಮಿಸಿ ಕೊಂಡ. ವೆಂಕಮ್ಮ ಲಲಿತ ಹಜಾರದಲ್ಲಿ ಆ ಮಾತು ಈ ಮಾತು ಆಡುತ್ತ ಕುಳಿತರು.

ನಾಲ್ಕು ಘಂಟೆಯ ಹೊತ್ತಿಗೆ ಕಾಫಿ, ತಿಂಡಿ ಸಿದ್ಧವಾಯಿತು. ವೆಂಕಮ್ಮನವರು ಮೈಸೂರು ರಸಬಾಳೆಕಾಯಿ ಹಾಕಿ ಉಪ್ಪೇರಿ ಕರಿದು, ಕಾಫಿ ಮಾಡಿದ್ದರು. ಮಗನಿಗೆ ಕೊಡಲು ಅವರು ಅಡುಗೆಮನೆಯಿಂದಲೇ ಕೂಗಿದರು. ಅದು ಅವನಿಗೆ ಕೇಳಿಸಲಿಲ್ಲ.

"ಪರವಾ ಇಲ್ಲರೀ. ನಾನೇ ಕೊಟ್ಟು ಬರುತ್ತೇನೆ"

ಎಂದು ಲಲಿತ ತಟ್ಟೆಯನ್ನೂ ಕಾಫಿ ಬಟ್ಟಲನ್ನೂ ತಾನೇ ತೆಗೆದುಕೊಂಡು ಹೊರಟಳು.

ಈಗಿನ ಕಾಲದ ಹುಡುಗರ ಸ್ವಾತಂತ್ರ್ಯ ನೋಡಿ ವೆಂಕಮ್ಮನವರಿಗೆ ಅಚ್ಚರಿಯಾಯಿತು.

ರೂಮಿನ ಬಾಗಿಲು ಹಾಕಿರಲಿಲ್ಲ. ಸುಮ್ಮನೆ ಮುಂದೆ ಮಾಡಿತ್ತು. ಲಲಿತ ಮೆಲ್ಲನೆ ಬಾಗಿಲು ತೆಗೆದು ಒಳಹೊಕ್ಕಳು. ಅವಳನ್ನು ಕಂಡು ಮಲಗಿದ್ದ ಮಧುಸೂದನ ಎದ್ದು ಕುಳಿತ. ಹಗಲುಗನಸಿನಲ್ಲಿ ಮುಳುಗಿದ್ದ ಅವನಿಗೆ ತಾಯಿ ಕೂಗಿದ್ದು ಕೇಳಿಸಿರಲಿಲ್ಲ.

"ಓಹೋ, ಇದೇನು ತಾವೇ ?...."

"ಏಕೆ, ನಾನು ತರಬಾರದೇನು ?"

"ತರಬಾರದು ಅಂತ ಹೇಳಲಿಲ್ಲ. ಸುಮ್ಮನೆ ತಮಗೆ ತೊಂದರೆ ಅಂತ."

"ಒಳ್ಳೇ ಮರ್ಯಾದೆ. ಚೆನ್ನಾಗಿದೆ"

ಎಂದು ನಗುತ್ತ ಲಲಿತ ತಟ್ಟೆ ಬಟ್ಟಲುಗಳನ್ನು ಮೇಜಿನ ಮೇಲಿಟ್ಟು ನಿಂತಳು.

"ಒಂದು ಕ್ಷಣ ಇದ್ದರೆ ಮುಖ ತೊಳೆದುಕೊಂಡು ಬಂದುಬಿಡುತ್ತೇನೆ"

ಎಂದು ಸಾಬೂನು ಪೆಟ್ಟಿಗೆ ಟವಲು ಹಿಡಿದು ಮಧುಸೂದನ ಸ್ನಾನದ ಮನೆಗೆ ಓಡಿದ.

ಲಲಿತಳ ಕಣ್ಣು ರೂಮಿನ ಸುತ್ತ ಹರಿಯಿತು. ರೂಮು ಪ್ರವೇಶಿಸಿದ ಕೂಡಲೆ ಎದುರಿಗೆ ಕಾಣುವ ಹಾಗೆ ಮಧುಸೂದನನ ಗುರುಗಳ ದೊಡ್ಡ ತೈಲ ಚಿತ್ರವಿತ್ತು. ಅದರ ಪಕ್ಕದಲ್ಲಿ ಇನ್ನೊಂದು ಕಡೆ ವಿವೇಕಾನಂದರ ಭಾವಚಿತ್ರವಿತ್ತು. ಎರಡೂ ಹೂಮಾಲೆಗಳಿಂದ ಅಲಂಕೃತವಾಗಿದ್ದವು. ಮೇಜಿನ ಪಕ್ಕದಲ್ಲಿ

ಒಂದು ಗಾಜಿನ ಬೀರುವಿನ ತುಂಬ ಪುಸ್ತಕಗಳಿದ್ದುವು. ಕೆಲವು ಇಂಗ್ಲಿಷ್ ಗ್ರಂಥಗಳು. ಅವುಗಳ ಜೊತೆಯಲ್ಲೇ ಕನ್ನಡ ಪುಸ್ತಕಗಳು. ಒಂದೆಡೆ ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದ ಹಳೆಯ ಲಕ್ಷಣ ಗ್ರಂಥಗಳು. ಒಂದು ಪಕ್ಕದಲ್ಲಿದ್ದ ಬೆಂಚಿನ ಮೇಲೆ ಗೌಸು ಹೊದೆಸಿದ ತಂಬೂರಿ ಕುಳಿತಿತ್ತು. ರೂಮಿನಲ್ಲಿ ಸೊಳ್ಳೆ ಪರದೆ ಹಾಕಿದ ಮಂಚದ ಜೊತೆಗೆ ಒಂದು ಸೋಫಾ. ಎರಡು ಕುರ್ಚಿಗಳಿದ್ದುವು. ಮಂಚದ ಪಕ್ಕದಲ್ಲೇ ಕೈಗೆ ಸಿಲುಕುವ ಹಾಗೆ ಒಂದು ರೇಡಿಯೋ ಸೆಟ್ಟಿತ್ತು.

ಮಧುಸೂದನನಿಗಾಗಿ ಕಾಯುತ್ತ ಮೇಜಿನ ಮುಂದಿದ್ದ ಕುರ್ಚಿಯಲ್ಲಿ ಮಂಡಿಸಿದ ಲಲಿತಳ ಕೈ ಅನೈಚ್ಛಿಕವಾಗಿ ಮೇಜಿನ ಡ್ರಾಯರನ್ನೆಳೆಯಿತು. ಒಳಗಣಿಂದ ಪರಿಚಯವುಳ್ಳ ನವಿರಾದ ಪರಿಮಳ ಬಂದು ಅವಳ ನಾಸಿಕವನ್ನು ಸೋಕಿತು. ಮಧುಸೂದನನಿಗೆ ತಾನು ಬರೆದಿದ್ದ ಹತ್ತಾರು ಪ್ರೇಮಪತ್ರಗಳ ನೆನಪಾಗಿ ಅವಳ ಮುಖಕ್ಕೆ ಲಜ್ಜೆಯೇರಿತು. ಆ ಪತ್ರಗಳನ್ನೊಮ್ಮೆ ನೋಡುವ ಕುತೂಹಲದಿಂದ ಡ್ರಾಯರನ್ನು ಪೂರ್ತಿ ಎಳೆದು ಒಳಗಿದ್ದ ವಸ್ತುಗಳನ್ನು ಪರಿಕಿಸಲಾರಂಭಿಸಿದಳು.

ಅವಳ ಊಹೆ ಸರಿಯಾಗಿತ್ತು.

ಒಳಗಿದ್ದುದ್ದು ಅವಳೇ ಬರೆದಿದ್ದ ಪ್ರಣಯ ಪತ್ರಗಳ ಕಟ್ಟು. ಮಧುಸೂದನ ಅವುಗಳನ್ನೆಲ್ಲಾ ಓರಣವಾಗಿ ಜೋಡಿಸಿ ಆ ಕವರುಗಳಲ್ಲೇ ಇಷ್ಟು ಅವಕ್ಕೊಂದು ರೇಷ್ಮೆಯ ಪಟ್ಟಿಯನ್ನು ಅಲಂಕಾರವಾಗಿ ಕಟ್ಟಿದ್ದ. ಅವುಗಳನ್ನಿಟ್ಟಿದ್ದ ಅಕ್ಕರೆಯ ರೀತಿ ನೋಡಿ ಅವಳ ಅಂತಃಕರಣ ಪುಲಕಿತವಾಯಿತು. ಕಾಗದದ ಕಟ್ಟನ್ನು ಹಾಗೇ ಇಟ್ಟು ಡ್ರಾಯರನ್ನು ಹಿಂದೆ ನೂಕಬೇಕೆನ್ನುವಷ್ಟರಲ್ಲಿ ಹಿಂದುಗಡೆ ಬಿಡಿಯಾಗಿ ಬಿದ್ದಿದ್ದ ಎರಡು ಮೂರು ಕವರುಗಳು ಕಣ್ಣಿಗೆ ಬಿದ್ದುವು. ಅವುಗಳಲ್ಲೊಂದನ್ನು ತೆಗೆದುಕೊಂಡು ನೋಡಿದಳು. ಬೇರೆ ಯಾರೋ ಬರೆದಿದ್ದ ಕಾಗದ. ಅದರಿಂದಲೂ ಹಿತವಾದ ಒಂದು ಪರಿಮಳ ನಸ್ಸಾಗೆ ಹಾಯುತ್ತಿತ್ತು. ಲಲಿತಳ ಕುತೂಹಲ ಕೆರಳಿ ಒಡೆದಿದ್ದ ಆ ಕವರಿನ ಬಾಯನ್ನು ಹಿಗ್ಗಿಸಿ ನೋಡಿದಳು. ನಾಲ್ಕು ಮಡಿಕೆಯಲ್ಲಿದ್ದ ಪತ್ರವೊಂದರ ನಡುವೆ ಭಾವಚಿತ್ರವೊಂದು ಸೇರಿಕೊಂಡಿದ್ದುದು ಕಂಡಿತು. ವಿವಿಧಭಾವನೆಗಳ ಹೊಯ್ದಾಟಕ್ಕೆ ಸಿಕ್ಕಿದ ಲಲಿತ ಚಿತ್ರವನ್ನೂ ಕಾಗದವನ್ನೂ ಈಚೆಗೆ ತೆಗೆದು ನೋಡಿದಳು.

ಆಕರ್ಷಕ ವ್ಯಕ್ತಿತ್ವವುಳ್ಳ ಯುವತಿಯ ಭಾವಚಿತ್ರ. ಕೆಳಭಾಗದಲ್ಲಿ

"ನಿಮ್ಮವಳೇ ಆದ ಕುಮುದಾ" ಎಂದು ಬರೆದಿತ್ತು. ಹಾಗೆಯೇ ಅವಸರದಿಂದ ಕಾಗದವನ್ನೂ ಬಿಚ್ಚಿ ನೋಡಿದಳು. ಕಾಲೇಜ್ ಹುಡುಗಿಯೊಬ್ಬಳು ಮಧುಸೂದನನಿಗೆ ಬರೆದಿದ್ದ ಪ್ರೇಮಪತ್ರ. "...ನಿಮ್ಮನ್ನು ನೋಡಿದಾಗಿನಿಂದ, ನಿಮ್ಮ ಹಾಡಿಕೆ ಕೇಳಿದಾಗಿನಿಂದ ಮನಸ್ಸೇ ನನ್ನ ವಶದಲ್ಲಿಲ್ಲ...ನಿಮ್ಮ ಸ್ನೇಹಕ್ಕೆ ಹಾತೊರೆಯುತ್ತಿದ್ದೇನೆ....ಕಾಲೇಜಿನ ಹತ್ತಿರ ಭೇಟಿಯಾಗುವುದು ಸಾಧ್ಯವೆ?" ಎಂದು ಏನೇನೋ ಬರೆದಿದ್ದಳು.

ಮುಂದೆ ಓದುವ ಮನಸ್ಸಾಗಲಿಲ್ಲ. ಎದೆಯಲ್ಲಿ ಭಯಂಕರವಾದ ಬೆಂಕಿ ಹೊತ್ತಿಸಿದ ಹಾಗಾಯಿತು. ಪ್ರಪಂಚವೆಲ್ಲವೂ ಗಿರಗಿರನೆ ಸುತ್ತುತ್ತಿರುವ ಹಾಗೆ ಭಾಸವಾಯಿತು. ಗಟ್ಟಿಯಾಗಿ ಕಿರಿಚಿಕೊಂಡು ಎಲ್ಲಿಗಾದರೂ ಓಡಿಹೋಗಲೆ ಎನ್ನಿಸಿತು. ಇಂಥ ಕಪಟಿಕ್ಕೆ ಮರುಳಾಗಿ ತನ್ನ ಸರ್ವಸ್ವವನ್ನೂ ಒಪ್ಪಿಸಿಬಿಟ್ಟೆನೇ ಎಂದು ಹಲುಬಿದಳು. ಒಂದು ಕ್ಷಣದಲ್ಲಿ ಬುದ್ಧಿ ಸಿಡಿದುಹೋಗುವುದೋ ಎನ್ನಿಸಿತು. ಅದನ್ನು ಸ್ವಾಧೀನದಲ್ಲಿಟ್ಟುಕೊಳ್ಳದ ಇದ್ದರೆ ಕಂಡವರ ಮನೆಯಲ್ಲಿ ಅನರ್ಥವಾಗಬಹುದೆಂದೆಣಿಸಿ ಶಕ್ತಿ ಮೀರಿ ಸಂಯಮ ತಂದುಕೊಳ್ಳಲೆತ್ನಿಸಿದಳು. ಮಧುಸೂದನ ಬರುವ ಸದ್ದಾಗಲು ಕಾಗದವನ್ನು ಬೇಗ ಒಳಗೆಸೆದು ಡ್ರಾಯರ್ ಮುಚ್ಚಿ ನಿಂತಳು.

ಮುಖ ತೊಳೆದುಕೊಂಡು ಬಂದ ಮಧುಸೂದನ ಅವಳು ರೂಮನ್ನೆಲ್ಲಾ ಗಮನಿಸುತ್ತಿದ್ದುದನ್ನು ನೋಡಿದ.

"ಎಲ್ಲಾ ಪರಾಂಬರಿಸಿದ್ದಾಯಿತೆ?"

"ಏನೇನಿದೆ ಅಂತ ನೋಡುತ್ತ ನಿಂತಿದ್ದೆ. ಎಷ್ಟು ಪುಸ್ತಕಗಳನ್ನಿಟ್ಟಿದ್ದೀರಿ."

ತನ್ನ ಧ್ವನಿಯೇ ತನಗೆ ವಿಚಿತ್ರವಾಗಿ ಕೇಳಿಸಿತು. ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಮಾತಿನ ನಾಟಕವಾಡಬೇಕಾಗಿತ್ತು.

"ಓದುವುದಿಲ್ಲದಿದ್ದರೆ ನನಗೆ ಒಂದು ದಿನವೂ ನಿದ್ದೆ ಹತ್ತುವುದಿಲ್ಲ."

"ನೀವು ಇಷ್ಟು ಪುಸ್ತಕಗಳನ್ನಿಟ್ಟುಕೊಂಡು ಓದುತ್ತೀರೆಂದು ನನಗೆ ತಿಳಿದಿರಲಿಲ್ಲ."

"ಇನ್ನೇನು ತಿಳಿದಿತ್ತು?"

"ಸಂಗೀತಗಾರರು ಓದುವವರಲ್ಲವೆಂದುಕೊಂಡಿದ್ದೆ."

" ಹಾಗೆ ತಿಳಿದುಕೊಂಡಿರುವವರೇ ಬಹಳ ಜನ. ಆದರೆ ಆ ತಿಳಿವಳಿಕೆ ತಪ್ಪು. ಜ್ಞಾನಾರ್ಜನೆ ಅಗತ್ಯವಾದರೆ ಓದಲೇ ಬೇಕು. ವ್ಯಾಸಂಗದ ಬಲವಿಲ್ಲದಿದ್ದರೆ ಪಾಂಡಿತ್ಯ ಪೂರ್ಣವಾಗುವುದಿಲ್ಲ "

ಮಾತು ಯಾವುದೋ ಜಾಡು ಹಿಡಿಯುತ್ತಿತ್ತು. ಲಲಿತನಿಗೆ ಅದು ಬೇಕಾಗಿರಲಿಲ್ಲ. ಏನಾದರೂ ಹೇಳಬೇಕೆಂದೆಣಿಸಿ,

" ತೆಗೆದುಕೊಳ್ಳಿ. ಕಾಫಿ ತಿಂಡಿ ಆರಿಹೋಗುತ್ತೆ "

" ನಿನ್ನದಾಯಿತೆ ?"

" ಇಲ್ಲ, ನಾನು ಒಳಗೆ ತೆಗೆದುಕೊಳ್ಳುತ್ತೇನೆ "

" ಬೇಡ, ಇಲ್ಲೇ ಆಗಲಿ. ಒನ್ ಬೈ ಟೂ "

ಎಂದು ಅವಳನ್ನು ಹತ್ತಿರ ಎಳೆದುಕೊಂಡು ಅವಳ ಬಾಯಿಗೆ ಒಂದು ಉಪ್ಪೇರಿ ಇಟ್ಟ. ಮನಸ್ಸಿನಲ್ಲಿ ಅಂಥ ಉತ್ಸಾಹವಿಲ್ಲದಿದ್ದರೂ ಅವಳದನ್ನು ನಿರಾಕರಿಸಲು ಸಾಧ್ಯವಾಗಲಿಲ್ಲ. ಇಬ್ಬರ ನಡುವೆ ಸಿಕ್ಕಿದ ತಟ್ಟೆ ಖಾಲಿಯಾಗದೆ ಬೇರೆ ಮಾರ್ಗವೇ ಇರಲಿಲ್ಲ. ಕಾಫಿಯೂ ಅದೇ ದಾರಿ ಹಿಡಿಯಬೇಕಾಯಿತು.

ಲಲಿತನ ಮನಸ್ಸು ಅವಳನ್ನು ಬಿಟ್ಟು ಎಲ್ಲೋ ಅಲೆಯುತ್ತಿತ್ತು. ಏನಾದರೂ ನೆಪ ತೆಗೆದು ಹೊರಗೆ ಹೋಗದಿದ್ದರೆ ಬುದ್ಧಿಯೇ ಸ್ವಾಧೀನ ತಪ್ಪಬಹುದೆಂದು ಅವಳಿಗನ್ನಿಸಿತು.

" ನಾನು ನಿಮ್ಮ ಹತ್ತಿರ ಹೀಗೆ ಸರಸವಾಡುತ್ತ ಕುಳಿತರೆ ನಿಮ್ಮ ತಾಯಿ ಏನೆಂದುಕೊಂಡಾರು ?"

" ಏನೂ ಅಂದುಕೊಳ್ಳುವುದಿಲ್ಲ, ಸುಮ್ಮನಿರು. ಅವಳ ಪಾಡಿಗೆ ಅವಳು ಹೂಬತ್ತಿ ಮಾಡುತ್ತ ಅಡುಗೆಮನೆಯಲ್ಲಿ ಕುಳಿತಿದ್ದಾಳೆ."

ಒಂದು ಕ್ಷಣ ಇಬ್ಬರೂ ಮೌನವಾಗಿ ಕುಳಿತಿದ್ದರು. ಲಲಿತ ಯಾವ ಮಾತನ್ನೂ ಆಡಲೂ ಆರದ ಬಿಡಲೂ ಆರದ ಸಂದಿಗ್ಧಕ್ಕೆ ಸಿಕ್ಕಿದ್ದಳು. ಅವಳ ಉತ್ಸಾಹಹೀನತೆ ನೋಡಿ ಮಧುಸೂದನನಿಗೆ ಸಂಶಯ ಬಂದಿತು.

" ಏಕೆ, ಏನೋ ಯೋಚಿಸುತ್ತಿರುವ ಹಾಗಿದೆಯಲ್ಲಾ ?"

" ಏನೂ ಇಲ್ಲ."

" ಮೈ ಸರಿಯಾಗಿಲ್ಲವೆ ?"

" ಇದೆ."

"ಮತ್ತೇಕೆ ಹೀಗೆ ?"

ಎಂದು ಗಲ್ಲವನ್ನು ಮೆಲ್ಲನೆ ಹಿಡಿದೆತ್ತಿದ. ನೂರು ವರ್ಷ ಶೋಕದಲ್ಲಿ ಒಂದೇ ಸಮನಾಗಿ ಬೆಂದು ಬಸವಳಿದಂತೆ ಅವಳ ಮುಖ ಕಂಗೆಟ್ಟಿತ್ತು. ಕಣ್ಣಿನ ಕರೆಯಲ್ಲಿ ನೀರು ಸೇರುತ್ತಿತ್ತು. ಮಧುಸೂದನನಿಗೆ ಗಾಬರಿಯಾಯಿತು.

"ಲಲಿತಾ! ಏನಾಯಿತು ಚಿನ್ನಾ ?"

"ಆಗುವುದೇನು, ಏನು ಆಗಬೇಕೋ ಅದೇ ಆಯಿತು."

ಧ್ವನಿಯಲ್ಲಿ ಎಂದೂ ಕಂಡು ಕೇಳರಿಯದ ಕರ್ಕಶತೆಯಿತ್ತು. ಅಂಕುಶ ದಿಂದ ಚುಚ್ಚಿದಾಗ ಆನೆ ನೋವನ್ನು ತಾಳಲಾರದೆ ಘೀಳಿಡುವಂತೆ ಅವನ ಮನಸ್ಸು ಆ ಮಾತಿನ ಮರ್ಮಭೇದನೆಗೆ ತತ್ತರಿಸಿತು.

"ಹೇಳುವುದಿಲ್ಲವೇನು ?"

"ನಿಮ್ಮ ಮೇಜನ್ನು ತಗೆದು ನೋಡುವ ಅಪರಾಧ ಮಾಡಿದೆ."

"ತೆಗೆದರೇನಾಯಿತು ?"

"ಯಾವುದು ನನ್ನ ಕಣ್ಣಿಗೆ ಬೀಳಬಾರದೆಂದು ನೀವು ಮುಚ್ಚಿಟ್ಟಿದ್ದಿರೋ ಅದೇ ಬಿತ್ತು."

"ಯಾವುದು ನಿನ್ನ ಕಣ್ಣಿಗೆ ಬೀಳಬಾರದ್ದು ?"

ಎಂದು ಮಧುಸೂದನ ವಿಸ್ಮಿತನಾಗಿ ಎದ್ದು ಡ್ರಾಯರ್ ತೆಗೆದು ಒಳಗಿದ್ದ ಕಾಗದ ಪತ್ರಗಳನ್ನೆಲ್ಲಾ ಮೇಜಿನ ಮೇಲೆ ಬಗ್ಗಿಸಿದ. ಬಿಡಿಯಾಗಿದ್ದ ಕವರು ಗಳನ್ನು ನೋಡಿ ಅವನಿಗೆ ಅರ್ಥವಾಯಿತು.

"ಓಹೋ, ಇದೋ ?"

"ಹೌದು, ಅದೇ."

"ನೀನು ನೋಡಿದ್ದು ಇದೊಂದನ್ನೇ ಏನು ?"

"ಇನ್ನೇನು ನೋಡಬೇಕಾಗಿತ್ತು ?"

"ಇನ್ನೂ ನೋಡುವುದಿತ್ತು ಲಲಿತ, ಇಷ್ಟೇ ಸಾಲದು"

ಎಂದು ಮೇಜಿನಲ್ಲಿದ್ದ ನಾಲ್ಕೈದು ಕಾಗದಗಳ ಜೊತೆ ಪುಸ್ತಕಗಳ ಸಾಲಿನ ಹಿಂದೆ ಇಟ್ಟಿದ್ದ ನಾಲ್ಕಾರು ಕವರುಗಳನ್ನೂ ತಗದು ಅವಳ ಮುಂದೆ ಹಾಕಿದ.

"ಇವುಗಳನ್ನೇನು ಮಾಡಲಿ ?"

" ಅವುಗಳನ್ನೂ ಓದಿನೋಡು."

" ಓದಿದ್ದು ತಪ್ಪಾಯಿತು ; ಒಪ್ಪಿಕೊಳ್ಳುತ್ತೇನೆ. ಆದರೆ ಓದಿದ ಮೇಲೆ ಹೀಗೆ ಎಂದು ಗೊತ್ತಾಯಿತು."

" ಹೇಗೆ ?"

ಲಲಿತ ಮಾತಾಡಲಿಲ್ಲ. ತಲೆ ತಗ್ಗಿಸಿ ಸುಮ್ಮನೆ ಕುಳಿತುಬಿಟ್ಟಳು. ದುಃಖ ಅವಳೆದೆಯಲ್ಲಿ ಕಡೆಯುತ್ತಿತ್ತು.

ಮಧುಸೂದನ ಕಾಗದಗಳನ್ನು ಒಂದೊಂದನ್ನಾಗಿ ಕವರುಗಳಿಂದ ತೆಗೆದು ಅವಳ ಮುಂದೆ ಹಿಡಿದು ಓದತೊಡಗಿದ. ಯಾವುದೋ ಸಂಗೀತ ಕಚೇರಿಯಲ್ಲಿ ಅವನನ್ನು ಕಂಡಿದ್ದ ಒಬ್ಬಳು ಯುವತಿ ತನ್ನ ಪ್ರೇಮವನ್ನು ನಿರ್ವಂಚನೆಯಿಂದ ತೋಡಿಕೊಂಡಿದ್ದಳು. ಅವನ ಕಚೇರಿ ಕೇಳಿದ್ದ ಇನ್ನೊಬ್ಬ ರಸಿಕಳು ಅವನ ಸಖ್ಯ ಯಾಚಿಸಿ ಕಾಗದ ಬರೆದಿದ್ದಳು. ಮುಂದೆ ಪ್ರೇಮಕ್ಕೆ ಪೀಠಿಕೆಯಾಗ ಬಹುದಾದ ಪ್ರಶಂಸೆಯನ್ನು ಒಬ್ಬಿಬ್ಬರು ಮಾಡಿದ್ದರು. ಕಾಗದವನ್ನು ಬರೆದಿದ್ದವರಲ್ಲಿ ಒಬ್ಬಳ ಹೊರತು ಎಲ್ಲರೂ ಧೈರ್ಯವಾಗಿ ತಮ್ಮ ವಿಳಾಸ ಕೊಟ್ಟು ಪ್ರತ್ಯುತ್ತರ ಅಪೇಕ್ಷಿಸಿದ್ದರು. ಆ ಅಜ್ಞಾತ ಯುವತಿ ಮಾತ್ರ ತನ್ನ ಭಾವಚಿತ್ರವನ್ನು ಕಾಗದದ ಜೊತೆಗಿಟ್ಟು ಭೇಟಿಯ ಸ್ಥಳ ನಿರ್ದೇಶನ ಮಾಡಿದ್ದಳು.

ಮಧುಸೂದನ ಪಂಚಾಂಗ ಪಠನ ಮಾಡುವಂತೆ ಒಂದಾದ ಮೇಲೊಂದ ರಂತೆ ಕಾಗದ ಓದುತ್ತಿದ್ದ.

" ಸಾಕು, ದಯವಿಟ್ಟು ನಿಲ್ಲಿಸಿ. ನಾನು ಕೇಳಲಾರೆ."

" ನನಗೆ ಒದಲು ಹಿತವಾಗುವುದೆಂದು ತಿಳಿದೆಯೇನು ?"

" ಇನ್ನೇನಾಗುವುದೋ ?"

ಅವನು ಮಾತನಾಡದೆ ಅವಳ ಮುಂದೆ ಎರಡು ಮೂರು ಭಾವಚಿತ್ರ ಗಳನ್ನು ಹರಡಿದ.

" ಇವುಗಳನ್ನೂ ಸ್ವಲ್ಪ ನೋಡು."

" ಇವು ಯಾರವು ?"

" ನೀನೇ ನೋಡಿ ಹೇಳು."

" ನನಗೆ ಹೇಗೆ ಗೊತ್ತಾಗಬೇಕು ನಿಮ್ಮ ಸ್ನೇಹಿತೆಯರ ಗುರುತು ?"

"ಇವರೆಲ್ಲಾ ನನ್ನ ಸ್ನೇಹಿತೆಯರೆಂದು ತಿಳಿದೆಯಾ ?"

"ಅಲ್ಲವೇನು ?"

"ಆ ಭ್ರಾಂತಿ ನಿನಗೆ ಬಂದಿದೆಯಲ್ಲವೆ ?"

"ಇದನ್ನು ಭ್ರಾಂತಿಯೆಂದೇಕೆ ಹೇಳುವಿರಿ ?"

"ಇನ್ನೇನೆನ್ನಬೇಕು ?"

"ಸುಮ್ಮನೆ ನಿಜವನ್ನು ಒಪ್ಪಿಕೊಳ್ಳಬಾರದೆ ?"

"ಏನೆಂದು ಒಪ್ಪಿಕೊಳ್ಳಲಿ ?"

"ಈ ಹೆಂಗಸರೊಡನೆ ಸ್ನೇಹವಿದೆಯೆಂದು."

"ಇಲ್ಲದಿರುವುದನ್ನು ಇದೆಯೆಂದು ಒಪ್ಪಿಕೊಳ್ಳಬೇಕೆ ?"

"ಇವರ ಸ್ನೇಹ, ಪರಿಚಯ ನಿಮಗಿಲ್ಲವೆ ?"

"ಇದೆಯೆಂದು ನೀನು ಭಾವಿಸಿರುವೆಯೇನು ?"

"ನನ್ನ ಪ್ರಶ್ನೆಗೆ ಉತ್ತರ ಕೊಡಿ."

"ಅವರ ಪರಿಚಯ ನಿನಗೆಷ್ಟಿದೆಯೋ ನನಗೂ ಅಷ್ಟೇ."

"ಇವರು ಯಾರೆಂದು ತಿಳಿದುಕೊಳ್ಳುವ ಪ್ರಯತ್ನವನ್ನೂ ನೀವು ಮಾಡಲಿಲ್ಲವೆ ?"

"ಮಾಡಬೇಕಾಗಿತ್ತೇನು ? ಅದರ ಅಗತ್ಯವಿದೆಯೆ ?"

"ಹಾಗಾದರೆ ಈ ಹೆಂಗಸರೊಬ್ಬರಿಗೂ ನೀವು ಕಾಗದ ಬರೆಯಲಿಲ್ಲವೆ ?"

"ಬರೆದಿರುವೆನೆಂದು ನೀನು ಭಾವಿಸಿದ್ದೆಯಾ ?"

"ಹೌದು."

"ಅಂಥ ವ್ಯವಹಾರಕ್ಕಿಳಿಯುವ ನೀಚ ನಾನಲ್ಲ, ಲಲಿತ."

ಉದ್ವೇಗದಿಂದ ನುಡಿದ ಮಾತು ಸಿಡಿಲಿನಂತೆ ಬಂದೆರಗಿತು. ಥಟ್ಟನೆ ತಲೆಯೆತ್ತಿ ಅವನ ಮುಖ ನೋಡಿದ ಲಲಿತನಿಗೆ ಆ ಮುಖದಲ್ಲಿ ಕೆತ್ತಿದ್ದ ಅಪಾರ ವೇದನೆ ಕಂಡು ಕರುಳು ಕಿವುಚಿದ ಹಾಗಾಯಿತು. ಕತ್ತಲಿನಲ್ಲಿದ್ದವನ ಕಣ್ಣಿಗೆ ಹಠಾತ್ತಾಗಿ ಕೋರೈಸುವ ಬೆಳಕು ಬಿದ್ದಾಗ ಕಣ್ಣು ತಲ್ಲಣಿಸಿ ಮುಚ್ಚಿಕೊಳ್ಳುವಂತೆ, ಇದ್ದಕ್ಕಿದ್ದ ಹಾಗೆ ತೆರೆದ ಸತ್ಯದ ಕವಾಟದ ಹಿಂದಿನ ಪ್ರಖರವಾದ ಬೆಳಕನ್ನು ನೋಡಿ ತಡೆಯಲಾರದೆ ಲಲಿತ ತತ್ತರಿಸಿಹೋದಳು. ಒಂದೇ ಏಟಿಗೆ ಕತ್ತರಿಸಿದ ಬಾಳೆಯ ಗಿಡ ನೆಲಕ್ಕೆ ಕೆಡೆಯುವಂತೆ ನಿಂತ ನಿಲುವಿನಲ್ಲಿ

ನೆಲಕ್ಕೆ ಕುಸಿದು ಮಧುಸೂದನನ ಎರಡು ಕಾಲನ್ನೂ ಸೇರಿಸಿ ಅಪ್ಪಿಕೊಂಡಳು. ತಡೆದಿದ್ದ ದುಃಖವೆಲ್ಲಾ ಕರಗಿ ಕಟ್ಟೆಯೊಡೆದುಕೊಂಡು ಬಂದಿತು. ಲಲಿತ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಉಪಕ್ರಮಿಸಿದಳು.

ಮಧುಸೂದನನ ಮನಸ್ಸೂ ವ್ಯಗ್ರವಾಗಿತ್ತು. ಅವಳ ಕಠಿನ ನುಡಿಗಳಿಂದ, ಮರ್ಮಭೇದನೆಯಿಂದ ಅವನೂ ನೊಂದಿದ್ದ. ಅವಳ ಉದ್ವೇಗಭರ ಕಡಮೆಯಾಗುವವರೆಗೂ ಅವನೂ ಅಲ್ಲಾಡದೆ ಹಾಗೆಯೇ ನಿಂತಿದ್ದ. ಬಳಿಕ ವ್ಯಗ್ರತೆ ಅನುಕಂಪಕ್ಕೆಡೆಗೊಟ್ಟು ಮೆಲ್ಲನೆ ಅವಳನ್ನೆತ್ತಿ ತನ್ನ ಮೈಗೊರಗಿಸಿ ನಿಲ್ಲಿಸಿಕೊಂಡ. ಹುಚ್ಚು ಹೊಳೆ ಹರಿದು ಬರಿದಾದ ನದಿಯ ಪಾತ್ರದಲ್ಲಿ ಸಣ್ಣ ಝರಿ ಮಾತ್ರ ಪ್ರವಹಿಸುತ್ತಿರುವಂತೆ ಪಶ್ಚಾತ್ತಾಪದ ಆವೇಗ ಕಳೆದು ಲಲಿತ ಸಣ್ಣಗೆ ರೋದಿಸುತ್ತಿದ್ದಳು. ಮಧುಸೂದನನಿಗೆ ಅವಳನ್ನು ಅನುನಯದಿಂದ ಸಂತೈಸಬೇಕಾಯಿತು.

“ಅಳಬೇಡ ಕಂದಾ, ಸುಮ್ಮನಿರು.”

“ನನ್ನನ್ನು ಕ್ಷಮಿಸುವಿರಾ?”

ಬಿಕ್ಕುತ್ತ ಬಿಕ್ಕುತ್ತಲೇ ಲಲಿತ ಕೇಳಿದಳು.

“ಕ್ಷಮಿಸುವಂಥ ಯಾವ ಅಪರಾಧ ನೀನು ಮಾಡಿರುವುದು?”

“ಇಷ್ಟು ಮಾಡಿದ್ದು ಸಾಲದೆ? ಇಲ್ಲವೆನ್ನುವ ಔದಾರ್ಯದಿಂದ ನನ್ನನ್ನು ಕೊಲ್ಲುವಿರಾ?”

“ಹಾಗೆಲ್ಲಾ ಮಾತಾಡಬೇಡ, ಸುಮ್ಮನಿರು ಚಿನ್ನಾ.”

“ನನ್ನ ಮೊರೆಯಲ್ಲಿ ಪಾಪದ ಕಳಂಕವನ್ನು ಕಂಡೆನಲ್ಲಾ.”

“ಅದರಿಂದ ಮನಸ್ಸಿನ ಶಂಕೆ ನೀಗಿತಲ್ಲವೆ?”

“ನಿಮ್ಮ ಮನಸ್ಸನ್ನು ಎಷ್ಟು ನೋಯಿಸಿದೆ.”

“ಸತ್ಯವೇ ಹಾಗೆ. ಅದರ ದರ್ಶನವಾಗುವುದಕ್ಕೆ ಎಷ್ಟೋ ನೋವುಗಳನ್ನು ದಾಟಬೇಕು.”

“ಆದರೆ ಇಂಥ ಅಪರಾಧಕ್ಕೆ ಶಿಕ್ಷೆಯಿಲ್ಲವೆ? ನನ್ನನ್ನು ಇಷ್ಟಕ್ಕೇ ಮನ್ನಿಸಿಬಿಡುತ್ತೀರಾ?”

“ಶಿಕ್ಷೆಯಿಲ್ಲದೆ ಉಂಟೆ? ಅಷ್ಟು ಸುಲಭವಾಗಿ ಮನ್ನಿಸುವುದು ಹೇಗೆ ಸಾಧ್ಯ?”

ಎಂದು ನುಡಿದು, ಕಣ್ಣೀರಿಂದ ಒದ್ದೆಯಾಗಿದ್ದ ಅವಳ ತುಟಿ ಕೆನ್ನೆಗಳನ್ನು ತುಂಬಿದ ಅಕ್ಕರೆಯಿಂದ ಚುಂಬಿಸಿದ.

ಕಾಳಿಕೆಯನ್ನು ನೀಗಿದ ಚಿನ್ನದಂತೆ ಲಲಿತನ ಮನಸ್ಸು ನಿರ್ಮಲವಾಯಿತು. ಅನುರಾಗಕ್ಕೆ ಅಭಿಮಾನ ಕುಂದಣವಿಟ್ಟಿತು. ಹೊರಗೆ ವೆಂಕಮ್ಮನವರಿದ್ದಾರೆಂಬ ಅರಿವೂ ಇಲ್ಲದೆ ಅವಳು ನಲ್ಲನ ತೆಕ್ಕೆಯಲ್ಲಡಗಿ ಮೈಮರೆತಳು.

ರಾತ್ರಿ ತುಂಬ ಹೊತ್ತು ನಿದ್ದೆಯೇ ಹತ್ತಲಿಲ್ಲ. ಸಂಜೆಯ ಪ್ರಕರಣವೆಲ್ಲಾ ಮನಸ್ಸಿನಲ್ಲಿ ಪುನರಾವರ್ತನವಾಗುತ್ತಿತ್ತು. ವಿಷಾದ ಘಟನೆ ಒಲುಮೆಯನ್ನು ನಲುಗಿಸುವ ಬದಲು ಅದರ ಬೆಸುಗೆಯನ್ನು ಬಲಪಡಿಸಿದ್ದರೂ ತನ್ನ ವರ್ತನೆಯಿಂದ ಮೂಡಿದ ಪಶ್ಚಾತ್ತಾಪ ಲಲಿತನ ಮನಸ್ಸಿನಿಂದ ಇನ್ನೂ ಮರೆಯಾಗಿರಲಿಲ್ಲ. ಅದರ ಒಂದು ಸಣ್ಣ ನೋವು ಒಳಗೇ ಕೊರೆಯುತ್ತಿತ್ತು.

"ಎಂಥ ಕೆಲಸ ಮಾಡಿದೆ. ಹಾಲಿನಂತ ಶುದ್ಧವಾದ ಅವರ ಮನಸ್ಸಿಗೆ ಒಂದು ಗಳಿಗೆಯಲ್ಲಿ ಹೇಗೆ ಹುಳಿ ಹಿಂಡಿ ನೋಯಿಸಿಬಿಟ್ಟೆ. ನನ್ನ ಕೆಟ್ಟತನ ನೋಡಿ ಎಷ್ಟು ಜುಗುಪ್ಸೆಪಟ್ಟುಕೊಂಡರೋ. ಕೋಪವಿಲ್ಲ, ಕ್ಷಮಿಸುವುದಕ್ಕೇನಿದೆ ಎಂದದ್ದು ನಿಜವೆ? ನನ್ನ ಸಮಾಧಾನಕ್ಕೆ ಆಡಿರುವ ಮಾತನ್ನು ಹೇಗೆ ಒಪ್ಪಿಕೊಳ್ಳಲಿ? ಅವರನ್ನು ಯಾವ ರೀತಿಯಿಂದ ಸಂತೈಸಲಿ? ಈ ಅಪರಾಧಕ್ಕೇನು ಶಿಕ್ಷೆ? ಯಾವುದರಿಂದ ಮನಸ್ಸು ಸಮಾಧಾನವಾದೀತು?"

ಎಂದು ಹಲುಬಿದಳು. ಅತ್ತು ಅತ್ತು ದಿಂಬೆಲ್ಲಾ ತೊಯ್ದು ಹೋಯಿತು.

ಪಕ್ಕದಲ್ಲೇ ಮಲಗಿದ್ದ ಮೀನಾಕ್ಷಮ್ಮನವರು ಮಗಳ ಹೊರಳಾಟ ನೋಡಲಾರದೆ ಮೈಮುಟ್ಟಿ ಅಲ್ಲಾಡಿಸಿ,

"ಲಲಿತಾ, ಯಾಕಮ್ಮಾ ಸುಮ್ಮನೆ ಹೊರಳಾಡುತ್ತಿದ್ದೀ? ನಿದ್ದೆ ಬರುವುದಿಲ್ಲವೇನೆ? ಮೈ ಸ್ವಸ್ಥವಿಲ್ಲವೆ? ಏನಾಗುತ್ತಮ್ಮಾ?"

ಎಂದು ಕೇಳಿದರು.

"ಏನೂ ಇಲ್ಲಮ್ಮ, ಯಾಕೋ ನಿದ್ದೆ ಹತ್ತಲಿಲ್ಲ, ಅಷ್ಟೆ"

ಎಂದು ಲಲಿತ ಭಾರವಾದ ಧ್ವನಿಯಲ್ಲಿ ನುಡಿದು ಎದೆಯಲ್ಲಿ ಕಡೆಯುತ್ತಿದ್ದ ವೇದನೆಯನ್ನು ಪ್ರಯತ್ನಪೂರ್ವಕವಾಗಿ ಅದುಮಿ ಹಿಡಿದುಕೊಂಡಳು.

## ೨೭

ಮೈಸೂರಿಗೆ ಬಂದು ನಾಲ್ಕೈದು ದಿನಗಳಾಗಿತ್ತು. ಈ ಅವಧಿಯಲ್ಲಿ ಸುತ್ತ ಮುತ್ತಣ ಪ್ರೇಕ್ಷಣೀಯ ಸ್ಥಳಗಳನ್ನೆಲ್ಲಾ ನೋಡಿ ಬಂದದ್ದಾಗಿತ್ತು. ಮದರಾಸಿನ ಬೆಂಗಾಡು ಸೀಮೆಯಲ್ಲಿ ಬಿಸಿಲಿನ ಬೇಗೆಯೊಂದನ್ನು ಬಿಟ್ಟು ಬೇರೇನನ್ನೂ ಕಂಡರಿಯದ ಅಯ್ಯರರ ಸಂಸಾರಕ್ಕೆ ಮೈಸೂರು ಸೀಮೆಯ ಸಹಜ ಸೌಂದರ್ಯ ಆಶ್ಚರ್ಯವನ್ನುಂಟುಮಾಡಿತು. ವಿಜಯದಶಮಿಯ ದಿನವಂತೂ ಕಣ್ಣಿಗೆ ಹಬ್ಬ ವಾಗಿದ್ದ ಮೈಸೂರಿನ ಸಂಭ್ರಮ ಅವರ ಸಂತೋಷಕ್ಕೆ ಮುಡಿಯಿಟ್ಟಿತು. ಅನುಭವಕ್ಕೆ ಹೊಸತಾದ ಆ ದೃಶ್ಯಗಳನ್ನು ನೋಡಿ ಲಲಿತಳಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಮಧುಸೂದನನ ಜೊತೆಗೂಡಿ ಅವಳು ತಿರುಗಿದ್ದೂ ತಿರುಗಿದ್ದೇ.

ಆದರೆ ಅಯ್ಯರರ ಮನಸ್ಸನ್ನು ಸಂಕೋಚ ಬಾಧಿಸುತ್ತಿತ್ತು. ಮೈಸೂರಲ್ಲಿ ಹೆಚ್ಚು ದಿನ ನಿಲ್ಲುವುದು ಅವರಿಗೆ ಇಷ್ಟವಿರಲಿಲ್ಲ. ಶಿವಸಮುದ್ರವನ್ನು ನೋಡ ಬೇಕೆಂಬ ಒಂದು ಬಯಕೆಯೇನೋ ಬಹು ಹಿಂದಿನಿಂದಲೂ ಅವರಿಗಿತ್ತು. ಆ ಒಂದು ಅವಕಾಶವನ್ನು ಉಪಯೋಗಿಸಿಕೊಂಡು ಹಿಂತಿರುಗಿಬಿಡುವುದೆಂದು ಅವರು ಯೋಚಿಸಿದರು. ಬೇಲೂರು ಹಳೆಬಿಡುಗಳಿಗೆ ಹೋಗಬೇಕೆಂದು ಲಲಿತ ಆಸೆಪಡುತ್ತಿದ್ದುದೇನೋ ನಿಜ. ಆದರೆ ಅದಕ್ಕೆಲ್ಲಾ ಹೆಚ್ಚು ಕಾಲ ಹಿಡಿಸುತ್ತಿತ್ತು. ಮಧುಸೂದನನಿಗೆ ಹೆಚ್ಚು ದಿನ ಹೊರೆಯಾಗುವುದು ನಟರಾಜ ಅಯ್ಯರರಿಗೆ ಸಮ್ಮತಿಯಿರಲಿಲ್ಲ.

ಅವರ ಮನಸ್ಸು ಮದರಾಸಿನ ಕಡೆ ತಿರುಗುತ್ತಿದೆಯೆಂಬ ಸೂಕ್ಷ್ಮ ಮಧುಸೂದನನಿಗೆ ಲಲಿತನಿಂದ ತಿಳಿದಿತ್ತು. ಹೇಗಾದರೂ ಮಾಡಿ ಇನ್ನೊಂದು ವಾರವಾದರೂ ಅವರನ್ನು ನಿಲ್ಲಿಸಿಕೊಳ್ಳಬೇಕೆಂದು ಅವನ ಮನಸ್ಸು ಹಾತೊರೆಯುತ್ತಿತ್ತು. ಆದರೆ ಊರಿಗೆ ಬಂದು ಈಗಾಗಲೇ ಒಂದು ವಾರದ ಹತ್ತಿರಕ್ಕೆ ಬಂದಿರುವಾಗ ಒತ್ತಾಯ ಮಾಡಿದರೂ ಅವರು ಒಪ್ಪಲಾರರೆಂಬ ನಿಜ ಅವನ ಮನಸ್ಸಿಗೆ ಹೊಳೆಯದಿರಲಿಲ್ಲ. ಅಡಿಗೆಯವನು, ಆಳುಕಾಳುಗಳ ಮೇಲೆ ಮನೆಯನ್ನು ಬಿಟ್ಟು ಬಂದಿರುವುದಕ್ಕಾಗಿ ಮೀನಾಕ್ಷಮ್ಮನವರು ಸುಮ್ಮನೆ ಒಪ್ಪಾಡುತ್ತಿದ್ದರು.

ಮಧುಸೂದನ ಲಲಿತ ಒಬ್ಬರನ್ನೊಬ್ಬರು ಅಗಲುವುದು ಅನಿವಾರ್ಯವಾಗಿತ್ತು. ಅದನ್ನು ತಪ್ಪಿಸಲು ಸಾಧ್ಯವೇ ಇರಲಿಲ್ಲ.

ವಿಜಯ ದಶಮಿಯ ರಾತ್ರಿ ಎಲ್ಲರೂ ಊಟಮಾಡಿ ಕುಳಿತಿದ್ದಾಗ ಅಯ್ಯರವರು ತಾವಾಗಿಯೇ ಪ್ರಯಾಣದ ಮಾತೆತ್ತಿದರು. ನಾಳನೆಯ ದಿನ ಸೋಮನಾಥಪುರ, ಶಿವನಸಮುದ್ರ ನೋಡಿಕೊಂಡು ಬಂದು ಅದರ ಮರುದಿನ ಮದರಾಸಿಗೆ ಹೊರಟುಬಿಡುವುದೆಂದು ಹೇಳಿಬಿಟ್ಟರು. ಆ ನಿರ್ಧಾರದಿಂದ ಅವರನ್ನು ಕದಲಿಸುವಹಾಗಿರಲಿಲ್ಲ ಮಧುಸೂದನನಿಗೆ ಸ್ವಲ್ಪವಾದರೂ ಒತ್ತಾಯ ಮಾಡಿ ನೋಡೋಣವೆಂದು ಆಸೆ. ಅವನ ಮನಸ್ಸು ಕೈಮಿಂಚುತ್ತಿದ್ದ ಅವಕಾಶವನ್ನು ಬಿಡಲಿಷ್ಟವಿಲ್ಲದೆ ಚೆಂಡಿಹಿಡಿದ ಮಗುವಿನ ಹಾಗೆ ಅದಕ್ಕೇ ಜೋತು ಬೀಳುತ್ತಿತ್ತು. ಅಯ್ಯರರು ತಮ್ಮ ನಿರ್ಧಾರ ತಿಳಿಸಿದ ಮೇಲೂ ಸುಮ್ಮನಿರಲಾರದೆ,

"ಇನ್ನೂ ಎರಡು ದಿನ ಇದ್ದು ಹೋಗಬಹುದಾಗಿತ್ತು"

ಎಂದ. ಇಷ್ಟೇ ನಾಲದೆನ್ನುವ ಅತೃಪ್ತಿಯನ್ನು ಅವನ ಧ್ವನಿ ಸೂಚಿಸುತ್ತಿತ್ತು. ಅಯ್ಯರರು ನಗುತ್ತ,

"ನಾವೆಷ್ಟು ದಿನ ಇದ್ದರೂ ನಿಮಗೆ ತೃಪ್ತಿಯೇ ಇಲ್ಲವೆನ್ನುವಹಾಗಿದೆ. ನಿಮ್ಮ ವಿಶ್ವಾಸದಲ್ಲಿ ಹಾಗೆನ್ನುವುದೂ ಸಹಜವೇ ಅನ್ನಿ ಆದರೆ ಊರು ಬಿಟ್ಟು ಆಗಲೇ ಒಂದು ವಾರಕ್ಕೆ ಬಂತು ನೋಡಿ. ನಾವು ಸುಮ್ಮನೆ ನಿಮ್ಮ ಆತಿಥ್ಯದಲ್ಲಿ ಕುಳಿತುಬಿಟ್ಟರೆ ಕೊನೆಯೆಲ್ಲಿ? ಸ್ವಲ್ಪ ಹೆಚ್ಚು ಕಡಮೆ ನೋಡುವುದನ್ನೆಲ್ಲಾ ನೋಡಿದ ಹಾಗೇ ಆಯಿತಲ್ಲ. ಮೈಸೂರಿನಲ್ಲಿ ನಮ್ಮವರಾಗಿ ನೀವಿರು

ವಾಗ ಬಂದು ಹೋಗುವುದಕ್ಕೇನು ಕಷ್ಟ? ಇನ್ನು ಹೆಚ್ಚುದಿನ ನಿಲ್ಲುವ ವಿಷಯದಲ್ಲಿ ದಯವಿಟ್ಟು ಒತ್ತಾಯ ಬೇಡ. ಹೀಗೆ ಹೇಳುತ್ತಿದೇನೆಂದು ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡಿ."

ಎಂದು ನುಡಿದರು. ಆ ಮಾತೂ ನಿಜವೆಂದು ಅವನಿಗೆ ತೋರಿತು. ಹೌದು, ಎಷ್ಟಿದ್ದರೂ ಬೇಕು. ಆಸೆಗೆ ಪಾರವೆಲ್ಲಿ?

ಅವರ ಮಾತಿಗೆ ತಲೆಬಾಗದೆ ಬೇರೆ ದಾರಿಯಿರಲಿಲ್ಲ.

ಬೆಳಗ್ಗೆ ಎದ್ದು ಎಲ್ಲರೂ ಸ್ನಾನ, ಕಾಫಿ ತಿಂಡಿ ಮುಗಿಸಿಕೊಂಡು ಶಿವ ಸಮುದ್ರಕ್ಕೆ ಹೊರಟರು. ಮೊದಲು ಸೋಮನಾಥಪುರಕ್ಕೆ ಹೋಗಿ ಅಲ್ಲಿ ಸ್ವಲ್ಪ ಹೊತ್ತಿದ್ದು ದೇವಾಲಯದ ಶಿಲ್ಪ ಸೌಂದರ್ಯವನ್ನು ನೋಡಿಕೊಂಡು ಹಿಂತಿರುಗಿದರು. ಶಿವಸಮುದ್ರ ತಲುಪಿದಾಗ ಹನ್ನೆರಡು ಘಂಟೆಯಾಗಿತ್ತು.

ಮುಸಾಫರ ಖಾನೆಯ ಕಡೆಗೆ ಕಾರು ಬರುತ್ತಿದ್ದುದನ್ನು ದೂರದಿಂದಲೇ ನೋಡಿದ ಕಾವಲುಗಾರ ಕಾರು ನಿಲ್ಲುತ್ತಲೇ ಹತ್ತಿರ ಬಂದು ಕೈ ಮುಗಿದ. ದಸರ ಪ್ರವಾಸಿಗಳ ಬಕ್ಷೀಸಿನ ರುಚಿ ಕಂಡಿದ್ದ ಅವನ ಮನಸ್ಸು ಬೇಟೆಯನ್ನು ಕಂಡ ಪ್ರಾಣಿಯ ಹಾಗೆ ಜಾಗ್ರತಗೊಂಡಿತು. ಇಲ್ಲದ ವಿನಯವನ್ನು ಪ್ರದರ್ಶಿಸುತ್ತ ಅತಿಥಿಗಳ ಅಜೂಜುವಾರಿಗೆ ನಿಂತ. ಅವನ ಕೈಯಲ್ಲಿ ಎರಡು ರೂಮುಗಳ ಬಾಗಿಲು ತೆಗೆಸಿ ಎಲ್ಲರೂ ಒಳಗೆ ಹೋಗಿ ಕುಳಿತು ಸ್ವಲ್ಪ ಹೊತ್ತು ವಿಶ್ರಮಿಸಿ ಕೊಂಡರು. ಅವನನ್ನೇ ಹೋಟೆಲಿಗೆ ಕಳಿಸಿ ಮಾಣಿಯ ಕೈಯಲ್ಲಿ ಎರಡು ಊಟ ತರಿಸಿದರು. ವಿಶಾಲಾಕ್ಷಮ್ಮನವರೊಬ್ಬರನ್ನುಳಿದು ಎಲ್ಲರೂ ಊಟ ಮಾಡಿದರು. ಅವರು ಮಾತ್ರ ಹಾಲು ಹಣ್ಣು ತೆಗೆದುಕೊಂಡರು.

ಮಧ್ಯಾಹ್ನ ನಾಲ್ಕು ಘಂಟೆಯವರೆಗೆ ಎಲ್ಲರೂ ವಿಶ್ರಮಿಸಿಕೊಂಡರು.

ಮಾಣಿ ಹೋಟೆಲಿನಿಂದ ಕಾಫಿ, ತಿಂಡಿ ತಂದಿಟ್ಟ. ಉಪಾಹಾರ ಸೇವಿಸಿ ಜಲಪಾತ ನೋಡಲು ಹೊರಟರು.

ಊರಲ್ಲೆಲ್ಲಾ ಹರಿಯುತ್ತಿದ್ದ ಕಾಲುವೆಗಳು, ಊರನ್ನಾವರಿಸಿದ್ದ ನದಿ ನೋಡುವುದಕ್ಕೆ ರಮ್ಯವಾಗಿತ್ತು. ಎಲ್ಲಿಂದಲೋ ತಂದು ಚೆಲುವಿನ ಮಡಿಲಿ ನಲ್ಲಿಟ್ಟ ಹಾಗಿದ್ದ ಊರು ಚೊಕ್ಕಟವಾಗಿ ಆಕರ್ಷಕವಾಗಿತ್ತು. ಅನತಿದೂರದಲ್ಲೇ ಪಲ್ಲವಿಸುತ್ತಿದ್ದ ಪ್ರಕೃತಿಯ ನಡುವೆ ಭೋರೆಂದು ಧುಮುಕುತ್ತಿದ್ದ ಜಲಪಾತ

ನೋಡಬನ್ನಿರೆಂದು ಕರೆಯುತ್ತಿತ್ತು. ದಾರಿ ತೋರಿಸಲು ಆಳು ಜೊತೆಯಲ್ಲಿ ಸಿದ್ಧವಾಗಿಯೇ ಇದ್ದ.

ಬೆಟ್ಟದ ಕೋಡಿನಿಂದ ಕೆಳಗಿನ ಕಮರಿಗುರುಳುತ್ತಿದ್ದ ಗಗನಚುಕ್ಕಿಯ ಸದ್ದು ದೂರಕ್ಕೇ ಕೇಳಿಸುತ್ತಿತ್ತು. ಧುಮುಕುವ ನೀರಿನಿಂದೇಳುತ್ತಿದ್ದ ಹನಿ ಮಂಜು ಸುತ್ತಣಪ್ರದೇಶವನ್ನೆಲ್ಲಾ ಆವರಿಸಿತ್ತು. ಕಡೆಯುತ್ತಿದ್ದ ಜಲರಾಶಿ ಕೊನೆಮೊದಲಿಲ್ಲದೆ ಹತ್ತಿಯನ್ನು ಹಿಂಜಿ ಎಸೆಯುತ್ತಿರುವಂತೆ ಭಾಸವಾಗುತ್ತಿತ್ತು. ಅದರಿಂದುಂಟಾದ ಕಿವಿಮುಚ್ಚುವ ಸದ್ದಿನಲ್ಲಿ ಒಬ್ಬರ ಮಾತು ಇನ್ನೊಬ್ಬರಿಗೆ ಕೇಳಿಸುವುದೂ ಸಾಧ್ಯವಿರಲಿಲ್ಲ. ಆ ಶಬ್ದಬ್ರಹ್ಮದಿಂದ ಅವ್ಯಕ್ತ ಮಧುರವಾದ ಒಂದು ಶ್ರುತಿ ಹೊರಟು ನಿಸರ್ಗದಲ್ಲಿ ಐಕ್ಯವಾಗುತ್ತಿತ್ತು. ಕಾಲ ದೇಶ ವರ್ತಮಾನಗಳನ್ನು ಮೀರಿದ ಒಂದು ನಿರಂತರತೆ ವಾತಾವರಣವನ್ನೆಲ್ಲಾ ತುಂಬಿ ಸೂಸುತ್ತಿತ್ತು. ಜಲರೂಪಿ ಪ್ರಕೃತಿ ತನ್ನ ಭೀಷಣಸುಂದರತೆಯನ್ನು ಮೆರೆಯುತ್ತಿದ್ದಳು.

ಜಲಪಾತದ ಬಳಿಸಾರಿ ನಿಂತ ಪರಿವಾರ ಮಹತ್ತಿನೆದುರಿಗೆ ನಿಂತ ಅಣುವಿನಂತೆ ತನ್ನ ಅಸ್ತಿತ್ವವನ್ನೇ ನೀಗಿಕೊಂಡು ಸ್ತಬ್ಧವಾಯಿತು. ಆ ಭವ್ಯದೃಶ್ಯಕ್ಕೆ ಮನಸೋತ ಅಯ್ಯರವರು ಗಾರುಡಿಗನ ಮಂತ್ರಕ್ಕೆ ಮುಗ್ಧವಾದ ಹಾವಿನ ಹಾಗೆ ಸುರಿಯುತ್ತಿರುವ ಜಲರಾಶಿಯನ್ನೇ ನೋಡುತ್ತ ಕುಳಿತುಬಿಟ್ಟರು.

ಜಲಪಾತದಿಂದ ಕೆಳಗಡೆ ಸ್ವಲ್ಪ ದೂರದಲ್ಲಿ ದೃಶ್ಯ ಇನ್ನೂ ಸುಂದರವಾಗಿತ್ತು. ಇಕ್ಕಟ್ಟಾದ ಕಣಿವೆಯಲ್ಲಿ ಮೇಲೆ ಬಿದ್ದು ಕಡೆದು ಹರಿಯುತ್ತಿದ್ದ ನೀರು ಚಲಿಸುತ್ತಿದ್ದ ಹೂವಿನ ಹಾಸಿನಂತಿತ್ತು. ಲಲಿತ ಅದರ ಕಡೆ ಕೈ ತೋರಿಸಿ ತಂದೆಗೆ ಸನ್ನೆ ಮಾಡಿದಳು. ಆದರೆ ಗಗನಚುಕ್ಕಿಯ ವಶೀಕರಣಕ್ಕೆ ಪೂರ್ತಿ ಸಿಕ್ಕಿಹೋಗಿದ್ದ ನಟರಾಜ ಅಯ್ಯರರು ಸ್ಥಳ ಬಿಟ್ಟು ಕದಲುವಸ್ಥಿತಿಯಲ್ಲಿರಲಿಲ್ಲ. ಅವರು ಮಧುಸೂದನನ ಕಿವಿಯಲ್ಲಿ,

"ನೀವಿಬ್ಬರೂ ಬೇಕಾದರೆ ಆಳನ್ನು ಕರೆದುಕೊಂಡು ಅಷ್ಟು ದೂರ ಹೋಗಿ ನೋಡಿಕೊಂಡು ಬನ್ನಿ. ನಾವು ಇಲ್ಲೇ ಕುಳಿತಿರುತ್ತೇವೆ"

ಎಂದರು. ವಿಶಾಲಾಕ್ಷಮ್ಮನವರು ಮಗಳನ್ನು ಎಚ್ಚರಿಸುತ್ತ,

"ಜೋಪಾನ. ತುಂಬ ಮುಂದೆ ಹೋಗಬೇಡಿ"

ಎಂದರು. ಲಲಿತನನ್ನು ಕರೆದುಕೊಂಡು ಮಧುಸೂದನ ದಡದ ಅಂಚಿನಲ್ಲೇ

ಮುಂದೆ ಸಾಗಿದ. ಆಳು ಹಿಂಬಾಲಿಸಿದ. ಕಲ್ಲು ಬಂಡೆ ತಗ್ಗು ದಿಣ್ಣೆಗಳನ್ನು ದಾಟಿ ಇಬ್ಬರೂ ಮಾತಿಲ್ಲದೆ ನಡೆದರು. ದಡದ ಅಂಚಿನಲ್ಲಿ ಬೆಳೆದಿದ್ದ ಗಿಡಮರಗಳು ಸೀಳಿನ ಪೊರೆ ಬಾಗಿ ನಿಲಬಹುದೆ ಎರಚುತ್ತಿದ್ದ ನೀರಿನ ತುಂತುರಿನ ನೆನೆಯುತ್ತಿದ್ದುವು. ಪಕ್ಕದ ಕೆಲದಲ್ಲಿ ಬಿಸಿಲು ಹಾಗೆ ಎಲ್ಲಿಗದ್ದ ಬಂಡೆಗಳು ದೃಶ್ಯವನ್ನು ಬಣ್ಣ ತೋರಿಸುತ್ತಿದ್ದರೂ ಬರೀ ಸುರಹಾಸ್ಯದಲ್ಲೂ ಇದ್ದವು. ಇಬ್ಬರೂ ಒಂದು ಫರ್ಲಾಂಗಿನಷ್ಟು ದೂರ ನಡೆದು ಹೋಗಿ ನದಿ ತಿರುಗುವ ಕಡೆ ನಿಂತರು. ಬಂಡೆಗಳ ಎರೆಗಟ್ಟಿನಲ್ಲಿ ಇಕ್ಕಟ್ಟಿಗೆ ಸಿಕ್ಕಿದ್ದ ನದಿ ನೊರೆಯು ಕಡೆಯುವ ಹಾಗೆ ಕಡೆಯುತ್ತ ಮುಂದೆ ನುಗ್ಗುತ್ತಿತ್ತು. ತಗ್ಗಿನಲ್ಲಿದ್ದ ಆ ಜಾಗಕ್ಕೆ ಜಲಪಾತದ ಸದ್ದು ಅಷ್ಟು ಹೆಚ್ಚಾಗಿ ಕೇಳಿಸುತ್ತಿರಲಿಲ್ಲ. ಅಯ್ಯರ್ ದಂಪತಿಗಳು ಕುಳಿತಿದ್ದ ಸ್ಥಳವೂ ಮರೆಯಾಗಿತ್ತು.

ಲಲಿತ ಮಧುಸೂದನನ ಮುಖವನ್ನು ಅರ್ಥಗರ್ಭಿತವಾಗಿ ನೋಡಿದಳು. ಅವನು ಆಳಿನ ಕಡೆ ತಿರುಗಿ,

"ನೀನು ಹೋಗು. ಯಜಮಾನರು ಏತಕ್ಕಾದರೂ ಕರೆದಾರು. ನಾವು ಸ್ವಲ್ಪ ಹೊತ್ತು ಇಲ್ಲೇ ಕುಳಿತಿದ್ದು ಬರುತ್ತೇವೆ"

ಎಂದ. ಆಳು ಅನುಮಾನಿಸುತ್ತ,

"ಉಸಾರು ಬುದ್ಧೀ. ಮುಂದಕ್ಕೆ ಓದರೆ ಅಪಾಯ. ಜಾರಿದರೆ ಬುಡ್ಡೆ ಉಳಿಯಾಕಿಲ್ಲ"

ಎಂದು ಎಚ್ಚರಿಸಿ ಮನಸ್ಸಿಲ್ಲದ ಮನಸ್ಸಿನಿಂದ ಬಂದ ದಾರಿ ಹಿಡಿದು ಹೊರಟ. ಅವನು ಮರೆಯಾಗುವುದನ್ನೇ ನೋಡುತ್ತಿದ್ದ ಮಧುಸೂದನ ಲಲಿತನ ಕೈಹಿಡಿದು ಹತ್ತಿರ ಎಳೆದುಕೊಂಡ. ಬೆನ್ನ ಹಿಂದೆ ಎತ್ತರವಾಗಿ ಹಬ್ಬಿದ್ದ ಬಂಡೆಯನ್ನೊರಗಿ ನಿಂತು ಇಬ್ಬರೂ ನದಿಯನ್ನೇ ನೋಡುತ್ತ ಕ್ಷಣಕಾಲ ಮೌನವಾಗಿದ್ದರು. ಇಬ್ಬರ ಮನಸ್ಸನ್ನೂ ಬಳಿಸಾರುತ್ತಿದ್ದ ನಾಳಿನ ಅಗಲಿಕೆಯ ಚಿಂತೆ ಆವರಿಸಿಬಿಟ್ಟಿತ್ತು. ಲಲಿತನ ಮನಸ್ಸು ಖಿನ್ನವಾಗಿತ್ತು. ಆ ಸುಂದರ ದೃಶ್ಯಕ್ಕೆ ತೀರ ವ್ಯತಿರಿಕ್ತವಾದ ಭಾವನೆ ಅವಳ ಮುಖದ ಮೇಲೆ ಕೆತ್ತಿತ್ತು. ಸನ್ನಿವೇಶ ಮನಸ್ಸನ್ನು ರಮಿಸುವ ಬದಲು ಸನ್ನಿಹಿತವಾಗಿದ್ದ ವೇದನೆಯನ್ನು ಕೆರಳಿಸುತ್ತಿತ್ತು. ನೋವನ್ನು ತಾಳಲಾರದೆ ನೀಳವಾಗಿ ನಿಟ್ಟುಸಿರಿಟ್ಟು ಮಧುಸೂದನನ

ಭುಜಕ್ಕೆ ತಲೆಯೊರಗಿಸಿದಳು. ಆತನ ತೋಳು ಅವಳ ಮೈಯನ್ನು ಅಕ್ಕರೆಯಿಂದ ಬಳಸಿತು.

"ನಾಳೆ ಊರಿಗೆ ಹೋಗಬೇಕಲ್ಲಾ.

ಲಲಿತ ತಡೆಯಲಾರದೆ ನುಡಿದಳು. ಅವಳ ಮಾತಿಗೆ ಏನು ಉತ್ತರ ಹೇಳಬೇಕೋ ಅವನಿಗೆ ತಿಳಿಯಲಿಲ್ಲ. ಮೌನವಾಗಿದ್ದ.

"ನೀವು ಹೇಗಾದರೂ ಗಂಡಸರು. ಹತ್ತು ಕೆಲಸದಲ್ಲಿ ಮರೆತುಬಿಡುತ್ತೀರಿ."

ಮಧುಸೂದನನ ಮನಸ್ಸು ಖಳಕ್ ಎಂದಿತು. ಲಲಿತ ತನ್ನನ್ನು ಪುನಃ ಪರೀಕ್ಷಿಸುತ್ತಿದಾಳೇನೋ ಎಂದು ಅವನಿಗೆ ತೋರಿತು.

"ನಿನ್ನನ್ನು ಮರೆಯುವುದು ಅಷ್ಟು ಸುಲಭವೆಂದು ತಿಳಿದೆಯಾ, ಲಲಿತ ?"

"ನಾನೇನು ಬಲ್ಲೆ, ಹೇಳಿ ?"

"ನನ್ನ ಅಂತರಂಗವನ್ನು ನಿನ್ನ ಮುಂದೆ ಬಿಚ್ಚಿಟ್ಟ ಮೇಲೂ ಸಂಶಯವೆ ?"

"ನಿಮ್ಮಲ್ಲಿ, ನಿಮ್ಮ ಪ್ರೇಮದಲ್ಲಿ ನಾನು ಸಂಶಯಪಡುತ್ತಿಲ್ಲ ?"

"ಹಾಗಾದರೆ ಮತ್ತೇಕೆ ಚಿಂತಿಸುತ್ತಿರುವೆ ?"

"ಇಷ್ಟಾದ ಮೇಲೆ ನಾವು ಅಗಲುವುದು ಹೇಗೆ ಸಾಧ್ಯ ?"

"ಹೌದು. ಆದರೆ ಅಗಲಿಕೆ ಈಗ ಅನಿವಾರ್ಯವಾಗಿ ಒದಗಿದೆಯಲ್ಲಾ."

"ಹೇಗೆ ಹೋಗಲಿ ? ಒಂದು ಕ್ಷಣವೂ ನಿಮ್ಮನ್ನು ಬಿಟ್ಟಿರಲಾರದ ಹಾಗೆ ಮಾಡಿಬಿಟ್ಟಿರಿ"

ಎಂದು ಕಂಬನಿದುಂಬಿದಳು. ಮಧುಸೂದನ ಅವಳ ಕೆನ್ನೆಗೆ ತನ್ನ ಕೆನ್ನೆ ಜೋಡಿಸುತ್ತ ಉದ್ವೇಗವಶನಾಗಿ ನುಡಿದ.

"ಅಷ್ಟು ಹೋಗುವುದಕ್ಕೆ ಇಷ್ಟವಿಲ್ಲದಿದ್ದರೆ ಇಲ್ಲೇ ಇದ್ದುಬಿಡು."

"ಇರುವ ಹಾಗೆ ಮಾಡಿಕೊಳ್ಳುವ ಭಾರ ನಿಮಗೇ ಸೇರಿದ್ದು."

"ನಾನೂ ಅದನ್ನೇ ಯೋಚಿಸುತ್ತಿದೇನೆ"

ಎಂದ. ಉದ್ವಿಗ್ನಗೊಂಡ ಅವನ ಮನಸ್ಸು ಆ ಸಮಸ್ಯೆಯ ಸುತ್ತ ಹರಿದಾಡುತ್ತಿತ್ತು. ಯಾವ ಕಡೆಯಿಂದಲೂ ಪ್ರವೇಶಕ್ಕೆ ಅವಕಾಶವಿಲ್ಲದ ಎತ್ತರವಾದ ಕಲ್ಲುಕೋಟೆಯ ಮುಂದೆ ನಿಂತ ರಿಪು ಆ ಕಲ್ಲನ್ನೇ ತಬ್ಬಿ ತಡಕುವ ಹಾಗೆ ಅವನ ಬುದ್ಧಿ ಬೃಹದ್ರೂಪ ತಾಳಿ ತನ್ನ ಮುಂದೆ ನಿಂತಿದ್ದ ಸಮಸ್ಯೆಯ

ಗೋಡೆಯನ್ನು ಭೇದಿಸಲು ಹವಣಿಸುತ್ತಿತ್ತು. ಅವರ ಪ್ರಣಯ ಬರಿಯ ಮೇಲು ಮೇಲಿನ ಚೆಲ್ಲಾಟಕ್ಕೇ ನಿಲ್ಲದೆ, ಹಿಂದೆ ಕಾತ್ರೆಗೆಯುವ ಸ್ಥಿತಿಯನ್ನು ಮೀರಿ ಮುಂದೆ ಹೋಗಿತ್ತು. ಈ ಸನ್ನಿವೇಶದಲ್ಲಿ ಯಾವುದಾದರೊಂದು ಯೋಚನೆ ಮಾಡಿ ಸಮಸ್ಯೆ ಬಗೆಹರಿಸದಿದ್ದರೆ ಗತ್ಯಂತರವಿರಲಿಲ್ಲ.

ಲಲಿತನ ಕೈಬಿಡುವುದು ಮಧುಸೂದನ ಊಹೆಯಲ್ಲಿಯೂ ಯೋಚಿಸಲು ಶಕ್ಯವಲ್ಲದ ವಿಷಯವಾಗಿತ್ತು. ಅವಳು ಅವನ ಸರ್ವಸ್ವವಾಗಿದ್ದಳು. ಪ್ರಾಣಕ್ಕಿಂತಲೂ ಪ್ರಿಯತಮವಾದ ಆ ವಸ್ತುವನ್ನು ತೊರೆದು ಬಾಳುವುದೆನ್ನುವುದು ಅವನಿಗೆ ಕಲ್ಪನೆಯಲ್ಲಿಯೂ ಭಯಂಕರವಾಗಿತ್ತು. ಸಮಾಜದ ಸಮ್ಮತಿಯಲ್ಲಿ ಅವಳನ್ನು ಕೂಡುವುದೆಂದರೆ ಮದುವೆಯೊಂದೇ ಮಾರ್ಗವಾಗಿತ್ತು. ಅದಕ್ಕೆ ಬಾಹಿರವಾದ ಸ್ಥಿತಿ ಇಬ್ಬರ ಗೌರವಕ್ಕೂ ಹಾನಿಕರವಾಗಿತ್ತು.

ಮದುವೆಯ ಪ್ರಶ್ನೆ ಮನಸ್ಸಿನಲ್ಲಿ ಸುಳಿದು ಅವನ ಬುದ್ಧಿ ದೀಪದ ಸುತ್ತ ಹರಿದಾಡುವ ಪತಂಗದ ಹಾಗೆ ಸುತ್ತಲಾರಂಭಿಸಿತು. ಅದಕ್ಕೆ ಎಷ್ಟು ಕಡೆಗಳಿಂದ ಪ್ರತಿಕೂಲಗಳು ಬರುತ್ತವೆಂಬುದನ್ನು ಮನಗಾಣುವುದು ಸಾಧ್ಯವಿರಲಿಲ್ಲ. ಹಿಂದಿನ ತಲೆಮಾರಿನವರಾದರೂ ಭಾವನೆಯಲ್ಲಿ ಎಷ್ಟೋ ಮುಂದುವರಿದಿದ್ದ ನಟರಾಜ ಅಯ್ಯರರು ಇಬ್ಬರಲ್ಲೂ ತಲೆದೋರಿದ್ದ ಪ್ರಣಯವನ್ನರಿತು ಒಂದು ವೇಳೆ ವಿವಾಹಕ್ಕೆ ಸಮ್ಮತಿಸಿಯಾರೆಂದು ಊಹಿಸಬಹುದಾಗಿದ್ದರೂ ವೆಂಕಮ್ಮನವರು ಈ ಸಂಬಂಧಕ್ಕೆ ಅಷ್ಟು ಸುಲಭವಾಗಿ ಒಪ್ಪುವರೆಂದು ಹೇಳುವ ಹಾಗಿರಲಿಲ್ಲ. ಈ ವಿಷಯವನ್ನು ಯಾರೊಡನೆ ಹೇಗೆ ಪ್ರಸ್ತಾಪಿಸುವುದೆಂಬುದೇ ಒಂದು ದೊಡ್ಡ ಸಮಸ್ಯೆಯಾಗಿತ್ತು. ಮಧುಸೂದನನ ಮನಸ್ಸು ಕತ್ತರಿಯ ನಡುವೆ ಸಿಕ್ಕಿದ ಅಡಕೆಯ ಹಾಗಾಯಿತು. ಅವನ ಸಂದಿಗ್ಧ ಅವಳಿಗೂ ಅರ್ಥವಾಗಿರಬೇಕು. ಅವನು ಮಾತಾಡದೆ ಮೌನವಾಗಿ ಚಿಂತಿಸುತ್ತಿದ್ದುದನ್ನು ನೋಡಿ,

"ಹೋಗಲಿ, ಕಾಗದವನ್ನಾದರೂ ಬರೆಯುತ್ತಿರಿ. ನನ್ನ ಪಾಲಿಗೆ ಅದೇ ಆಧಾರ"

ಎಂದು ನಿಟ್ಟುಸಿರು ಬಿಟ್ಟಳು. ಕುತ್ತಿಗೆಯ ನೆಲೆಯುಬ್ಬಿ ಬಂದು ಕಣ್ಣು ಹಸಿಗೂಡಿತು. ಎರಡು ತೋಳುಗಳಿಂದಲೂ ಅವನ ಕುತ್ತಿಗೆಯನ್ನು ಬಳಸಿ ರೋದಿಸತೊಡಗಿದಳು. ಮಧುಸೂದನ ಅವಳನ್ನು ಗಾಢವಾಗಿ ಅಪ್ಪಿ,

"ಅಷ್ಟು ಹತಾಶಳಾಗಬೇಡ, ಚಿನ್ನಾ. ಏನಾದರೊಂದು ಉಪಾಯ

ಯೋಚಿಸೋಣ. ಅಲ್ಲಿಯವರೆಗೂ ಸ್ವಲ್ಪ ಸಹಿಸಿಕೊಂಡಿರು. ನೀನೂ ಎದೆಗೆಟ್ಟು ನನ್ನ ಧೃತಿಯನ್ನೂ ಕದಲಿಸಬೇಡ"

ಎಂದ. ಲಲಿತ ಹಲ್ಲುಮುಡಿ ಕಚ್ಚಿಕೊಂಡು ಮೌನವಾಗಿ ಅಳತೊಡಗಿದಳು. ಅವಳ ಉದ್ವೇಗದಲ್ಲಿ ಭಾಗಿಯಾದ ಅವನ ಚಿತ್ತದ ಸ್ಥಿತಿಯೂ ಕಲಕಿತ್ತು. ಮರಕ್ಕೆ ಹಬ್ಬಿದ ಬಳ್ಳಿಯಂತೆ ತನ್ನ ಮೈಗೆ ಮೈ ಬಳಸಿ ನಿಂತಿದ್ದ ನಲ್ಲೆಯನ್ನು ಅವನು ಅನುನಯದಿಂದ ಸಂತೈಸತೊಡಗಿದ.

ಮುಂದೆ ಯಾವಾಗ ಸೇರುವೆವೆನ್ನುವ ಅರಿವಿಲ್ಲದ ಅನಿಶ್ಚಿತ ಸ್ಥಿತಿಯಲ್ಲಿ ಇಬ್ಬರೂ ಅಗಲಬೇಕಾಯಿತು. ಶಿವಸಮುದ್ರದ ಪ್ರವಾಸ ಸುಖದಾಯಕವಾಗುವ ಬದಲು ನಾಳಿನ ಉಗ್ರ ವೇದನೆಗೆ ಪೀಠಿಕೆಯಾಗಿತ್ತು.

## ೨೮

ಮೈಸೂರನ್ನು ತಲಪಿದಾಗ ರಾತ್ರಿ ಎಂಟು ಘಂಟೆ.

ವೆಂಕಮ್ಮನವರು ಬಿಸಿ ಅಡುಗೆ ಮಾಡಿಕೊಂಡು ಕಾದಿದ್ದರು. ಪ್ರವಾಸದ ಆಯಾಸ ಹಿತವಾದ ಊಟದಿಂದ ಪರಿಹಾರವಾಯಿತು. ನಟರಾಜ ಅಯ್ಯರರು ತಾಂಬೂಲ ಹಾಕಿಕೊಳ್ಳುತ್ತ ಕುಳಿತಿದ್ದಾಗ ಏನೋ ಜ್ಞಾಪಿಸಿ ಕೊಂಡವರಂತೆ ಒಂದು ಮಾತು ಆಡಿದರು.

"ಎಲ್ಲಾ ಸರಿ, ಒಂದು ಮಾತ್ರ ಮರೆತೇ ಹೋಯಿತು."

ಮಧುಸೂದನನಿಗೆ ಅವರು ಯಾವ ವಿಚಾರ ಕುರಿತು ಮಾತಾಡುತ್ತಿದ್ದಾರೆಂಬುದು ಅರ್ಥವಾಗಲಿಲ್ಲ. ಏನು, ಯಾವ ವಿಚಾರ ಎಂದು ಕೇಳುವಂತೆ ಅವರ ಮುಖ ನೋಡಿದ.

"ನಿಮ್ಮ ಹಾಡಿಕೆ ಕೇಳಿಸಲೇ ಇಲ್ಲವಲ್ಲಾ."

"ಓಹೋ ಅಷ್ಟೇ ತಾನೆ. ನನ್ನ ಹಾಡಿಕೆಗೇನು ಕಷ್ಟ"

ಎಂದು ರೂಮಿಗೆ ಎದ್ದು ಹೋಗಿ ತಂಬೂರಿ ತಂದು ಶ್ರುತಿಮಾಡಿಕೊಂಡು ಕುಳಿತ. ಹಜಾರದಲ್ಲಿ ಒಂದು ಕಡೆ ಅಯ್ಯರರೂ ಒಂದು ಕಡೆ ಲಲಿತನೂ ಕುಳಿತಿದ್ದರು. ಅಡುಗೆಮನೆಯ ಬಾಗಿಲಲ್ಲಿ ಮೀನಾಕ್ಷಮ್ಮನವರು ಕುಳಿತಿದ್ದರು. ವೆಂಕಮ್ಮನವರು ಒಳಗೇ ಇದ್ದರು.

ಮಧುಸೂದನ ಒಂದು ಘಂಟೆಯ ಹೊತ್ತು ಭಾವಾವೇಶದಿಂದ ಹಾಡಿ ತಂಬೂರಿ ಕೆಳಗಿಳಿಸಿದ. ಅವನ ಮನೋಧರ್ಮ ಸಹಜವಾಗಿಯೇ ಕರುಣಾ

ವ್ಯಂಜಕವಾದ ರಾಗಗಳ ಕಡೆ ತಿರುಗಿತ್ತು. ಶೋಕಾಪೂರ್ಣವಾದ ತನ್ನ ಮನಸ್ಸಿನ ಸಂವೇದನೆಗಳನ್ನು ಬಗೆಬಗೆಯ ಕೃತಿಗಳಿಂದ ತೋಡಿಕೊಂಡಿದ್ದ. ಮನಸ್ಸಿನ ಭಾವತೀವ್ರತೆ ಆತನು ಹಾಡಿದ ರಾಗಗಳಿಗೆ ವಿಲಕ್ಷಣವಾದ ಒಂದು ಹೊಳಪನ್ನು ಕೊಟ್ಟಿತ್ತು. ಹಾಡಿಕೆ ಕೇಳಿ ಅಯ್ಯರರ ಅಂತಃಕರಣ ತುಂಬಿ ಬಂದಿತು. ಅವರ ಮನಸ್ಸಿನ ಭಾವನೆ ನಿಲ್ಲದೆ ಹೊರಗೆ ಬರಲು ತವಕಿಸುತ್ತಿತ್ತು.

"ಈ ಸುಖದ ಮುಂದೆ ಇನ್ನು ಸುಖವುಂಟೆ, ಮಿ|| ಮಧುಸೂದನ್ ?"

ಎಂದು ನುಡಿದು ಹೊದೆದಿದ್ದ ಶಲ್ಯದಿಂದ ಕಣ್ಣಿನ ಅಂಚನ್ನು ಒರಸಿಕೊಂಡರು. ರಾಗಮಾರ್ದವವೂ ಅದರ ದೈನ್ಯವೂ ಅವರ ಮನಸ್ಸನ್ನು ಮುಟ್ಟಿದ್ದವೇ ವಿನಾ ಹಾಡಿಕೆಯ ಹಿನ್ನೆಲೆಯಲ್ಲಿ ಅಡಗಿದ್ದ ವೇದನೆಯ ಅರಿವು ಅವರಿಗಾಗಿರಲಿಲ್ಲ.

ಮಧುಸೂದನನ ದೃಷ್ಟಿ ಲಲಿತನ ಕಡೆ ಹರಿಯಿತು. ಅವಳು ತನ್ನನ್ನೇ ದಿಟ್ಟಿಸಿ ನೋಡುತ್ತ ಕೈಕಟ್ಟಿಕೊಂಡು ಕುಳಿತಿದ್ದುದನ್ನು ಅವನು ಗಮನಿಸಿದ. ಅವಳ ಎದೆಯಲ್ಲಿ ಕಡೆಯುತ್ತಿದ್ದ ಸಂಕಟವನ್ನು ಮುಖದಲ್ಲಿ ಕೆತ್ತಿದ್ದ ಉದ್ವೇಗ ಎತ್ತಿ ತೋರಿಸುತ್ತಿತ್ತು. ಮಧುಸೂದನ ವಾತಾವರಣದ ವ್ಯಗ್ರತೆಯನ್ನು ಕಡಮೆ ಮಾಡಬಿಳಸಿ, ನಗುಮೊಗದಿಂದ ಲಲಿತನ ಕಡೆ ನೋಡಿ,

"ಲಲಿತಾದೇವಿ ನಾಟ್ಯವನ್ನೇನು ಮಾಡಿದರು ?"

ಎಂದು ಪ್ರಶ್ನಿಸಿದ.

"ಅದೇಕೋ ಈಚೆಗೆ ಅವಳಿಗೆ ಅದರಲ್ಲಿ ಅಷ್ಟು ಉತ್ಸಾಹವೇ ಇದ್ದಂತಿಲ್ಲ. ಕಷ್ಟಪಟ್ಟು ಕಲಿತುಕೊಳ್ಳುವುದೇನೋ ಕಲಿತುಕೊಂಡಳು. ಈಚೆಗೆ ಮದರಾಸಿನಲ್ಲಿ ಮೂರು ನಾಲ್ಕು ಕಡೆ ಖಾಸಗಿಯಾಗಿ ಕಾರ್ಯಕ್ರಮವೂ ಇತ್ತು. ಆದರೆ ಏನು ಕಾರಣವೋ ಅವಳಿಗೆ ಸ್ವಲ್ಪ ಉತ್ಸಾಹ ಕಡಮೆಯಾಗಿರುವ ಹಾಗಿದೆ"

ಎಂದು ಅಯ್ಯರರು ಮಗಳ ಕಡೆ ನೋಡುತ್ತ ಹೇಳಿದರು.

"ನಾಟ್ಯಕಲೆ ನಿಮಗೆ ಚೆನ್ನಾಗಿ ಸಾಧಿಸಿದೆ, ಲಲಿತಾದೇವಿ. ಅದನ್ನು ಬಿಡಬೇಡಿ. ವೃತ್ತಿಗಲ್ಲದಿದ್ದರೂ ಆತ್ಮಸಂತೋಷಕ್ಕಾದರೂ ಅದನ್ನು ಕೈಬಿಡದೆ ಸಾಧಿಸಿಕೊಂಡಿರುವುದು ಒಳ್ಳೆಯದು"

ಎಂದು ಮಧುಸೂದನ ಹಿತೋಕ್ತಿ ನುಡಿದ. ಲಲಿತ ಅವನನ್ನೊಮ್ಮೆ ಸಮಸ್ಯಾತ್ಮಕವಾಗಿ ನೋಡಿ,

"ಆಗಲಿ"

ಎಂದು ಗಂಭೀರವಾಗಿ ಉತ್ತರ ಕೊಟ್ಟಳು. ಮೂರಕ್ಷರದ ಆ ಮಾತು ಅವಳ ಮನೋವೇದನೆಯ ಸಿಡಿಮದ್ದಿನ ಬೊನೆಬತ್ತಿಯಂತೆ ಅವನ ಮನಸ್ಸಿಗೆ ಭಾಸವಾಯಿತು.

ಬೆಳಗ್ಗೆಯೆಲ್ಲಾ ಪ್ರಯಾಣದ ಸಪ್ಪಳಿಯಲ್ಲಿಯೇ ಕಳೆಯಿತು. ಮಧುಸೂದನ ಮಾರ್ಕೆಟ್ಟಿಗೆ ಹೋಗಿ ಹೂವು, ಹಣ್ಣು, ವೀಳೆಯದೆಲೆ ತರಕಾರಿ ಗಳನ್ನು ಎರಡು ಬುಟ್ಟಿಗಳ ತುಂಬ ಭರ್ತಿ ಮಾಡಿಸಿಕೊಂಡು ಬಂದ. ಹಾಗೆಯೇ ಜೊತೆಗೆ ಒಂದು ಸಣ್ಣ ಜವಳಿ ಗಂಟೂ ಬಂದಿತು. ಅಡುಗೆಯವರು ಬೆಳಗ್ಗೆ ಅಷ್ಟು ಹೊತ್ತಿಗೇ ಬಂದು ಔತಣದ ಅಡುಗೆ ಸಿದ್ಧಪಡಿಸುವುದರಲ್ಲಿ ನಿರತ ರಾಗಿದ್ದರು. ವೆಂಕಮ್ಮನವರು ಮೇಲುಸ್ತುವಾರಿಗೆ ನಿಂತರು.

ದಾಸರು, ನರಸಕ್ಕ, ಸುಬ್ಬಕೃಷ್ಣ, ಅವನ ಹೆಂಡತಿ ಸರೋಜನಿಗೆ ಊಟಕ್ಕೆ ಆಹ್ವಾನ ಹೋಗಿತ್ತು. ಸುಬ್ಬಕೃಷ್ಣ ಹೆಂಡತಿಯನ್ನೂ ಜೊತೆಗೆ ಕರೆದುಕೊಂಡು ಸರಿಯಾಗಿ ಹನ್ನೆರಡು ಘಂಟೆಗೆ ಅವತರಿಸಿದ. ಅಯ್ಯರರ ಪರಿವಾರ ಮೈಸೂರಿಗೆ ಬಂದ ದಿನ ಮುಖ ತೋರಿಸಿ ಹೋದವನು ಸುಬ್ಬಕೃಷ್ಣ ಮತ್ತೆ ಈ ಕಡೆಗೇ ತಲೆಹಾಕಿರಲಿಲ್ಲ. ಅವನನ್ನು ಕಂಡ ಕೂಡಲೆ ಮಧುಸೂದನ ಹುಸಿಕೋಪ ನಟಿಸುತ್ತ.

"ಎಲ್ಲಿ ಮಾಯವಾಗಿ ಹೋಗಿದ್ದೆಯಯ್ಯಾ? ಅವೊತ್ತಿನಿಂದಲೂ ಪತ್ತೆಯೇ ಇಲ್ಲ"

ಎಂದ. ಸುಬ್ಬಕೃಷ್ಣ ಗುರುಂಘಾತಕ ನಗೆ ನಗುತ್ತ,

"ನಾನು ಯಾಕಪ್ಪಾ ಸುಮ್ಮನೆ. ಶಿವಪೂಜೆಯಲ್ಲಿ ಕರಡಿ ಬಿಟ್ಟ ಹಾಗೆ"

ಎಂದ. ಅವನ ವ್ಯಂಗ್ಯ ಮಧುಸೂದನನಿಗೆ ಅರ್ಥವಾಗದಿರಲಿಲ್ಲ. ಗೆಳೆಯರಿಬ್ಬರೂ ನಗುತ್ತ ರೂಮು ಸೇರಿದರು. ದಾಸರು, ನರಸಕ್ಕ ಮಡಿಯಲ್ಲೇ ಬಂದಿದ್ದರು. ಮಡಿಯವರಿಗೆಲ್ಲಾ ಅಡುಗೆ ಮನೆಯಲ್ಲಿ ಎಲೆಹಾಕಿತ್ತು. ಉಳಿ ದವರಿಗೆ ಹಜಾರದಲ್ಲಿ ಬಡಿಸುವ ವ್ಯವಸ್ಥೆಯಾಯಿತು. ಸರೋಜ, ಲಲಿತ ಅಗ್ರದ ಎಲೆಗಳಿಗೆ ರಂಗೋಲಿ ಹಾಕುವುದಕ್ಕೆ ನಿಂತರು. ಎಲ್ಲರಿಗೂ ಮಣೆಹಾಕಿ ಪಕ್ಕದಲ್ಲಿ ಒಂದು ಬೆಳ್ಳಿಯ ತಂಬಿಗೆಯ ತುಂಬ ಕೇಸರಿ ಹಾಕಿದ ನೀರು, ಒಂದು

ಬೆಳ್ಳಿ ಲೋಟ ಇಟ್ಟಿದ್ದರು. ಮಧ್ಯೆ ಒಂದು ಟೀಪಾಯ್ ಮೇಲೆ ಇಟ್ಟಿದ್ದ ಪರಿಮಳಧಾನಿಯಿಂದ ಮೈಸೂರಿನ ಜವಾಜಿ ಬತ್ತಿ ಸುವಾಸನೆ ಬೀರುತ್ತಿತ್ತು.

ಮಧುಸೂದನನ ವಿತರಣೆ ನೋಡಿ ಅಯ್ಯರರು ತುಂಬ ಸಂತೋಷ ಪಟ್ಟುಕೊಂಡರು. ಊಟ ದಿವ್ಯವಾಗಿತ್ತು. ಜಿಲೇಬಿ, ಹಾಲುಖೀರು, ಕೇಸರೀ ಭಾತು, ವಾಂಗೀಭಾತು, ಬೋಂಡಗಳು ರುಚಿಯಲ್ಲಿ ಒಂದರೊಡನೊಂದು ಪೈಪೋಟಿ ನಡೆಸುವಂತಿದ್ದವು. ಊಟಕ್ಕೆ ಕುಳಿತಿದ್ದವರಿಗೆ ಯಾವುದನ್ನು ತಿನ್ನುವುದು, ಯಾವುದನ್ನು ಬಿಡುವುದು ಎಂದು ಕಕಮಕ ಹಿಡಿಯಿತು. ಎಲ್ಲರಿಗೂ ಉಪಚಾರ ಹೇಳುತ್ತಿದ್ದ ಮಧುಸೂದನ ಅಡುಗೆಮನೆಯಲ್ಲಿ ಊಟಕ್ಕೆ ಕುಳಿತಿದ್ದ ದಾಸರಿಗೆ ಕೂತ ಕಡೆಯಿಂದಲೇ ಕೇಳುವ ಹಾಗೆ ಗಟ್ಟಿಯಾಗಿ,

"ದಾಸರೇ, ಸಾವಕಾಶವಾಗಿ ಆಗಲಿ ಭೋಜನ"

ಎಂದ. ಲಲಿತ, ಸರೋಜ ಒಬ್ಬರ ಮುಖ ಒಬ್ಬರು ನೋಡಿಕೊಂಡು ಮುಸಿಮುಸಿ ನಕ್ಕರು. ದಾಸರಿಗೆ ಮೊದಲಿನ ಹಾಗೆ ಊಟಮಾಡುವ ಶಕ್ತಿ ಯಿಲ್ಲದಿದ್ದರೂ ಎಂಟು ಹತ್ತು ಜಿಲೇಬಿ, ಎರಡು ಒಬ್ಬೆ ಬೋಂಡಗಳಿಗೆ ಮೋಸ ವಿಲ್ಲದ ಹಾಗೆ ನಿರ್ವಂಚನೆಯಿಂದ ತೆಗೆದುಕೊಂಡಿದ್ದರು. ಊಟವಾದ ಮೇಲೆ ತಾಂಬೂಲ ಹಾಕಿಕೊಳ್ಳುವಾಗ ಅಯ್ಯರ್–ದಾಸರ ನಡುವೆ ಅರ್ಧಕಟ್ಟು ಬುತ್ತಿ ಚಿಗುರು ಛಟ್ಟಿದ್ದು ಹೋಯಿತು.

ಪ್ರಯಾಣಕ್ಕೆ ವೇಳೆ ಮೀರುತ್ತಿತ್ತು. ಎರಡು ಘಂಟೆಗೆ ಮೈಸೂರು ಬಿಟ್ಟರೆ ರಾತ್ರಿ ಒಂಬತ್ತು ಹತ್ತರ ಹೊತ್ತಿಗಾದರೂ ಮದರಾಸ್ ತಲಪಬಹು ದೆಂದು ಅಯ್ಯರರು ಎಣಿಸಿದ್ದರು. ಇನ್ನು ಹೊರಡುವುದೇ ಸಾವಕಾಶವಾಗಿ ಬಿಟ್ಟರೆ ಮಧ್ಯೆ ಏತಕ್ಕಾದರೂ ವಿಳಂಬವಾಗಿ ರಾತ್ರಿ ಅವೇಳೆಯಲ್ಲಿ ಊರು ಸೇರ ಬೇಕಾಗುವ ಪ್ರಸಂಗ ಬಂದೀತೆಂದು ಅವರು ಚಡಪಡಿಸಿದರು. ಹೆಂಗಸರು ಮಕ್ಕಳೊಡನೆ ರಾತ್ರಿಯ ಹೊತ್ತು ಕಾರಿನಲ್ಲಿ ದೂರ ಪ್ರಯಾಣ ಮಾಡುವುದು ಅವರ ಮನಸ್ಸಿಗೆ ಅಷ್ಟು ಸಮ್ಮತವಾಗಿರಲಿಲ್ಲ. ಆದರೆ ಊಟವಿಲ್ಲದೆ ಹೋಗ ಕೂಡದೆಂದು ಮಧುಸೂದನ ಕಡ್ಡಾಯವಾಗಿ ಮೊದಲೇ ತಿಳಿಸಿಬಿಟ್ಟದ್ದರಿಂದ ವಿಧಿಯಿಲ್ಲದೆ ಅದಕ್ಕಾಗಿ ಕಾಯಲೇಬೇಕಾಯಿತು.

ಊಟವಾಗಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡ ಬಳಿಕ ಎಲ್ಲರಿಗೂ ಟೀ ಬಂದಿತು.

ಮಧುಸೂದನ ಬೆಳ್ಳಿಯ ತಟ್ಟೆಯಲ್ಲಿ ಫಲತಾಂಬೂಲಗಳನ್ನೂ ಜರತಾರಿಯ ಶಲ್ಯವನ್ನೂ ತಂದು ಅಯ್ಯರರಿಗೆ ಕೊಟ್ಟ. ವೆಂಕಮ್ಮನವರು ಸರಸಕ್ಕನ ಕೈಯಲ್ಲಿ ಮೀನಾಕ್ಷಮ್ಮನವರಿಗೆ ಅರಿಸಿನ ಕುಂಕುಮ ಹೂವು ಫಲ ತಾಂಬೂಲ ಗಳೊಡನೆ ಒಂದು ಖಣ ಕೊಡಿಸಿದರು. ಸರೋಜ ಲಲಿತನ ಹಣೆಗೆ ಕುಂಕುಮ ವಿಟ್ಟು, ಘಮಘಮಿಸುತ್ತಿದ್ದ ಮೈಸೂರು ಮಲ್ಲಿಗೆಯ ದಂಡೆಯೊಂದನ್ನು ತಲೆಗೆ ಮುಡಿಸಿ, ಫಲತಾಂಬೂಲಗಳೊಡನೆ ಚೌಲಿಗೆ ಸೊಗಸಾದ ರೇಷ್ಮೆ ಬಟ್ಟೆ ಕೊಟ್ಟಳು.

ಈ ಉಪಚಾರ ನೋಡಿ ಅಯ್ಯರರು ಬೆರಗಾಗಿ ಕುಳಿತುಬಿಟ್ಟರು.

ಕಾರು ಬಾಗಿಲಿನ ಮುಂದೆ ಬಂದು ಸಿದ್ಧವಾಗಿ ನಿಂತಿತ್ತು.

ಒಬ್ಬರನ್ನೊಬ್ಬರು ಬೀಳ್ಕೊಡುವ ಉಪಚಾರೋಕ್ತಿಗಳಾದವು. ವಿಶ್ವಾಸ ವಿರಲೆಂದು ಹೇಳುತ್ತ ಮಧುಸೂದನ ಅಯ್ಯರರಿಗೆ ಎರಡು ಕೈಗಳನ್ನೂ ಜೋಡಿಸಿದ. ಅವರು ಮುಗಿದ ಆ ಕೈಗಳನ್ನು ಹಾಗೆಯೇ ಹಿಡಿದುಕೊಂಡು ಅಭಿಮಾನದಿಂದ ಅವನ ಹೆಗಲ ಮೇಲೆ ಕೈಹಾಕಿದರು

" ನಿಮ್ಮ ಎಣೆಯಿಲ್ಲದ ವಿಶ್ವಾಸಕ್ಕೆ ನಮ್ಮನ್ನು ಋಣಿಗಳನ್ನಾಗಿಸಿಬಿಟ್ಟರಿ, ಮಿ॥ ಮಧುಸೂದನ್. ಇಷ್ಟು ಚಿಕ್ಕ ವಯಸ್ಸಿಗೆ ಇಂಥ ಅಪಾರವಾದ ಸಂಗೀತ ಪಾಂಡಿತ್ಯದ ಜೊತೆಗೆ ಪಕ್ವವಾದ ಈ ಶಿಷ್ಟಾಚಾರ ಸಂಸ್ಕೃತಿಗಳೂ ನಿಮ್ಮಲ್ಲಿ ನೆಲಸಿವೆಯೆಂದು ನಾನು ತಿಳಿದಿರಲಿಲ್ಲ. ಈ ವಿನಯ ಸೌಜನ್ಯಗಳಿಗೆ ಪ್ರತಿಯಾಗಿ ನಿಮಗೆ ನನ್ನ ವಾತ್ಸಲ್ಯವೊಂದನ್ನಲ್ಲದೆ ಇನ್ನೇನನ್ನು ತಾನೇ ಕೊಡಬಲ್ಲೆ?"

ಎಂದರು. ಮಾತು ಮುಗಿಯುವ ವೇಳೆಗೆ ಅವರ ಕಂಠ ಗದ್ಗದವಾಗಿತ್ತು. ಮಧುಸೂದನ ಗೌರವಭಾವದಿಂದ ತಲೆಬಾಗಿಸಿದ

ಹಜಾರಕ್ಕೆ ಬಂದು ನಿಂತಿದ್ದ ವೆಂಕಮ್ಮನವರಿಗೆ ಮೀನಾಕ್ಷಮ್ಮನವರ ಉಪಚಾರ ಹೇಳುತ್ತಿದ್ದರು.

" ನೀವೂ ಒಂದು ಸಲ ಮದರಾಸಿಗೆ ಬನ್ನೀ."

" ಬರುತ್ತೇನಮ್ಮ. ಅಗತ್ಯವಾಗಿ ಬರುತ್ತೇನೆ."

" ಬಾಯಿಮಾತಿಗೆ ಹೇಳಬೇಡಿ. ಖಂಡಿತವಾಗಿ ಬರಬೇಕು."

" ಬರುತ್ತೇನೆ ತಾಯಿ, ನನ್ನನ್ನು ಇಷ್ಟು ವಿಶ್ವಾಸದಿಂದ ಕರೆಯುವವರು ತಾನೆ ಯಾರು ?"

ಎಂದು ವೆಂಕಮ್ಮನವರು ನುಡಿದರು. ಅವರಿಗೆ ನಮಸ್ಕಾರ ಮಾಡುವಂತೆ ಮೀನಾಕ್ಷಮ್ಮನವರು ಮಗಳಿಗೆ ಸಂಜ್ಞೆಮಾಡಿದರು. ಲಲಿತ ಸಂಕೋಚಪಟ್ಟು ಕೊಂಡೇ ಬಂದು ಬಗ್ಗಿ ಅವರ ಕಾಲು ಮುಟ್ಟಿ ನಮಸ್ಕರಿಸಿದಳು.

" ನೂರುಕಾಲ ಸೌಭಾಗ್ಯವತಿಯಾಗಿ ಬಾಳು ತಾಯಿ "

ಎಂದು ವೆಂಕಮ್ಮನವರು ತಲೆಯ ಮೇಲೆ ಕೈಯಿಟ್ಟು ಹರಸಿದರು.

ಇನ್ನು ಮಧುಸೂದನನ ಮುಖ ನೋಡಿ ಅವನಿಗೆ ವಂದನೆ ಸಲ್ಲಿಸಬೇಕಾದ ಬಹಿರಾಚಾರದ ಸಂಕಟವೊಂದು ಲಲಿತನ ಪಾಲಿಗೆ ಉಳಿದಿತ್ತು. ಆ ಕಾರ್ಯ ವನ್ನೆಸಗಲಾರದ ಅವಳ ಮನಸ್ಸು ಓಡಿಹೋಗಿ ಕಾರಿನಲ್ಲಿ ಕುಳಿತುಕೊಂಡು ಬಿಡಲೇ ಎಂದು ತಳಮಳಿಸುತ್ತಿತ್ತು. ವಿಧಿಯಿಲ್ಲದೆ ಅವನ ಕಡೆ ಒಮ್ಮೆ ನೋಡಿ,

" ಹೋಗಿಬಿಟ್ಟು ಬರುತ್ತೇನೆ. ನಮಸ್ತೇ "

ಎಂದಳು.

" ಒಳ್ಳೆಯದು ಹೋಗಿ ಬನ್ನಿ. ನಮಸ್ಕಾರ "

ಎಂದು ಅವನೂ ಪ್ರತಿಯಾಗಿ ವಂದಿಸಿದ. ಇಬ್ಬರ ಮನಸ್ಸೂ ಕಮರಿಯ ತುದಿಗೆ ಬಂದು ನಿಂತ ಹಾಗಿತ್ತು. ಲಲಿತ ಮತ್ತೆ ಹಿಂದೆ ತಿರುಗಿ ನೋಡದೆ ಹೊರಟು ಹೋದಳು. ಕಾರು ಹತ್ತಿ ಹೊರಟ ಅತಿಥಿಗಳನ್ನು ಬೀಳ್ಕೊಟ್ಟು, ಅವರು ಹೋದ ದಿಕ್ಕನ್ನೇ ನೋಡುತ್ತ ಮನೆಯ ಮುಂದೆ ಅನ್ಯಮನಸ್ಕನಾಗಿ ನಿಂತಿದ್ದ ಮಗನನ್ನು ನೋಡಿ ವೆಂಕಮ್ಮನವರ ಮನಸ್ಸು ಆಂದೋಲನಕ್ಕೀಡಾ ಯಿತು, ಅಂತರಂಗದಲ್ಲಿ ವಿವಿಧ ಭಾವನೆಗಳು ತರಂಗ ತರಂಗವಾಗಿ ಎದ್ದವು.

ಅವರು ಗತಾವಲೋಕನದಲ್ಲಿ ಮುಳುಗಿದರು.

ಈ ಐದಾರು ದಿವಸಗಳ ಓಡಾಟದಲ್ಲಿ, ಲಲಿತನಿಗೂ ಮಧುಸೂದನನಿಗೂ ನಡುವೆ ಆಂತರಿಕವಾದ ಏನೋ ಒಂದು ನಡೆಯುತ್ತಿದೆಯೆಂಬುದನ್ನು ಊಹಿಸು ವುದು ವೆಂಕಮ್ಮನವರಿಗೆ ಕಷ್ಟವಾಗಿರಲಿಲ್ಲ. ಅವನು ಅವಳನ್ನು ನೋಡುತ್ತಿದ್ದ ರೀತಿ, ಅವಳು ಅವನ ಮಾತನ್ನು ಚಿತ್ತವಿಟ್ಟು ಕೇಳುತ್ತಿದ್ದ ಬಗೆ, ಅವನಲ್ಲಿ ತೋರಿಸುತ್ತಿದ್ದ ಸಲುಗೆ. ಇಬ್ಬರ ನಡುವೆಯೂ ಹಾಯುತ್ತಿದ್ದ ಅರ್ಥಕಲ್ಪಿತ ನೋಟ, ಯಾವ ನೆವದಿಂದಲಾದರೂ ಒಬ್ಬರೊಡನೊಬ್ಬರು ಇರಲು ಅವರು

ಪಡುತ್ತಿದ್ದ ತವಕ – ಇದಕ್ಕೆಲ್ಲಾ ವೆಂಕಮ್ಮನವರ ದೃಷ್ಟಿಯಲ್ಲಿ ಅರ್ಥವಿಲ್ಲದೆ ಇರಲಿಲ್ಲ.

ಮಧುಸೂದನ – ಲಲಿತ ಒಬ್ಬರನ್ನೊಬ್ಬರು ಪ್ರೀತಿಸುತ್ತಿರಬಹುದೆ? ಯಾವ ಹೆಣ್ಣು ಬಂದರೂ ಬೇಡವೆಂದು ಮದುವೆಯ ಪ್ರಸ್ತಾಪವನ್ನು ಅವನು ಸುಮ್ಮನೆ ಮುಂದೆ ತಳ್ಳುತ್ತಿರುವುದಕ್ಕೆ ಈ ಆಂತರ್ಯವೇ ಕಾರಣವಿರಬಹುದೆ?– ಎಂದು ಅವರು ಯೋಚಿಸಿದರು. ಸೂಕ್ಷ್ಮವಾಗಿ ನೋಡಿದಲ್ಲದೆ ತಿಳಿಯದಿದ್ದ ವಿಷಯಗಳನ್ನು ವೆಂಕಮ್ಮನವರ ಸ್ತ್ರೀಸಹಜವಾದ ಬುದ್ಧಿ ಸ್ವಲ್ಪದರಲ್ಲಿ ಗ್ರಹಿಸಿತ್ತು.

ಲಲಿತನ ಬಗೆಗೆ ಅವರಿಗೆ ಒಳ್ಳೆಯ ಭಾವನೆಯೇ ಇತ್ತು. ಹುಡುಗಿ ಸುಂದರಿ, ಜಾಣೆ, ನಯಶೀಲೆ. ಆದರೆ ಹೆಂಗಸರಿಗೆ ಮೀರಿದ ಒಂದು ಸ್ವಾತಂತ್ರ್ಯ ಅವಳಲ್ಲಿ ಅವರಿಗೆ ಕಂಡುಬರುತ್ತಿತ್ತು. ವಿದ್ಯಾವತಿಯರಾದ ಹೆಚ್ಚು ಮಂದಿ ಹುಡುಗಿಯರನ್ನು ನೋಡಿ ಬಲ್ಲವರಾಗಿದ್ದ ಅವರಿಗೆ ಈಗಿನ ಯುವತಿಯರಿಗೆಲ್ಲಾ ಈ ನಡವಳಿಕೆ ಸ್ವಾಭಾವಿಕವೇನೋ ಎನ್ನಿಸಿತು. ಇದೊಂದನ್ನು ಬಿಟ್ಟರೆ ಅವಳು ಚಿನ್ನದಂಥ ಹುಡುಗಿ. ಯಾರ ಮನೆಯ ಸೊಸೆಯಾಗಿ ಬೆಳಗಲೂ ಯೋಗ್ಯಳು ಎಂದು ತೋರಿತು. ಒಂದು ಗಳಿಗೆ ವೆಂಕಮ್ಮನವರ ಮನಸ್ಸು ಲಲಿತ ತಮ್ಮ ಮನೆಯ ಸೊಸೆಯಾಗಿ ಬರುವ ಸಂಭವವನ್ನು ಕಲ್ಪಿಸಿಕೊಂಡು ಪ್ರಮಿತ ವಾಯಿತು.

ಸಂಪ್ರದಾಯದ ಜಾಡಿನಲ್ಲಿ ಬೆಳೆದು ಬಂದಿದ್ದ ಅವರ ವ್ಯಕ್ತಿತ್ವಕ್ಕೆ ಇಂಥ ಒಂದು ಸಂಬಂಧ ಅರ್ಥವಾಗದ ವಿಷಯವಾಗಿತ್ತು. ವಂಶದಲ್ಲಿ ಹಿಂದೆಂದೂ ಕಂಡು ಕೇಳರಿಯದಿದ್ದ ಪ್ರಸಂಗವನ್ನು ಹದಮಾಡಿಕೊಳ್ಳುವುದು ಹೇಗೆ ಎಂದು ಅವರ ಮನಸ್ಸು ಕಿರಿಕಿರಿಪಟ್ಟಿತು. ಆದರೆ ಒಂದು ವೇಳೆ, ಮಧು ಲಲಿತನನ್ನೇ ಪ್ರೀತಿಸುತ್ತಿದ್ದು ಅವಳನ್ನೇ ಮದುವೆಯಾಗಬೇಕೆಂದು ಹಟ ಹಿಡಿದರೆ ತಾವೇನು ಮಾಡುವುದೆಂದು ಚಿಂತಿಸಿದರು. ಅವರಿಗೆ ಅವನೇ ಸರ್ವಸ್ವವಾಗಿದ್ದ. ಅವರ ಬಾಳು ಅವನ ಜೀವಿತವನ್ನೇ ಹಬ್ಬಿ ಮಮತಗೂಡಿ ಬೆಳೆದಿತ್ತು. ಮಗನ ಸುಖಕ್ಕೆ ಅಡ್ಡಿಯಾಗುವ ಯಾವ ಯೋಚನೆಯೂ ಅವರಿಗೆ ಹಿತವಾಗಿರಲಿಲ್ಲ. ಆದರೆ ವಾಸ್ತವವಾಗಿ ಅವನ ಮನೋಗತವೇನೆಂಬುದನ್ನೇ ಅವನು ಬಾಯಿಬಿಟ್ಟು ಹೇಳಿರಲಿಲ್ಲ.

ಸತ್ಯಸಂಗತಿ ತಿಳಿಯದೆ, ತಮಗೆ ತೋರಿಬಂದ ಅನುಮಾನದ ಆಧಾರದ ಮೇಲೆ ಕಲ್ಪನೆಯ ಕಟ್ಟಡ ಕಟ್ಟುತ್ತಿದ್ದ ವೆಂಕಮ್ಮನವರ ಮನಸ್ಸು ಯಾವ ನೆಲೆಯನ್ನೂ ಕಾಣಲಾರದೆ ಸಂದಿಗ್ಧಕ್ಕೆ ಸಿಕ್ಕಿತು.

ಏನನ್ನೋ ಅಳೆದಳೆದು ಸುರಿಯುತ್ತಿದ್ದ ಅವರ ಮನಸ್ಸು ಈ ಹೊಯ್ದಾಟದಲ್ಲಿ ಅಶಾಂತಿಯ ಹುತ್ತವಾಯಿತು. ಅದರಲ್ಲಿ ಶಾಂತಿಯ ನೆಲೆ ಕಾಣಲು ಅವರು ಅಸಮರ್ಥರಾದರು.

## ೨೯

ಮುಂಬಯಿಯ ಆಹ್ವಾನ ಅನಿರೀಕ್ಷಿತವಾಗಿತ್ತು.

ಮೈಸೂರು ಸಂಘ, ಕನ್ನಡ ಸಂಘ, ಮೊಗವೀರ ಸಂಘಗಳಿಂದ ಒಪ್ಪಿಗೆ ಕಾಗದ ಬಂದಿತ್ತು. ಮೂರು ಸಂಸ್ಥೆಗಳೂ ಮಧುಸೂದನನನ್ನು ಕಚೇರಿಗಾಗಿ ಪ್ರಾರ್ಥಿಸಿ ತಮಗನುಕೂಲವಾದ ಒಂದು ತಾರೀಕನ್ನು ಸೂಚಿಸಿದ್ದವು. ಒಪ್ಪಿಗೆ ಯಾದರೆ ಬೇಗನೆ ಮಾರೋಲೆ ಬರೆಯಬೇಕೆಂದೂ ದೊಡ್ಡ ಪ್ರಮಾಣದಲ್ಲಿ ಕಚೇರಿ ಏರ್ಪಡಿಸಬೇಕೆಂಬ ಅಭಿಲಾಷೆ ಇದೆಯೆಂದೂ ತಿಳಿಸಿದ್ದವು.

ಮಧುಸೂದನ ಕಾಗದವನ್ನು ಮುಂದಿಟ್ಟುಕೊಂಡು ಯೋಚಿಸುತ್ತ ಕುಳಿತ.

ಮುಂಬಯಿಯಿಂದ ಅವನಿಗೆ ಕರೆಬರುತ್ತಿರುವುದು ಇದೇ ಮೊದಲು. ಈ ಆಹ್ವಾನ ಎರಡು ದೃಷ್ಟಿಗಳಿಂದ ಮಹತ್ವದ್ದಾಗಿತ್ತು. ಮೊದಲನೆಯದಾಗಿ ಅದು ಹಿಂದೂಸ್ತಾನೀ ಸಂಗೀತದ ಕೇಂದ್ರ. ಅಲ್ಲಿನ ಜನ ಕರ್ಣಾಟಕದ ಒಬ್ಬ ಸಂಗೀತ ಗಾರನನ್ನು ಕರೆಸಿಕೊಂಡು ಭಾರಿ ಪ್ರಮಾಣದಲ್ಲಿ ಕಚೇರಿ ಮಾಡಿಸುವುದೇ ಒಂದು ವಿಶೇಷ. ಎರಡನೆಯದಾಗಿ, ಈ ಮುಂಚೆ ಅವನಿಗೆ ಉತ್ತರ ಭಾರತದ ಪ್ರವಾಸದ ಅವಕಾಶ ಸಿಕ್ಕಿರಲಿಲ್ಲ. ಆಹ್ವಾನ ಒಪ್ಪಿಕೊಂಡರೆ ಕಚೇರಿಯ ಕೀರ್ತಿಯೊಡನೆ ಮುಂಬಯಿಯ ಅನೇಕ ಕಲಾವಿದರ ಪರಿಚಯ ಲಾಭವೂ ಆಗುವಂತಿತ್ತು. ಈ ಅವಕಾಶವನ್ನು ಉಪಯೋಗಿಸಿಕೊಂಡು ಹೋಗಿ

ಬರುವುದೇ, ಇಲ್ಲ ಕಾರ್ಯಕ್ರಮವನ್ನು ಮುಂದೆ ಹಾಕಿರೆಂದು ತಿಳಿಸಿ ಉತ್ತರ ಬರೆಯುವುದೇ ಎಂದು ಅವನು ಯೋಚಿಸಿದ.

ಮೈಸೂರನ್ನು ಬಿಟ್ಟು ಹೋಗದಿರಲೂ ಸಾಕಷ್ಟು ಕಾರಣಗಳಿದ್ದವು. ವೆಂಕಮ್ಮನವರಿಗೆ ಈ ನಡುವೆ ದೇಹಸ್ಥಿತಿ ಪದೇ ಪದೇ ಬಿಗಡಾಯಿಸುತ್ತಿತ್ತು. ಊರು ಬಿಟ್ಟು ಹೋದರೆ ತಾಯಿಯ ಆರೋಗ್ಯದ ಚಿಂತೆಯೊಂದೇ ಮನಸ್ಸನ್ನು ಕೊರೆಯುತ್ತಿರುವುದೆಂದೂ ಹಿಂತಿರುಗಿ ಬರುವವರೆಗೂ ಸಮಾಧಾನವಿರುವುದಿಲ್ಲ ವೆಂದೂ ಅವನು ಭಾವಿಸಿದ. ಗೃಹಕೃತ್ಯದಲ್ಲಾಗಲಿ ಸಂಗೀತ ಜೀವನದಲ್ಲಾಗಲಿ ಸ್ವಲ್ಪ ಏರುಪೇರಾದರೂ ಸಹಿಸದಿದ್ದ ಅವನ ಪ್ರಕೃತಿ ಈ ಸಂದರ್ಭದಲ್ಲಿ ಸಹಜ ವಾಗಿ ಇತ್ತಲೂ ಅತ್ತಲೂ ತುಯ್ಯತೊಡಗಿತು. ಸುಬ್ಬಕೃಷ್ಣನನ್ನು ಒಂದು ಮಾತು ಕೇಳಿ ನೋಡುವುದೆಂದು ಭಾವಿಸಿ ಅವನಿಗೆ ಹೇಳಿಕಳಿಸಿದ.

ಸುಬ್ಬಕೃಷ್ಣ ಕಾಗದವನ್ನು ನಿಧಾನವಾಗಿ ಓದಿ ನೋಡಿ ಅದನ್ನು ಮಡಿಸುತ್ತ ನಗುಮೊಗದಿಂದ,

"ವಿದ್ವಾಂಸರ ಪ್ರಭಾವ ಉತ್ತರಕ್ಕೂ ವ್ಯಾಪಿಸುತ್ತಿದೆ"

ಎಂದ.

"ಅದಿರಲಿ, ಈಗೇನು ಮಾಡಲಿ ಹೇಳು."

"ಮಾಡುವುದೇನು? ಹೊರಟುಬಿಟ್ಟರಾಯಿತು."

"ಅದೇ ಈಗ ನನ್ನ ಸಮಸ್ಯೆ. ಮನೆಯಲ್ಲಿ ಅಮ್ಮನ ದೇಹಸ್ಥಿತಿ ಒಂದು ದಿನ ಇದ್ದಹಾಗೆ ಇನ್ನೊಂದು ದಿನ ಇರುವುದಿಲ್ಲ."

"ನೀನು ಇಲ್ಲೇ ಕುಳಿತಿದ್ದರೆ ಅದು ಇದ್ದ ಹಾಗೆಯೇ ಇರುವುದೇನು?"

"ಇಲ್ಲ, ನನ್ನ ಮನಸ್ಸಿಗೆ ಸಮಾಧಾನವಾದರೂ ಇರತ್ತೆ."

"ಮನೆಯಲ್ಲಿ ಕೆಲಸದ ಹೆಂಗಸಿಲ್ಲವೆ?"

"ಇದಾಳೆ"

"ಮತ್ತೇಕೆ ಚಿಂತೆ?"

"ಅವಳು ಹೆಣ್ಣು ಹೆಂಗಸು. ಏನಾದರೂ ವ್ಯತ್ಯಾಸವಾದರೆ ಏನು ಮಾಡ ಬಲ್ಲಳು?"

"ನಾವೆಲ್ಲಾ ಹಾಳಾಗಿ ಹೋಗಿದ್ದೇವೇನು? ನನಗೆ ನಮ್ಮ ತಾಯಿ

ಬೇರೆ, ನಿಮ್ಮ ತಾಯಿ ಬೇರೆಯೇ? ಅವರ ಯೋಗಕ್ಷೇಮ ನೋಡಿಕೊಳ್ಳುವಷ್ಟು ಯೋಗ್ಯತೆ ನನಗಿಲ್ಲವೆಂದು ತಿಳಿದೆಯಾ?"

"ಕೋಪಿಸಿಕೊಳ್ಳಬೇಡ, ಮಹರಾಯ. ನಿನ್ನ ಧೈರ್ಯದಿಂದಲೇ ನಾನು ಹೋಗಿಬರುವುದು. ನೀನಿದ್ದರೆ ನಾನಿದ್ದ ಹಾಗೇ."

"ಸರಿ ಮತ್ತೆ. ಇದಕ್ಕೆ ಯೋಚನೆಯೇಕೆ? ಸುಮ್ಮನೆ ನಿನ್ನ ಮೇಷ ಎಣಿಸದೆ ಹೋಗಿಬಿಟ್ಟು ಬಾ."

"ಹಾಗಾದರೆ ಬರುತ್ತೇನೆಂದು ಅವರಿಗೆ ಕಾಗದ ಹಾಕಿಬಿಡಲಿ?"

"ಕಣಿಕೇಳಿ ನೋಡು. ಸುಮ್ಮನೆ ಹೋಗಿಬಿಟ್ಟು ಬಾರಯ್ಯಾ ಎಂದರೆ...."

ಎಂದು ಸುಬ್ಬಕೃಷ್ಣ ರೇಗಿದ. ಮಧುಸೂದನನ ಮನಸ್ಸಿಗೆ ಸಮಾಧಾನವಾಯಿತು. ಅನೇಕ ವಿಷಯಗಳಲ್ಲಿ ಹಸುಳೆಯಂತೆ ವರ್ತಿಸುತ್ತಿದ್ದ ಅವನನ್ನು ನೋಡಿ ಸುಬ್ಬಕೃಷ್ಣನಿಗೆ ಒಮ್ಮೊಮ್ಮೆ ನಗು ಬರುತ್ತಿತ್ತು.

ಮಧುಸೂದನ [illegible] ಮೇಲೂ ಹಾಕಿ ಮರುದಿನವೇ ಮುಂಬಯಿಗೆ ಉತ್ತರ ಬರೆದು ಹಾಕಿದ

ಮುಂಬಯಿಯ ಪ್ರಯಾಣಕ್ಕೆ ಇನ್ನೂ ಒಂದು ವಾರ ಅವಕಾಶವಿತ್ತು. ಆ ಅವಧಿಯಲ್ಲಿ ಸುಬ್ಬಕೃಷ್ಣ ದಿನವೂ ಭೇಟಿಯಾಗುತ್ತಿದ್ದ. ಇಬ್ಬರೂ ಮುಂಬಯಿಯ ಪ್ರವಾಸದ ವಿಚಾರ ಪ್ರಸ್ತಾಪಿಸುತ್ತಿದ್ದರು. ಒಂದು ಸಂಜೆ ಗೆಳೆಯರಿಬ್ಬರೂ ಒಂಟಿಕೊಪ್ಪಲಿನಾಚೆ ಸುತ್ತಾಡಿಕೊಂಡು ಬರಲು ಹೋಗಿದ್ದರು. ಸುಬ್ಬಕೃಷ್ಣನನ್ನೊಂದು ಸಮಸ್ಯೆ ಕಾಡುತ್ತಿತ್ತು.

"ಮುಂಬಯಿಯ ಕಚೇರಿಯೆಂದರೆ ಹಿಂದೂಸ್ತಾನೀ ಸರಕು ಬಿಚ್ಚದಿದ್ದರಾಗುತ್ತೇನಪ್ಪ?"

"ಬಿಚ್ಚಿದರಾಯಿತು. ಅದಕ್ಕೇನು ಕಷ್ಟ?"

"ಈ ಸಂಗೀತ ಅಲ್ಲಿನವರಿಗೆ ಹಿಡಿಸುವುದಿಲ್ಲವಂತೆ."

"ಹಾಗೆಂದು ಯಾರು ಹೇಳಿದವರು?"

"ಏನೋಪ್ಪ, ಜನ ಅಂದುಕೊಳ್ಳುವುದು."

"ಅಂದುಕೊಳ್ಳುವ ಜನಕ್ಕೆ ಬುದ್ಧಿ ಇಲ್ಲ. ತಿಳಿಯದವರು ಏನೇನೋ ಮಾತಾಡುತ್ತಾರೆ."

"ಹಾಗಾದರೆ ಎರಡು ಕ್ರಮಗಳೂ ಬೇರೆ ಬೇರೆ ಅಲ್ಲವೆ?"

"ಭೇದವೆನ್ನುವುದು ವ್ಯವಹಾರದಲ್ಲಿ ಮಾತ್ರ. ಎರಡು ಪದ್ಧತಿಗಳಿಗೂ ಮೂಲ ಒಂದೇ. ಶ್ರುತಿಪ್ರಧಾನವಾದ ಉತ್ತರಾದಿ ಮಾರ್ಗ ಕೆಲವರಿಗೆ ಮೆಚ್ಚಿಕೆಯಾದರೆ ತಾಳಪ್ರಧಾನವಾದ ದಕ್ಷಿಣಾದಿ ಪದ್ಧತಿಯನ್ನು ಮತ್ತೆ ಕೆಲವರು ಮೆಚ್ಚುತ್ತಾರೆ. ಎರಡರಲ್ಲೂ ಗುಣವೂ ಉಂಟು, ದೋಷವೂ ಉಂಟು. ದಕ್ಷಿಣಾದಿವಿದ್ವಾಂಸರು ತಾಳಕ್ಕಾಗಿ ಮಾಡುವ ಕೋಲಾಹಲ ನೋಡಿ ಹಿಂದೂಸ್ತಾನಿಯವರು ಹಾಸ್ಯ ಮಾಡುವುದುಂಟು. ಉತ್ತರದ ಗವಾಯಿಗಳು ಅಕಾರದಲ್ಲಿ ಸ್ವರಗಳನ್ನು ಹಿಂಜಿ ಹಾಕುವುದನ್ನು ನೋಡಿ ನಮ್ಮವರು ನಗುತ್ತಾರೆ. ಯಾವುದರಲ್ಲೇ ಆಗಲಿ ಅತಿ ಸಹ್ಯವಲ್ಲ. ಎರಡಕ್ಕೂ ಸುವರ್ಣ ಮಧ್ಯಮ ಬೇಕು. ಹಾಗಿದ್ದರೇ ಸಂಗೀತ ರುಚಿಸುವುದು. ಶಾಸ್ತ್ರ, ಜನರಂಜನೆಗಳ ದೃಷ್ಟಿಯಿಂದ ಎರಡಕ್ಕೂ ಮಾನ್ಯತೆಯುಂಟು. ಸಂಗೀತಗಾರನಾದವನು ಕೇವಲ ಒಂದು ಪದ್ಧತಿಯಲ್ಲಿಯೇ ಪಡೆಯುವ ಪರಿಣತಿ ಪೂರ್ಣವಲ್ಲವೆಂದು ಗುರುಗಳಾಗಿದ್ದಾಗ ಹೇಳುತ್ತಿದ್ದರು. ಗಾನ ಪ್ರಪಂಚದಲ್ಲಿ ಕೆಲಸ ಮಾಡುವವರಿಗೆ ಈ ಎರಡು ಮುಖಗಳ ಅರಿವೂ ಅಗತ್ಯ."

ಸುಬ್ಬಕೃಷ್ಣನಿಗಿದ್ದ ಅಲ್ಪ ಸಂದೇಹ ಪರಿಹಾರವಾಯಿತು. ಮಧುಸೂದನ ಮುಂಬಯಿಯಲ್ಲಿ ಜಯಭೇರಿ ಹೊಡೆದು ಬರುವುದರಲ್ಲಿ ಸಂದೇಹವಿಲ್ಲವೆಂದು ಅವನು ಭಾವಿಸಿದ.

ಪ್ರಯಾಣದ ದಿನ ಬಳಿಸಾರುತ್ತಿತ್ತು. ಮಧುಸೂದನ ಮನೆಯ ಚಿಂತೆ ಬಿಟ್ಟು ಹೊರಡಲು ಅಣಿಯಾಗತೊಡಗಿದ. ಒಂದುವಾರದಲ್ಲೇ ಹಿಂತಿರುಗಿ ಬರುವುದಾಗಿ ತಾಯಿಗೆ ಹೇಳಿ, ಯೋಗಕ್ಷೇಮದ ವಿಚಾರದಲ್ಲಿ ಅವರನ್ನು ಮತ್ತೊಮ್ಮೆ ಎಚ್ಚರಿಸಿ, ಮನೆಯ ಕಡೆ ವಿಚಾರಿಸಿಕೊಳ್ಳುತ್ತಿರುವಂತೆ ಇನ್ನೊಮ್ಮೆ ಸುಬ್ಬಕೃಷ್ಣನಿಗೆ ಹೇಳಿ ಅವನನ್ನು ರೇಗಿಸಿ, ಮುಂಬಯಿಯ ಪ್ರಯಾಣ ಕೈಗೊಂಡ.

ಮಧುಸೂದನ ಮುಂಬಯಿ ತಲಪಿ ವಿಕ್ಟೋರಿಯ ಟರ್ಮಿನಸಿನಲ್ಲಿಳಿದಾಗ ಮೂರು ಸಂಸ್ಥೆಗಳ ಪ್ರತಿನಿಧಿಗಳ ದೊಡ್ಡ ಗುಂಪೇ ಸ್ವಾಗತಿಸಲು ಸಿದ್ಧವಾಗಿ ಬಂದಿತ್ತು. ಮುಂಬಯಿಯಲ್ಲಿರುವ ಮೈಸೂರಿನ ಅಭಿಮಾನಿಗಳ ತಂಡ ಹೂ

ಮಾಲೆಗಳನ್ನರ್ಪಿಸಿ ಹಾರ್ದಿಕ ಸ್ವಾಗತ ನೀಡಿತು. ಕನ್ನಡ ಸಂಘದ ಅಧ್ವರ್ಯು ವಿದ್ವಾನ್ ರಾಮಶರ್ಮರು ಮಧುಸೂದನನನ್ನು ಎಲ್ಲರಿಗೂ ಪರಿಚಯ ಮಾಡಿಸಿ ಕೊಟ್ಟರು. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ ಶರ್ಮರು ಮಧುಸೂದನನನ್ನು ಕಾರಿನಲ್ಲಿ ಕುಳ್ಳಿರಿಸಿಕೊಂಡು ಅಂಧೇರಿಯಲ್ಲಿದ್ದ ಶ್ರೀಮಂತ ವಾಮನರಾವ್ ರತ್ನಗಿರಿಯವರ ಮನೆಗೆ ಕರೆದೊಯ್ದರು. ಅಲ್ಲೇ ಬಿಡಾರಕ್ಕೆ ಏರ್ಪಾಡಾಗಿತ್ತು.

ಮಧುಸೂದನ ವಾಮನರಾಯರ ಹೆಸರು ಕೇಳಿದ್ದನೇ ಹೊರತು ಅವರ ಪರಿಚಯ ಅವನಿಗಿರಲಿಲ್ಲ. ಕನ್ನಡದ ಬಂಟರಾಗಿ ಅವರು ಮುಂಬಯಿಯಲ್ಲಿ ನಿಂತು ಮರಾಟಿಗರೊಡನೆ ನಡೆಸುತ್ತಿದ್ದ ಹೋರಾಟದ ಸಮಾಚಾರವೂ ಸ್ವಲ್ಪ ಸ್ವಲ್ಪವಾಗಿ ಅವನ ಕಿವಿಗೆ ಬಿದ್ದಿತ್ತು. ಕನ್ನಡದ ವೈರಿಗಳಿಗೆ ವಾಮನರಾಯರು ಸಿಂಹಸ್ವಪ್ನವಾಗಿದ್ದರು. ಮುಂಬಯಿಯಲ್ಲಿ ಕನ್ನಡದ ನಂದಾದೀಪ ಹೊತ್ತಿಸಿ ಅದು ಆರದ ಹಾಗೆ ನೋಡಿಕೊಂಡು ಸದಾ ತೈಲವೆರೆಯುತ್ತಿದ್ದ ಕೀರ್ತಿ ರಾಯರಿಗೆ ಸಲ್ಲುತ್ತಿತ್ತು. ಕನ್ನಡದ ಯಾವುದೇ ಚಳವಳಿಯಲ್ಲಾಗಲಿ, ಉತ್ಸವ ಸಂಭ್ರಮಗಳಲ್ಲಾಗಲಿ ರಾಯರ ಪ್ರೇರಣೆ ಮಾರ್ಗದರ್ಶನಗಳಿಲ್ಲದೆ ಇರುತ್ತಿರಲಿಲ್ಲ. ಆಗರ್ಭ ಶ್ರೀಮಂತರಾಗಿದ್ದ ರಾಯರ ಭವ್ಯನಿವಾಸ ಮುಂಬಯಿಯಲ್ಲಿನ ಕನ್ನಡದ ಸೇವಕರಿಗೆ ಸದಾ ಬಾಗಿಲು ತೆರೆದ ದೇವಾಲಯದಂತಿತ್ತು.

ಮಧುಸೂದನನನ್ನು ಮುಂಬಯಿಗೆ ಕರೆಸುವ ಆಲೋಚನೆಗೆ ಪ್ರೇರಕ ರಾಗಿದ್ದ ರಾಯರು ಅವನನ್ನು ತಮ್ಮ ಮನೆಯಲ್ಲಿ ಅತಿಥಿಯಾಗಿ ನಿಲ್ಲಿಸಿಕೊಳ್ಳುವ ತೀರ್ಮಾನವನ್ನೂ ಮಾಡಿಬಿಟ್ಟಿದ್ದರು. ಹಿರಿಯರಾದ ಅವರ ಮಾತಿಗೆ ಶರ್ಮ ರಾಗಲಿ ಇನ್ನಾರೇ ಆಗಲಿ ಪ್ರತಿ ಹೇಳುವ ಹಾಗಿರಲಿಲ್ಲ.

ಕಾರು ಅಂಧೇರಿಗೆ ಬಂದು ಮೂರಂತಸ್ತಿನ ಭವ್ಯಪ್ರಾಸಾದವೊಂದರ ಕಾಂಪೌಂಡನ್ನು ಪ್ರವೇಶಿಸಿತು. ಶರ್ಮರೊಡಗೂಡಿ ಮಧುಸೂದನ ಕಾರಿ ನಿಂದಿಳಿಯುತ್ತಿದ್ದ ಹಾಗೆ ವಾಮನರಾಯರೇ ಕಾರಿನ ಬಳಿ ಬಂದು ತಮ್ಮ ಸಹಜ ಸೌಜನ್ಯದಿಂದ ಸ್ವಾಗತಿಸಿದರು. ಕಾರಿನಲ್ಲಿ ಉದ್ದಕ್ಕೂ ಅವರ ವಿಚಾರವನ್ನೇ ಕೇಳುತ್ತ ಬಂದಿದ್ದ ಮಧುಸೂದನನಿಗೆ ರಾಯರ ಆ ವಿನಯ ಅವರ ಯೋಗ್ಯತೆ ಸಂಸ್ಕೃತಿಗಳಿಗೆ ಭೂಷಣವಾಗಿ ಕಂಡಿತ್ತು. ಅವನೂ ವಿನಯದಿಂದ ಕೈಜೋಡಿಸಿದ.

"ನಮಸ್ಕಾರ, ಬರ್ರಿ ಬರ್ರಿ"

ಎಂದು ರಾಯರು ಹಸನ್ಮುಖದಿಂದ ನುಡಿದು ಮಧುಸೂದನನನ್ನು ಮನೆಯೊಳಗೆ ಕರೆದೊಯ್ದರು. ಆಳು ಸೂಟ್‌ಕೇಸ್ ಹೋಲ್ಡಾಲುಗಳನ್ನು ತೆಗೆದುಕೊಂಡ. ರಾಮಶರ್ಮರು ಅವರನ್ನು ಹಿಂಬಾಲಿಸಿದರು.

ಮನೆಯ ಮೂರನೆಯ ಅಂತಸ್ತಿನಲ್ಲಿ ಗಾಳಿ ಬೆಳಕು ಚೆನ್ನಾಗಿ ಬರುವ ಹಾಗಿದ್ದ ಒಂದು ರೂಮನ್ನು ಮಧುಸೂದನನ ಉಪಯೋಗಕ್ಕಾಗಿ ತೆರವು ಮಾಡಲಾಗಿತ್ತು. ಅದಕ್ಕೆ ಸೇರಿದ ಹಾಗೆಯೇ ಸ್ನಾನಗೃಹ, ಶೌಚಗೃಹ. ರೂಮು ಪ್ರತ್ಯೇಕವಾಗಿ ಸುಸಜ್ಜಿತವಾಗಿದ್ದುದನ್ನು ನೋಡಿ ಮಧುಸೂದನನಿಗೆ ಸಂತೋಷವಾಯಿತು. ವಾಮನರಾಯರ ಮುಂದಾಲೋಚನೆಯನ್ನು ಅವನು ಮನಸ್ಸಿನಲ್ಲೇ ಶ್ಲಾಘಿಸಿದ. ಪ್ರಯಾಣದಿಂದ ಬಳಲಿದ್ದ ಅವನಿಗೆ ಸ್ವಲ್ಪ ವಿಶ್ರಾಂತಿ ಪಡೆಯಲು ಹೇಳಿ ಉಪಾಹಾರದ ವ್ಯವಸ್ಥೆ ಮಾಡಲು ರಾಯರು ಹೊರಟು ಹೋದರು. ಮುಂದಿನ ಕಾರ್ಯಕ್ರಮಗಳ ಅವಸರದಲ್ಲಿದ್ದ ರಾಮಶರ್ಮರೂ ಸಂಜೆ ಬರುವುದಾಗಿ ಹೇಳಿ ಬೀಳ್ಕೊಂಡರು. ಮಧುಸೂದನ ಹಾಸಿಗೆ ಹೊದಿಕೆಗಳಿಂದ ಶುಭ್ರವಾಗಿ ಸಜ್ಜಾಗಿ ಆಯಾಸ ಪರಿಹಾರಕ್ಕೆ ಆಹ್ವಾನ ನೀಡುತ್ತಿದ್ದ ಮಂಚದ ಮೇಲೆ ಹಾಗೆಯೇ ಉರುಳಿಕೊಂಡ.

ಭಾನುವಾರ ಸಂಜೆ ಆರುಘಂಟೆಗೆ ಕವಾಸ್ಜಿ ಜಹಾಂಗೀರ್ ಹಾಲ್‌ನಲ್ಲಿ ಕಚೇರಿ ನಡೆಯುವುದೆಂದು ಗೊತ್ತಾಗಿತ್ತು.

ಕಚೇರಿಯನ್ನು ಯಶಸ್ವಿಯನ್ನಾಗಿಸಬೇಕೆಂದು ಸಂಕಲ್ಪಿಸಿದ್ದ ಮೂರು ಸಂಘಗಳೂ ಪ್ರಚಾರ ಕಾರ್ಯವನ್ನು ಬಿರುಸಾಗಿ ಕೈಗೊಂಡಿದ್ದವು. 'ಟೈಮ್ಸ್' 'ಕ್ಲಾಸಿಕಲ್' ಮುಂತಾದ ಇಂಗ್ಲಿಷ್ ಪತ್ರಿಕೆಗಳಲ್ಲಿಯೂ 'ನವಕಾಲ್' 'ಲೋಕಸತ್ತ' ಮುಂತಾದ ಮರಾಠಿ ಪತ್ರಿಕೆಗಳಲ್ಲಿಯೂ ಮಧುಸೂದನನ ಭಾವಚಿತ್ರ ಸಹಿತವಾದ ಜಾಹೀರಾತುಗಳು ಹದಿನೈದು ದಿನ ಮುಂಚಿನಿಂದಲೂ ಪ್ರಕಟವಾಗುತ್ತಿದ್ದವು. ಖ್ಯಾತನಾಮರಾದ ಹಿಂದೂಸ್ತಾನೀ ಗಾಯಕರ ಕಚೇರಿಗಳಿಗೆ ದೊರೆಯುತ್ತಿದ್ದ ಪೂರ್ವಪ್ರಟನೆಗಿಂತ ನೂರುಪಾಲು ಮಿಗಿಲಾಗಿ ಮೈಸೂರಿನ ಗಾಯಕನೊಬ್ಬನ ಕಚೇರಿಗೆ ಲಭಿಸುತ್ತಿರುವ ಈ ಪ್ರಚಾರವನ್ನು ಮುಂಬಯಿಯ ರಸಿಕಜನ ವಿಸ್ಮಿತರಾಗಿ ಗಮನಿಸುತ್ತಿದ್ದರು. ಕನ್ನಡಿಗರನ್ನು ಕಂಡರೆ ಮೂಗು ಮುರಿಯುತ್ತಿದ್ದ ಹಲವು ಮರಾಠಿ ದಿಗ್ದಂತಿಗಳಿಗೆ ಈ 'ಕಾನಡೀ

ಅಪ್ಪ' ಬಂದರೆ ಹೇಗೆ ಹಾಡುವನೋ ಹೋಗಿ ನೋಡಬೇಕೆಂಬ ಕುತೂಹಲ ಹುಟ್ಟಿತ್ತು. ಪ್ರಸಿದ್ಧ ವಿದ್ವಾಂಸರಾದ ದ್ವಾರಂ ವೆಂಕಟಸ್ವಾಮಿ ನಾಯಡುರವರೂ ಗುಂಟೂರಿನ ಹರಿಹರನಾಥ ಶಾಸ್ತ್ರಿಗಳೂ ಪಕ್ಕವಾದ್ಯಗಳನ್ನು ನುಡಿಸಲು ಬರುತ್ತಾರೆಂಬುದು ಪ್ರಚಾರಕ್ಕೆ ವಿಶೇಷ ಕಳೆಕೊಟ್ಟಿತ್ತು.

# ೩೦

ಕಚೇರಿಯ ಸಂಜೆ ಕವಾಸ್ಜಿ ಜಹಾಂಗೀರ್ ಹಾಲ್ ಹಿಂದೆಂದೂ ಕಾಣದಿದ್ದ ಸಂಭ್ರಮದಿಂದ ಕಳಕಳಿಸುತ್ತಿತ್ತು. ಜನ ಒಂದು ಘಂಟೆ ಮುಂಚಿತವಾಗಿಯೇ ಬಂದು ತಮ್ಮ ತಮ್ಮ ಸ್ಥಳಗಳನ್ನು ಹಿಡಿದು ಕುಳಿತುಬಿಟ್ಟಿದ್ದರು. ಸಮಾರಂಭದ ಅಧ್ಯಕ್ಷತೆ ವಹಿಸಲು ಆಹ್ವಾನಿತರಾಗಿದ್ದ ಮುಂಬಯಿಯ ಮುಖ್ಯಮಂತ್ರಿಗಳು ಕುಟುಂಬ ಸಮೇತ ಸಕಾಲಕ್ಕೆ ಆಗಮಿಸಿ ಮುಂದುಗಡೆ ತಮಗೆ ಗೊತ್ತಾಗಿದ್ದ ಸ್ಥಳದಲ್ಲಿ ಹೋಗಿ ಕುಳಿತರು. ಅವರ ಅಕ್ಕಪಕ್ಕಗಳಲ್ಲಿ ಇತರ ಮಂತ್ರಿಗಳೂ ಹೈಕೋರ್ಟ್ ನ್ಯಾಯಾಧೀಶರುಗಳೂ ಉನ್ನತ ಸಿವಿಲ್ ಮತ್ತು ಮಿಲಿಟರಿ ಅಧಿಕಾರಿಗಳೂ ಸಪರಿವಾರರಾಗಿ ಬಂದು ಕುಳಿತರು. ಸಂಗೀತ ವಿದ್ವಾಂಸರು, ಹೆಸರಾಂತ ಗಾಯಕ ಗಾಯಕಿಯರು ಬಂದು ತಮ್ಮ ಸ್ಥಳಗಳಲ್ಲಿ ಮಂಡಿಸಿದರು. ಉಳಿದ ಸ್ಥಳವನ್ನೆಲ್ಲಾ ಮುಂಬಯಿಯ ರಸಿಕ ಜನಸಮೂಹ ಆಕ್ರಮಿಸಿಕೊಂಡು ಬಿಟ್ಟಿತು. ಪತ್ರಿಕಾ ಪ್ರತಿನಿಧಿಗಳು ವೇದಿಕೆಯ ಇಕ್ಕೆಲಗಳಲ್ಲಿ ತಮಗಾಗಿ ಏರ್ಪಡಿಸಿದ್ದ ಪ್ರತ್ಯೇಕ ಸ್ಥಾನದಲ್ಲಿ ಮಂಡಿಸಿದ್ದರು. ಸಭಾಮಂದಿರ ತುಂಬಿ ಜನ ಹೊರಗೆ ಹರಿಯುತ್ತಿತ್ತು. ಬಂದಿದ್ದ ಜನರಿಗೆ ಸ್ಥಳ ಒದಗಿಸಲು ಆ ವಿಶಾಲ ಭವನವೂ ಸಾಲದಾಯಿತು. ಸಾವಕಾಶವಾಗಿ ಹೋದರಾಯಿತು ಎಂದು ಬಂದವರೆಲ್ಲಾ ಭವನದ ಹೊರಗಿನ ಪ್ರಾಂಗಣದಲ್ಲೇ ಕೂಡಬೇಕಾಯಿತು. ಧ್ವನಿ ವರ್ಧಕಗಳ ವ್ಯವಸ್ಥೆ ಚೆನ್ನಾಗಿದ್ದುದರಿಂದ ಯಾವ ಗಲಭೆಗೂ ಅವಕಾಶವಿರಲಿಲ್ಲ.

ಯಾವ ಸನ್ನಿವೇಶ ಬರುವುದೋ ಎಂದು ಕಾಯುತ್ತ ಪೋಲೀಸ್ ಪಡೆ ಸಜ್ಜಾಗಿಯೇ ಇತ್ತು.

ಸಂಜೆ ಐದೂವರೆಗೆ ಸರಿಯಾಗಿ ವಿದ್ವಾಂಸರು ಬಂದಿಳಿದರು. ವಾಮನ ರಾಯರ ಕಾರಿನಲ್ಲಿ ರಾಯರು ಮಧುಸೂದನ, ರಾಮಶರ್ಮರು ಬಂದರು. ದ್ವಾರಂರವರು ಶಾಸ್ತ್ರಿಗಳೊಡನೆ ಇನ್ನೊಂದು ಕಾರಿನಲ್ಲಿ ಬಂದರು. ರಾಯರ ಕುಟುಂಬ ಗಂಗೂಬಾಯಿ, ಮಗಳು ಸುಮಾ ಮೊದಲೇ ಬಂದು ಮುಂದುಗಡೆ ಕುಳಿತಿದ್ದರು. ವಿದ್ವಾಂಸರು ಸಭಾಪ್ರವೇಶ ಮಾಡಿದ್ದನ್ನು ಗಮನಿಸಿದ ಶ್ರೋತೃ ಸಮೂಹ ಹರ್ಷಧ್ವನಿಗೈದಿತು. ಗಾಯಕವೃಂದ ವೇದಿಕೆಯೇರಿ ಹೋಯಿತು. ಮಧುಸೂದನ ವೇದಿಕೆಯ ಮೇಲೆ ಒಂದು ಕ್ಷಣ ನಿಂತು ಸುತ್ತ ನೋಡಿ ಸಭೆಗೆ ವಂದಿಸಿ ಕುಳಿತಾಗ ದೀರ್ಘಕಾಲ ಕರತಾಡನವಾಯಿತು. ದ್ವಾರಂರವರೂ ಶಾಸ್ತ್ರಿಗಳೂ ವೇದಿಕೆಯ ಮೇಲೆ ಮಂಡಿಸಿ ತಮ್ಮ ವಾದ್ಯಗಳನ್ನು ಶ್ರುತಿಮಾಡಿ ಕೊಂಡರು. ಹಿಂದಿನಿಂದ ಜೋಡಿ ತಂಬೂರಿಗಳು ಝೇಂಕಾರ ನಿನಾದ ಗೈಯುತ್ತಿದ್ದವು. ಸಭಾಭವನದಲ್ಲಿದ್ದ ದೊಡ್ಡ ಗಡಿಯಾರ ಆರು ಘಂಟೆ ಹೊಡೆಯುತ್ತಿದ್ದ ಹಾಗೆಯೇ ಕಚೇರಿ ಆರಂಭವಾಯಿತು.

ಕಚೇರಿ ವರ್ಣದಿಂದ ಪ್ರಾರಂಭವಾಗುವುದೆಂದು ನಿರೀಕ್ಷಿಸಿದ್ದ ಶ್ರೋತೃ ವರ್ಗ ಬೇರಾವುದೋ ಕೃತಿ ಆರಂಭವಾದದ್ದನ್ನು ಕಂಡು ಅಚ್ಚರಿಗೊಂಡಿತು. ವರ್ಣವಲ್ಲದಿದ್ದರೂ ವರ್ಣದ ಗತಿಯಲ್ಲಿ ಮೊದಲಾದ ಖಂಡಮುಕ್ತಕದ ನಡೆ ಸಭೆಯಲ್ಲಿದ್ದ ವಿದ್ವಾಂಸರ ಗಮನವನ್ನು ತಟಕ್ಕನೆ ಸೆಳೆಯಿತು. ಗಾಯಕ ನಾದರೂಪಿಯಾದ ಚಿಚ್ಛಕ್ತಿಯ ಸ್ತವನವನ್ನಾರಂಭಿಸಿದ್ದ. ನಾದಶ್ರೀ ರಾಗ ಲೀಲಾ ವಿಲಾಸದಿಂದ ಹೊಮ್ಮತೊಡಗಿತು.

"ನಾದಲೋಲ, ಪ್ರಣವಾದಿ ಮೂಲ"

ಲಲಿತ ಪದಪುಂಜದಿಂದ ಕೂಡಿದ ನವ್ಯಕೃತಿಯೊಂದು ಸಭೆಯಲ್ಲಿ ಮೂರ್ತೀಭವಿಸತೊಡಗಿತು.

ಸ್ತಬ್ಧವಾಗಿದ್ದ ಸರಸ್ಸಿನ ಜಲದಲ್ಲಿ ಕಲ್ಲೊಂದು ಬಿದ್ದರೆ ವರ್ತುಲಾ ಕಾರವಾಗಿ ಅಲೆಗಳೆದ್ದು ಸುತ್ತಲೂ ಪಸರಿಸುವಂತೆ ಗಾಯಕನ ನಾಭಿಯಿಂದ ಉದ್ಭವಿಸುತ್ತಿದ್ದ ನಾದಸಮೂಹ ಕಂಠದಿಂದ ಚಿತ್ರರಮಣೀಯವಾಗಿ ಹೊಮ್ಮುತ್ತ ಕ್ಷಣಕ್ಷಣಕ್ಕೆ ಸುಗಾತ್ರವನ್ನು ತಾಳಲಾರಂಭಿಸಿತು. ಆದರ ನಿರಂತರವಾದ

ಅನುರಣನದಿಂದ ಸುತ್ತಲೂ ಶಬ್ದ ಪರಿವೇಷವೊಂದು ಕಟ್ಟಿಕೊಳ್ಳುತ್ತಿರುವಂತೆ ಭಾಸವಾಗತೊಡಗಿತು. ವಿಜಯನಾಗರಿ ರಾಗದ ಛಾಯೆಗಳು ಕಾಣುತ್ತಿದ್ದ ನೂತನ ರಾಗದ ವಿಚಿತ್ರ ನಡೆಯನ್ನು ವಿದ್ವಜ್ಜನರು ಕುತೂಹಲದಿಂದ ಗಮನಿಸುತ್ತ ಕುಳಿತರು.

ಕ್ರಮಕ್ರಮವಾಗಿ ಕಾವೇರುತ್ತಿದ್ದ ಗಾಯಕನ ಮನೋಧರ್ಮ ಸುಂದರವಾದ ಭಾವಗಳನ್ನು ಬಗೆಬಗೆಯಾದ ಪಲುಕುಗಳಿಂದ ಚಿತ್ರಿಸತೊಡಗಿತು. ವಿಶಾಲವಾದ ಪಾತ್ರದಲ್ಲಿ ಗಂಭೀರವಾಗಿ ತುಂಬಿ ಹರಿಯುವ ಹೊಳೆಯಂತೆ ಕಂಠಪಾತ್ರದ ದಡಗಳನ್ನು ಮೀರಿ ಹರಿಯುತ್ತಿದ್ದ ಶಾರೀರ ಸುನಾದರಮಣೀಯವಾಯಿತು. ಓಂಕಾರದಂತೆ ಹೊಮ್ಮುತ್ತಿದ್ದ ಪ್ರಣವಶಬ್ದವನ್ನು ಗಮನಿಸಿ ಬೆರಗುಗೊಂಡ ಸಭೆ ಶ್ರುತಿ ಯಾವುದು, ಶಾರೀರ ಯಾವುದು ಎಂಬ ಭೇದವನ್ನು ಕಾಣಲಾರದಾಯಿತು. ಮಧುಸೂದನ ದ್ರುತಗತಿಯಿಂದ ಸ್ವರಸಂಚಾರ ಮಾಡಿ 'ಪ್ರಣವ' ಎನ್ನುತ್ತ ತಾರಷಡ್ಜದಲ್ಲಿ ವಿರಮಿಸಿದಾಗ ಶ್ರೋತೃವರ್ಗದ ಮೇಲೆ ರೋಮಾಂಚಕಾರಣ ಪರಿಣಾಮವುಂಟಾಯಿತು.

ಸಭೆಯಲ್ಲಿ ಎರಡು ನಿಮಿಷ ಒಂದೇ ಸಮನಾಗಿ ಕರತಾಡನವಾಯಿತು. ಶ್ರಾವಕರೆಲ್ಲರೂ ಯಾವುದೋ ತಾದಾತ್ಮ್ಯದಿಂದ ಬಹಿರ್ಮುಖರಾದಂತೆ ಕುಳಿತು ಉದ್ವೇಗಭರದಲ್ಲಿ ಮುಖದ ಮೇಲೆ ಮೂಡಿದ್ದ ಬೆವರು ಹನಿಗಳನ್ನೊರಗಿಸಿಕೊಳ್ಳುತ್ತ ಕುಳಿತರು. ಸಹಜವಾಗಿ ತಮ್ಮ ಮನಸ್ಸಿನ ಭಾವಗಳನ್ನು ಹೊರಗೆಡಹದ ದ್ವಾರಂರವರು ಕಮಾನನ್ನು ಕೆಳಗಿಳಿಸಿ ವಿಸ್ಮಯ ಮೆಚ್ಚಿಕೆಗಳು ಬೆರೆತ ಭಾವದಿಂದ ಮಧುಸೂದನನ ಕಡೆ ನೋಡುತ್ತ ಕುಳಿತರು. ಮೃದಂಗಕ್ಕೆ ಮುಕ್ತಾಯ ಕೊಟ್ಟು ಕುಳಿತ ಹರಿಹರನಾಥ ಶಾಸ್ತ್ರಿಗಳು ಶಿಲಾಪ್ರತಿಮೆಯಂತಾಗಿದ್ದರು.

ಮುಂಬಯಿಯ ಗಾನರಸಿಕರಿಗೆ ವಾಸುದೇವಾಚಾರ್ಯರ 'ಬ್ರೋಚೇವರಾ' ಕೃತಿಯ ಮೇಲೆ ತುಂಬ ಅಭಿಮಾನವಿತ್ತು. ಹಿಂದೂಸ್ತಾನೀ ಗಾಯಕರು ವೈವಿಧ್ಯಕ್ಕಾಗಿ ಆಗಾಗ ಹಾಡುತ್ತಿದ್ದ ಕೃತಿಗಳಲ್ಲಿ ಅದೂ ಒಂದಾಗಿತ್ತು. ಅದನ್ನು ಅವರಲ್ಲೇ ಒಬ್ಬೊಬ್ಬರು ಒಂದೊಂದು ಶೈಲಿಯಲ್ಲಿ ಹಾಡುತ್ತಿದ್ದರು. ಮಧುಸೂದನ ಮುಂದೆ ಅವನ್ನೇ ಹಾಡಿಕೆಗೆ ಎತ್ತಿಕೊಂಡಾಗ ಸಭೆಯಲ್ಲಿ ಹರ್ಷಮಯ

ವಾದ ಒಂದು ವಾತಾವರಣ ಉಂಟಾಯಿತು. ರಾಗದ ಸುಖವನ್ನು ಸವಿಯಲು ಸಭಿಕರು ಮೈಯೆಲ್ಲಾ ಕಿವಿಯಾಗಿ ಕುಳಿತರು.

ಕಮಾಚ್ ರಾಗವನ್ನು ಗಾಯಕ ಹಿತವಾಗಿ ಆಲಾಪಿಸಿ ಬಳಿಕ ಕೃತಿ ಹಾಡಲಾರಂಭಿಸಿದ. ಅಷ್ಟೇ ಬೆಡಗಿನಿಂದ ಕೂಡಿದ ವರೇಕುಗಳು ದ್ವಾರಂರವರ ಪಿಟೀಲಿನಲ್ಲೂ ಮೈತಾಳುತ್ತಿದ್ದವು. ಮಧುಸೂದನ ಅಪರೂಪವಾದ ಶೈಲಿಯಲ್ಲಿ ಸ್ವರ ಹಾಕಿ ಪಿಟೀಲಿಗೊಂದು ಆವರ್ತವನ್ನು ಬಿಟ್ಟು ಕುಳಿತಾಗ ರಾಗ ಸುಖಕ್ಕೆ ಸೊಕ್ಕಿದ ಸಭೆಯಲ್ಲಿದ್ದ ಗಾಯಕ ವರ್ಗದಿಂದ ಅನಿರೀಕ್ಷಿತವಾದ ಉದ್ಗಾರ ಹೊರಟುಬಿಟ್ಟಿತು.

" ವಹವ್ವಾ, ವಹವ್ವಾ !"

ಕೃತಿಯನ್ನು ಮುಗಿಸಿದಾಗ ಮತ್ತೆ ಚಪ್ಪಾಳೆ ಆವರಿಸಿತು.

ಮಧುಸೂದನ ತ್ಯಾಗರಾಜರ ಎರಡು ಮೂರು ಕೃತಿಗಳನ್ನು ಹಾಡಿ ಬಳಿಕ ಮೋಹನವನ್ನು ತೆಗೆದುಕೊಂಡು ವಿಸ್ತಾರವಾಗಿ ಆಲಾಪನೆ ಮಾಡಿ ಅದರಲ್ಲೇ ತಾನಪಲ್ಲವಿಗಳನ್ನು ಹಾಡಿದ. ದಕ್ಷಿಣಾದಿ ಸಂಗೀತಗಾರರಿಗೆ ಸಹಜ ವಾದ ಕುಸ್ತಿಯ ಯಾವ ವರಸೆಗಳೂ ಇಲ್ಲದೆ ಗಾಯಕನೂ ವಾದ್ಯಗಾರರೂ ಸಮರಸದಿಂದ ಬೆರೆತು ಪಲ್ಲವಿಯನ್ನು ನಿರ್ವಹಿಸಿದ ರೀತಿಯನ್ನೂ ನೋಡಿ ಹಲವರು ಆಶ್ಚರ್ಯಚಕಿತರಾದರು.

ಮುಂದುಗಡೆ ಕುಳಿತಿದ್ದವರ ಗುಂಪಿನಿಂದ ಆಗಲೇ ಚೀಟಿಗಳು ಬರುತ್ತಿದ್ದವು.

" ಹಿಂದೂಸ್ತಾನಿ ಕೃತಿಗಳನ್ನು ಹಾಡಿ."

" ಕಲಾವತಿ ರಾಗ ಹಾಡಬೇಕು "

" ತಿಲಂಗ್, ಮೇಘ್, ಕಾಮೋದ್ – ನಟ್ ಹಾಡಿರಿ."

ಯಾವುದನ್ನು ಹಾಡುವುದು, ಯಾವುದನ್ನು ಬಿಡುವುದು ?

ಮಧುಸೂದನ ಹತ್ತಿರದಲ್ಲೇ ಕುಳಿತಿದ್ದ ರಾಮಶರ್ಮರ ಮುಖ ನೋಡಿದ. ಅವರು ಬಗ್ಗಿ ಕಿವಿಯಲ್ಲಿ ಏನೋ ಉಸುರಿದರು. ಅವನ ಮುಖ ಪ್ರಸನ್ನವಾಯಿತು. ಕಲಾವತಿ ರಾಗ ಅದ್ಭುತ ಗಾಂಭೀರ್ಯದಿಂದ ಬೆಳಗತೊಡಗಿತು. ಎಂದೂ ಕಂಡು ಕೇಳರಿಯದ ವಿಚಿತ್ರವಾದ ಗಮಕಗಳಿಂದ ಕೂಡಿ ರಾಗ ವೃದ್ಧಿಗೊಂಡ ಬಗೆಯನ್ನು ನೋಡಿ ಸಭಿಕರು ಮುಗ್ಧರಾದರು. ಅಂತೆಯೇ

ಮನೋಜ್ಞವಾದ ಕೃತಿಯ ಸಾಹಿತ್ಯ ರಾಗದ ಸುಖಕ್ಕೆ ಕಿರೀಟವಿಟ್ಟಂತಾಯಿತು.

ಕೃತಿ ಮುಗಿದ ತಕ್ಷಣವೇ ಮಧುಸೂದನ ಮೇಘ್ ರಾಗವನ್ನು ಆಲಾಪನೆಗೆ ತೆಗೆದುಕೊಂಡಿದ್ದು ಅನೇಕರಿಗೆ ಅಚ್ಚರಿಯನ್ನುಂಟುಮಾಡಿತು. ಮೈಸೂರಿನ ಗಾಯಕ ಹಿಂದೂಸ್ತಾನೀ ಹಾಡುವುದಿಲ್ಲವೆಂಬ ಅವರ ನಿರಾಶೆ ಮಾಯವಾಗತೊಡಗಿತು. ರಾಗವನ್ನು ನಾನಾ ಸ್ಥಾಯಿಗಳಲ್ಲಿ ಅವನು ಚತುರತೆಯಿಂದ ಆಲಾಪಿಸಿ ಕೃತಿಯನ್ನು ವಿಶಿಷ್ಟ ಲಕ್ಷಣದ ತಾನಗಳಿಂದ ಪೋಷಿಸಿದ್ದು ಶ್ರೋತೃವರ್ಗವನ್ನು ಬೆರಗುಗೊಳಿಸಿತು. ಕಂಚಿನಂಥ ನಾದಭರಿತವಾದ ಶಾರೀರ ತಾನ, ವರೀಕುಗಳಲ್ಲಿ ಊಹೆಗೂ ಮೀರಿದ ಸೊಗಸನ್ನು ತಂದಿತು. ತಿಲಂಗ್ ರಾಗ ಕೃತಿಗಳನ್ನೂ ಅವನು ಅಷ್ಟೇ ಯಶಸ್ವಿಯಾಗಿ ನಿರ್ವಹಿಸಿದ್ದು ಸಭೆಯನ್ನು ಹರ್ಷಸಾಗರದಲ್ಲಿ ಮುಳುಗಿಸಿಬಿಟ್ಟಿತು. ಬಳಿಕ ಕಾಮೋದ್-ನಟ್, ಖಂಬಾವತಿಗಳಲ್ಲಿ ಒಂದು ಚೀಸು, ಒಂದು ತುಮ್ರಿ ಹಾಡಿದ.

ಕನ್ನಡದ ಕೃತಿಗಳನ್ನು ತೆಗೆದುಕೊಂಡು ರೀತಿಗೌಳದಲ್ಲಿ 'ಅರೆಮೂಕನಾಗಿಹೆನು' ಬೇಹಾಗ್‌ನಲ್ಲಿ 'ಕನ್ನಡತಾಯಿ' ಅಠಾಣದಲ್ಲಿ 'ಮನವೇ ನಿನ್ನನು ನಂಬಿ' ಕೃತಿಗಳನ್ನು ಗಂಭೀರವಾಗಿ ಹಾಡಿ ಮುಗಿಸಿದ. ರಾಗಮಾಲಿಕೆಗೆ 'ಸಾಯಂಕಾಲೇ ವನಾಂತೇ' ಶ್ಲೋಕವನ್ನೆತ್ತಿಕೊಂಡು ಹಿಂದೂಸ್ತಾನಿ ಕಾಪಿ, ಮಾರವ, ದೇಶ್, ಮಾಲಕಂಸ್ ರಾಗಗಳಲ್ಲಿ ಮನೋಜ್ಞವಾಗಿ ಚಿತ್ರಿಸಿದ.

ಎಷ್ಟು ಹೊತ್ತು ಹಾಡಿದರೂ ತೃಪ್ತಿಯಾಗುವಂತಿರಲಿಲ್ಲ. ಸಭೆ ಒಂದಾದ ಮೇಲೊಂದರಂತೆ ನಾನಾ ರಾಗಗಳಲ್ಲಿ ಕೃತಿಗಳನ್ನು ಬಯಸುತ್ತಿತ್ತು. ಆವರೆ ಘಂಟೆ ಹತ್ತೂವರೆ ಸಮೀಪಿಸುತ್ತಿತ್ತು. ಅತಿಥಿಯನ್ನು ಇನ್ನು ದಣಿಸುವುದರಲ್ಲಿ ಅರ್ಥವಿಲ್ಲವೆಂದು ಕಾರ್ಯದರ್ಶಿ ಭಾವಿಸಿ ಮೇಲಿಂದ ಮೇಲೆ ಬರುತ್ತಿದ್ದ ಬೇಡಿಕೆಗಳನ್ನು ನಿರ್ವಾಹವಿಲ್ಲದೆ ಬದಿಗೊತ್ತಿದರು. ಮಧುಸೂದನ ಮಂಗಳ ಹಾಡಿ ಮುಗಿಸಿದಾಗ ಸಭೆ ಐದು ನಿಮಿಷ ಒಂದೇ ಸಮನೆ ಕರತಾಡನಮಾಡಿ ತನ್ನ ಅಮಿತಾನಂದವನ್ನು ವ್ಯಕ್ತಪಡಿಸಿತು.

ಕಾರ್ಯಕರ್ತರ ಅಪೇಕ್ಷೆಯಂತೆ ಮುಖ್ಯ ಮಂತ್ರಿಗಳು ಮುಂದೆ ಬಂದು ಮೂವರು ವಿದ್ವಾಂಸರಿಗೂ ಹಾರ ತುರಾಯಿಗಳನ್ನರ್ಪಿಸಿ ಸಾಂಪ್ರದಾಯಕವಾಗಿ ನಾಲ್ಕು ಮಾತು ಆಡಿ ಅಭಿನಂದಿಸಿದರು. ಅನಂತರ ರಾಮಶರ್ಮರ ಪ್ರಾರ್ಥನೆ

ಯಂತೆ ಮುಂಬಯಿಯ ಪ್ರಸಿದ್ಧ ವಿದ್ವಾಂಸರೂ ಜ್ಞಾನವಯೋವೃದ್ಧರೂ ಆದ ವಿಷ್ಣು ದಿಗಂಬರ ಫಡಕೆಯವರು ವೇದಿಕೆಯ ಮೇಲೆ ಬಂದು ನಿಂತರು.

ಅವರು ಮರಾಟಿಯಲ್ಲಿ ಮಾತನಾಡಲಾರಂಭಿಸಿದ್ದನ್ನು ಗಮನಿಸಿದ ಸಭೆ ಗೌರವಭಾವದಿಂದ ಸದ್ದಿಲ್ಲದೆ ಆಲಿಸುತ್ತ ಕುಳಿತಿತು. ಭವನದ ಹೊರಗೆ ತುಂಬಿ ಹೋಗಿದ್ದ ಜನ ಕಿಟಕಿ ಬಾಗಿಲುಗಳ ಹತ್ತಿರ ಕಿಕ್ಕಿರಿದು ಸೇರಿ ನೋಡುತ್ತಿದ್ದರು.

"ಇದುವರೆಗೂ ಗಂಧರ್ವಲೋಕದಲ್ಲಿ ವಿಹರಿಸುತ್ತಿದ್ದ ನಿಮ್ಮನ್ನು ನಾನೀಗ ಭೌತಿಕ ಪ್ರಪಂಚಕ್ಕೆ ಕರೆತರಬೇಕಾಗಿದೆ. ಗಾಯಕರ ಮಧುರ ಗಾಯನದ ಸುರಮ್ಯಸ್ಮೃತಿಯಲ್ಲಿ ಮುಳುಗಿರುವ ನಿಮ್ಮನ್ನು ಆಭಾರ ಮನ್ನಣೆಯ ನಿಮಿತ್ತ ನಾನು ಎಚ್ಚರ ಪಡಿಸಬೇಕಾಗಿದೆ. ವಿದ್ವಾನ್ ಮಧುಸೂದನರಂಥ ಸಿದ್ಧಗಾಯಕರು ನಮ್ಮ ದೇಶದಲ್ಲಿ ತುಂಬ ವಿರಳ. ಹುಡುಕಿದರೂ ಇಂಥ ಮಂದಿ ನಾಲ್ಕಾರಕ್ಕಿಂತ ಹೆಚ್ಚಾಗಿ ಸಿಕ್ಕಲಾರರೆಂಬುದನ್ನು ನಾನು ಬಲ್ಲೆ. ಅವರು ಬರೀ ಸಂಗೀತ ವಿದ್ವಾಂಸರೇ ಅಲ್ಲ. ಶ್ರೇಷ್ಠ ಅನುಭಾವಿಯೂ ಆಗಿದ್ದಾ...."

ಸಭೆಯಲ್ಲಿ ದೀರ್ಘಕಾಲ ಕರತಾಡನವಾಯಿತು.

"ಈ ಮಾತನ್ನು ಇಂದಿನ ಕಚೇರಿಯಲ್ಲಿ ಅವರೇ ಸಿದ್ಧಾಂತಪಡಿಸಿದ್ದಾರೆ. ಅವರದು ತುಂಬ ವರ್ಚಸ್ವಿಯಾದ ಹಾಡಿಕೆ. ಅವರ ನಾದೋಪಾಸನೆ ಅಚ್ಚರಿಯನ್ನುಂಟುಮಾಡುವಂಥದು. ಗಾನದೇವತೆ ಅವರಿಗೊಲಿದಿದ್ದಾಳೆ; ರಾಗ ರಾಗಿಣಿಗಳು ಅವರನ್ನಾಶ್ರಯಿಸಿವೆ; ಅವರ ಮುಖದಿಂದ ಗಾನ ಅಮೃತವಾಗಿ ಸೂಸುತ್ತದೆ. ಈ ಕಿರಿಯ ವಯಸ್ಸಿಗೇ ಅವರು ಅಸದೃಶ ಶಕ್ತಿ ಸಾಮರ್ಥ್ಯಗಳನ್ನು ಗಳಿಸಿಕೊಂಡು ವಂದ್ಯರಾಗಿದ್ದಾರೆ. ದಕ್ಷಿಣೋತ್ತರ ಮಾರ್ಗಗಳೆರಡರಲ್ಲೂ ತಮ್ಮದು ಪಕ್ವ ಪಾಂಡಿತ್ಯವೆಂಬುದನ್ನು ಅವರು ತೋರಿಸಿದ್ದಾರೆ. ಅವರಿಂದು ಹಾಡಿದ ಎರಡು ಹೊಸ ರಾಗಿಣಿಗಳು ಸಂಗೀತ ಪ್ರಪಂಚದಲ್ಲೇ ಕ್ರಾಂತಿಯುಂಟುಮಾಡುವಂಥವು. ಸಾಮಾನ್ಯವಾಗಿ ರಾಗಿಣಿಯ ಸುಖಕ್ಕೆ ದಕ್ಷಿಣಾದಿ ಸಂಪ್ರದಾಯದವರಿಗಿಂತಲೂ ಹೆಚ್ಚಾಗಿ ಸೋಲುವ ಹಿಂದೂಸ್ತಾನಿಮಾರ್ಗದವರು ಇದನ್ನು ಗಮನಿಸಬೇಕು. ಅಸಾಧಾರಣವಾದ ಶಾರೀರ, ನಿರತಿಶಯವಾದ ಊಹಾಶಕ್ತಿಯಿರುವವರು ಮಾತ್ರ ನಿರ್ವಹಿಸಲು ಸಾಧ್ಯವಾದ ಆ ರಾಗಿಣಿಗಳನ್ನು ವಿದ್ವಾನ್ ಮಧುಸೂದನರು ತುಂಬ ಸಮರ್ಥರೀತಿಯಲ್ಲಿ ನಿರ್ವಹಿಸಿ ನಮ್ಮೆಲ್ಲರ

ಪ್ರಶಂಸೆಗೆ ಪಾತ್ರವಾಗಿದ್ದಾರೆ. ಅವರು ಹಿಂದೂಸ್ತಾನೀ ರಾಗಗಳನ್ನು ಹಾಡಿದ ಬಗೆ ನನಗಂತೂ ರಾಮಕೃಷ್ಣ ಬೂವಾ, ಉಸ್ತಾದ್ ಕರೀಂಖಾನ್ ಮತ್ತು ಕಲ್ಲನ್‌ಖಾನರ ಕಚೇರಿಗಳನ್ನು ನೆನಪಿಗೆ ತಂದವು. ಈಗಲೇ ಇಷ್ಟು ಅಪರೂಪವಾದ ವಿದ್ವತ್ತುಳ್ಳ ಅವರನ್ನು ಭವ್ಯಭವಿಷ್ಯತ್ತು ಸ್ವಾಗತಿಸುತ್ತಿದೆಯೆಂದು ನಾನು ಖಂಡಿತವಾಗಿ ಹೇಳಬಲ್ಲೆ"

ಎಂದು ನುಡಿದು ಮುಗಿಸಿದರು. ಸಭೆಯಲ್ಲಿ ಹರ್ಷಧ್ವನಿಯಾಗಿ ಮತ್ತೆ ಬಿಡುವಿಲ್ಲದ ಚಪ್ಪಾಳೆ ತುಂಬಿತು. ರಾಮಶರ್ಮರು ಕೃತಜ್ಞತಾರ್ಪಣೆಗಾಗಿ ಮುಂದೆ ಬಂದು ನಿಂತು ವಿದ್ವಾನ್ ಫಡಕೆಯವರ ಮಾತನ್ನೇ ಮುಂದುವರಿಸುವ ಧಾಟಿಯಲ್ಲಿ ಮಾತನಾಡಲಾರಂಭಿಸಿದರು.

"....ಆದರೆ ಇಷ್ಟು ಸಂತೋಷದಲ್ಲಿ ಒಂದು ಸಂಗತಿಯನ್ನು ಬಿನ್ನವಿಸಿಕೊಳ್ಳಲು ನನಗೆ ಸ್ವಲ್ಪ ವಿಷಾದವೆನಿಸುತ್ತದೆ. ಮುಂಬಯಿಯ ನೂರು ಸಂಘಗಳು ಸೇರಿ ಇಂದಿನ ಕಚೇರಿ ಏರ್ಪಡಿಸಿದವು. ಈ ಕಚೇರಿ ಏರ್ಪಡಿಸುವುದರಲ್ಲಿ ಮುಂಬಯಿಯ ಜನಕ್ಕೊಂದು ಆಸೆಯಿತ್ತು. ವಿದ್ವಾನ್ ಮಧುಸೂದನರ ವಿದ್ವತ್ತು ಕಲಾಪಂತಿಕೆಗಳಿಗೆ ಒಪ್ಪುವ ಎರಡು ಪ್ರಶಸ್ತಿಗಳನ್ನು ಈ ಸಭೆಯಲ್ಲಿ ಮುಖ್ಯಮಂತ್ರಿಗಳ ಸಮ್ಮುಖದಲ್ಲಿ ಕೊಡಬೇಕೆಂದು ಬಯಸಿದ್ದೆವು. 'ಗಾನಚೂಡಾಮಣಿ' 'ಸಂಗೀತ ಸಮ್ರಾಟ್' ಎಂಬ ಪ್ರಶಸ್ತಿಗಳನ್ನು ಗಾಯಕರಿಗೆ ಅರ್ಪಿಸಲು ಎಲ್ಲಾ ಸಿದ್ಧತೆಯೂ ಆಗಿತ್ತು. ಆದರೆ ವಿದ್ವಾನ್ ಮಧುಸೂದನರು ಪ್ರಶಸ್ತಿಗಳನ್ನು ಒಲ್ಲೆನೆಂದು ಬಿಟ್ಟರು. ಪ್ರಶಸ್ತಿಪಡೆಯುವಷ್ಟು ಪರಿಪೂರ್ಣತೆ ತಮಗಿನ್ನೂ ಬಂದಿಲ್ಲವೆಂಬ ಅವರ ವಾದವನ್ನು ನೀವು ಒಪ್ಪುವುದಿಲ್ಲವೆಂದೇ ಭಾವಿಸಿದ್ದೇನೆ...."

ಸಭೆಯಲ್ಲಿ ದೊಡ್ಡದಾಗಿ ಧ್ವನಿ ಎದ್ದಿತು; ಅಲ್ಲಲ್ಲೇ ಕೆಲವರು ಎದ್ದು ನಿಂತರು.

"ಪಶಸ್ತಿಗಳನ್ನು ದಯಮಾಡಿ ಸ್ವೀಕರಿಸಬೇಕು."

ಎಲ್ಲರೂ ತಾಳ್ಮೆಯಿಂದ ಕುಳಿತುಕೊಳ್ಳುವಂತೆ ಶರ್ಮರು ಕೈಸನ್ನೆ ಮಾಡುತ್ತ ತಮ್ಮ ಮಾತನ್ನು ಮುಂದುವರಿಸಿದರು :

"ಆದರೆ ಶ್ರೀಯುತರ ಅಭಿಲಾಷೆಗೆ ವಿರುದ್ಧವಾಗಿ ಹೋಗಿ ಬಲಾತ್ಕಾರ ಮಾಡುವ ಇಚ್ಛೆ ನಮಗಿಲ್ಲ. ಇನ್ನೊಂದು ಸಲವಾದರೂ ಅವರು ನಮಗೆ ಈ

ಅವಕಾಶ ನೀಡುತ್ತಾರೆಂದು ನಂಬಿದ್ದೇನೆ. ಅವರು ಎಲ್ಲಾದರೂ ಪ್ರಶಸ್ತಿ ಸ್ವೀಕರಿಸುವ ಮನಸ್ಸು ಮಾಡಿದರೆ ಆ ಗೌರವವನ್ನು ಮುಂಬಯಿಯ ಪ್ರಜೆಗಳಿಗೇ ಮೊದಲು ನೀಡಬೇಕೆಂದು ನನ್ನ ಪ್ರಾರ್ಥನೆ"

ಎಂದು ಮುಗಿಸಿದರು. ಸಭೆಯಲ್ಲಿ ಬಹು ಹೊತ್ತು ಹರ್ಷಧ್ವನಿಯಾಗುತ್ತಲೇ ಇತ್ತು. ವಿದ್ವಾನ್ ಶರ್ಮರು ಬೆಳ್ಳಿಯ ತಟ್ಟೆಯಲ್ಲಿ ಫಲ ತಾಂಬೂಲಗಳನ್ನಿಟ್ಟು ತಂದು ಜೊತೆಗೆ ಕವರಿನಲ್ಲಿ ಎರಡು ಸಾವಿರದ ಐದು ನೂರು ರೂಪಾಯಿ ನೋಟುಗಳನ್ನಿಟ್ಟು ಮಧುಸೂದನನಿಗೆ ಅರ್ಪಿಸಿದರು. ದ್ವಾರಕಂರವರಿಗೂ ಹರಿಹರನಾಥ ಶಾಸ್ತ್ರಿಗಳಿಗೂ ಯಥೋಚಿತ ಮರ್ಯಾದೆಗಳು ಸಂದವು.

ಮಧುಸೂದನ ವೇದಿಕೆ ಬಿಟ್ಟೇಳುವ ಮುನ್ನ ನಾಲ್ಕಾರು ಕ್ಯಾಮರಾಗಳು ಬೆಳಕು ಮಿಂಚಿಸಿದವು. ಪತ್ರಿಕಾ ಪ್ರತಿನಿಧಿಗಳೂ ಮುಂಬಯಿಯ ಸಂಗೀತಗಾರರೂ ಅವರದಿಂದ ಬಂದು ಸುತ್ತಲೂ ಮುತ್ತಿಕೊಂಡರು.

## ೩೧

ಮಧುಸೂದನನ ಕಚೇರಿ ಕೇಳಿದ ವಾಮನರಾಯರಿಗೆ ಅಮಿತಾನಂದ ವಾಗಿತ್ತು. ಮರಾಠಿ ವಿದ್ವಾಂಸಶ್ರೇಣಿಯಲ್ಲಿ ದಿಗ್ಗಜದಂತಿದ್ದ ವಿಷ್ಣು ದಿಗಂಬರ ಫಡಕೆಯವರೇ ಹಾಡಿಕೆಯನ್ನು ನಿರ್ಮತ್ಸರರಾಗಿ ಹೊಗಳಿದ್ದು ಅವರ ಸಂತೋಷ ವನ್ನು ಹೆಚ್ಚಿಸಿತ್ತು. ಹಿಂದೂಸ್ತಾನೀ ಸಂಗೀತದ ತವರುಮನೆಯಲ್ಲಿ ಕರ್ಣಾಟಕದ ಕಲಾವಿದನೊಬ್ಬನಿಗೆ ಈ ಮನ್ನಣೆ ದೊರೆಯಿತಲ್ಲಾ ಎಂದು ರಾಯರು ಹಿಗ್ಗಿ ಹೋದರು. ಕೈಗೊಂಡ ಕೆಲಸ ಯಾವ ವಿಘ್ನವೂ ಇಲ್ಲದೆ ಹೂವಿನ ಸರ ಎತ್ತಿದ ಹಾಗೆ ಜರುಗಿ ಹೋಗಿತ್ತು.

ಈ ಸಂತೋಷ ರಾಯರೊಬ್ಬರಿಗೇ ಮೀಸಲಾಗಿರಲಿಲ್ಲ. ಮಧುಸೂದನನ ಹಾಡಿಕೆ ಮುಂಬಯಿಯ ವಿದ್ವದ್ರಸಿಕರಲ್ಲಿ ಹಲವರ ಮನಸ್ಸನ್ನು ರಮಿಸಿ ತ್ತೆಂಬುದಕ್ಕೆ ಅನ್ವರ್ ಬಾಯಿಯಿಂದ ಬಂದ ಕಾಗದವೇ ನಿದರ್ಶನವಾಗಿತ್ತು.

ಬೆಳಗ್ಗೆ ಎದ್ದು ಮುಖಮಾರ್ಜನೆ ಮಾಡಿಕೊಂಡು ರಾಯರ ಸಂಗಡ ಚಹ ಕುಡಿಯುತ್ತ, ಬೆಳಗಿನ ಪತ್ರಿಕೆಗಳಲ್ಲಿ ಬಂದಿದ್ದ ಪ್ರಶಂಸೆಗಳನ್ನು ಪರಿಕಿಸುತ್ತ ಕುಳಿತಿದ್ದ ಮಧುಸೂದನನ ಮುಂದೆ ಆಳು ಒಂದು ಕಾಗದ ತಂದಿತ್ತ. ಮಧು ಸೂದನ ಕವರನ್ನು ಒಡೆದು ಕಾಗದವನ್ನು ಆಮೂಲಾಗ್ರವಾಗಿ ಓದಿ ಅದನ್ನು ರಾಯರ ಕೈಗಿತ್ತ. ವಾಮನರಾಯರು ಕನ್ನಡಕವೇರಿಸಿ ಕಾಗದವನ್ನು ಓದ ಲಾರಂಭಿಸಿದರು.

" ಮಾನ್ಯರೇ,

ನಿಮ್ಮ ಕಚೇರಿ ಕೇಳಬೇಕೆಂದು ಬಹು ದಿನಗಳಿಂದ ಬಯಕೆಯಿದ್ದರೂ ಅನಾರೋಗ್ಯದ ನಿಮಿತ್ತ ಬರಲಾಗದೆ ಇದ್ದುದಕ್ಕೆ ವಿಷಾದಿಸುತ್ತೇನೆ. ಆದರೆ ಕಚೇರಿ ಕೇಳಿದ ನನ್ನ ಮಗಳು ಅದರ ಸವಿಯನ್ನು ನನಗೆ ಬಣ್ಣಿಸಿದ್ದಾಳೆ. ಒಮ್ಮೆ ತಮ್ಮ ಭೇಟಿಯಾಗಿದ್ದರೆ ಚೆನ್ನಾಗಿತ್ತು. ಮುಖಪರಿಚಯದ ಅಭಿಲಾಷೆ ನನಗೂ ಇದೆ. ಸಾಧ್ಯವಾದರೆ ಸಂಜೆ ನಮ್ಮ ಕುಟೀರದ ಕಡೆ ದಯಮಾಡಿಸಿ ಚಹ ಸ್ವೀಕಸಬೇಕು. ಆಳಿನ ಕೈಯಲ್ಲಿ ಒಂದು ಮಾತು ಹೇಳಿಕಳಿಸಿದರೆ ಕಾರು ಕಳಿಸುತ್ತೇನೆ.

—ಇಂತು ನಿಮ್ಮ ಆಗಮನಾಕಾಂಕ್ಷಿ
ಅನ್ವರ್‌ಬಾಯಿ "

ಕಾಗದವನ್ನು ಓದಿ ವಾಮನರಾಯರ ಮುಖ ಅರಳಿತು.

" ಹೋಗಿ ಬರ್ರಿ, ಅವಶ್ಯ ಹೋಗಿ ಬರ್ರಿ "

ಎಂದರು. ಮಧುಸೂದನ ಅನ್ವರ್‌ಬಾಯಿಯ ಹೆಸರು ಕೇಳಿದ್ದನೇ ಹೊರತು ಆಕೆಯ ಮುಖಪರಿಚಯ ಅವನಿಗಿರಲಿಲ್ಲ. ಮುಂಬಯಿ ಪ್ರಾಂತಕ್ಕೆಲ್ಲಾ ಗಣ್ಯಳಾದ ಗಾಯಕಿಯೆಂದು ಹೆಸರಾಗಿದ್ದ ಅನ್ವರ್‌ಬಾಯಿ ಕಳೆದೆರಡು ದಶಕಗಳ ಹಿಂದೆಯೆ ಕೀರ್ತಿಯ ಶಿಖರವನ್ನಡರಿದ್ದಳು. ಅವಳ ಹೆಸರು ಉತ್ತರ ಹಿಂದೂ ಸ್ಥಾನವಲ್ಲೇ ಏಕೆ, ಕರ್ಣಾಟಕದಲ್ಲೂ ಗುಡುಗಾಡುತ್ತಿತ್ತು. ಆಕೆಯ ಬೈಠಕ್‌ಗಳೆಂದರೆ ರಸಿಕಜನ ತಂಡತಂಡವಾಗಿ ಬಂದು ಸೇರುತ್ತಿದ್ದರು. ಅಪೂರ್ವವಾದ ವೈದುಷ್ಯದೊಡನೆ ಕಣ್ಣು ಕುಕ್ಕುವಂಥ ರೂಪವೂ ಸೇರಿ ಅವಳ ಕಾಲಕ್ಕೆ ಸಂಗೀತ ಪ್ರಪಂಚದ ಸಮ್ರಾಜ್ಞಿಯಾಗಿದ್ದಳು. ಯಾವ ಒಂದು ಮದುವೆಯಾಗಲಿ, ಸಂತೋಷ ಸಮಾರಂಭವಾಗಲಿ ಅನ್ವರ್‌ಬಾಯಿಯ ಬೈಠಕ್ ಇಲ್ಲದಿದ್ದರೆ ಶೋಭಿಸುತ್ತಿರಲಿಲ್ಲ. ರಾಜಮಹಾರಾಜರು, ಶ್ರೀಮಂತರು ಬಾಯಿಯನ್ನು ಸನ್ಮಾನಿಸುವುದರಲ್ಲಿ, ತಮ್ಮ ಮನೆಗಳಿಗೆ ಕರೆಸಿಕೊಂಡು ಕಚೇರಿಗಳನು ಮಾಡಿಸುವುದರಲ್ಲಿ ಒಬ್ಬರೊಡನೊಬ್ಬರು ಸ್ಪರ್ಧೆ ನಡೆಸುತ್ತಿದ್ದರು.

ಅನ್ವರ್‌ಬಾಯಿಯ ಮನೆ ರಸಿಕರಿಗೆ, ಕಲಾವಿಲಾಸಿಗಳಿಗೆ ಯಾತ್ರಾಸ್ಥಳವಾಗಿತ್ತು. ಕೆಲವರು ಅವಳ ಸಂಗೀತ ಮೆಚ್ಚಿ ಹೋಗುತ್ತಿದ್ದರೆ ಮತ್ತೆ ಹಲವರು ಅವಳ ರೂಪಕ್ಕೆ ಮರುಳಾಗಿ ಹೋಗುತ್ತಿದ್ದರು. ಮನೆಯ ಮುಂದೆ ನಾಲ್ಕಾರು

ಕಾರುಗಳಿಲ್ಲದಿದ್ದ ದಿನವೇ ಇರುತ್ತಿರಲಿಲ್ಲ. ಶ್ರೀಮಂತ ಸರದಾರರು, ಉನ್ನತಾಧಿಕಾರಿಗಳು ಅವಳ ಭಕ್ತಕೋಟಿಗೆ ಸೇರಿಹೋಗಿದ್ದರು.

ಆದರೆ ಆ ಸ್ವರ್ಣಯುಗ ಕಳೆದುಹೋಗಿತ್ತು.

ಅನ್ವರ್‌ಬಾಯಿ ತನ್ನ ರೂಪ ವೈದುಷ್ಯಗಳನ್ನಿನ್ನು ಮೆರೆಸುವ ಹಾಗಿರಲಿಲ್ಲ. ಇಪ್ಪತ್ತೈದು ವರ್ಷ ಅವ್ಯಾಹತವಾಗಿ ನಡೆಸಿದ ರಸಿಕ ಜೀವನದ ಫಲವಾಗಿ ಅವಳು ಐವತ್ತಕ್ಕೇ ಹಣ್ಣು ಹಣ್ಣು ಮುದುಕಿಯಂತಾಗಿ ಹೋಗಿದ್ದಳು. ಒಂದು ಕಾಲದಲ್ಲಿ ವಿಪುಲವಾಗಿ ಗಳಿಸಿದ್ದ ಹಣ ಇಂದು ಅವಳನ್ನು ಕಿತ್ತುಕೊಂಡು ತಿನ್ನುತ್ತಿದ್ದ ನಾನಾ ಸುಖರೋಗಗಳಿಗೆ ಸೂರೆಯಾಗುತ್ತಿತ್ತು. ಮನೆ ಬಿಟ್ಟು ಎಲ್ಲೂ ಹೋಗುವ ಸ್ಥಿತಿಯಿಲ್ಲದಿದ್ದ ಅನ್ವರ್‌ಬಾಯಿ ಸಂಗೀತ ಪ್ರಪಂಚದಲ್ಲಿ ತನ್ನಂತೆಯೇ ಮುಂದಕ್ಕೆ ಬರುತ್ತಿದ್ದ ಮಗಳ ಬಾಳಿನಲ್ಲಿ ಭವಿಷ್ಯದ ಬೆಳಕನ್ನು ಕಾಣುತ್ತ ಕಾಲ ನೂಕುತ್ತಿದ್ದಳು.

ಕಸ್ತೂರಿ ಕಟ್ಟಿದ ಅರಿವೆಯನ್ನು ಅದರ ವಾಸನೆ ಸಹಜವಾಗಿ ಬಿಡದಿರುವಂತೆ ಅನ್ವರ್‌ಬಾಯಿ ಎಲ್ಲ ಬಗೆಯ ಚಟುವಟಿಕೆಗಳಿಂದಲೂ ವಿಮುಕ್ತಳಾಗಿ ಕುಳಿತಿದ್ದರೂ ಸಂಗೀತದ ಚಟ ಮಾತ್ರ ಅವಳನ್ನು ಬಿಟ್ಟು ಹೋಗಿರಲಿಲ್ಲ. ಬೇಕೆಂದಾಗ ಅವಳ ಮನೆಯಲ್ಲೇ ಬೈಠಕ್‌ಗಳಾಗುತ್ತಿದ್ದವು. ಮುಂಬಯಿಯಲ್ಲಿ ಯಾವ ದೊಡ್ಡ ಸಂಗೀತ ಕಚೇರಿಯಾಗಲಿ ಅವಳಿಗೆ ತಪ್ಪದೆ ಆಹ್ವಾನ ಹೋಗುತ್ತಿತ್ತು. ನಗರಕ್ಕೆ ಬರುತ್ತಿದ್ದ ಹೊರಗಿನ ಗಣ್ಯವಿದ್ವಾಂಸರನ್ನು ಅನ್ವರ್‌ಬಾಯಿ ಮನೆಗೆ ಕರೆಸಿಕೊಂಡು ಆದರಿಸಿ ಕಳಿಸದೆ ಇರುತ್ತಿರಲಿಲ್ಲ.

ಈ ಔದಾರ್ಯ ಅವಳಲ್ಲೊಂದು ದೊಡ್ಡ ಗುಣವಾಗಿತ್ತು. ವೃತ್ತಿಬಾಂಧವರಲ್ಲಿ ಏನಾದರೊಂದು ಹೆಚ್ಚಳ ಕಂಡಾಗ ಸಂತೋಷಪಡದೆ ಕರುಬುವ ವಿದ್ವಾಂಸರ ಸಂಖ್ಯೆಯೇ ಹೆಚ್ಚಾಗಿದ್ದ ಕಾಲದಲ್ಲಿ ಅನ್ವರ್‌ಬಾಯಿಯ ನಿರ್ಮತ್ಸರ ಸ್ವಭಾವ ಗುಣಗ್ರಾಹಿ ಜನದ ಹೊಗಳಿಕೆಗೆ ಪಾತ್ರವಾಗಿದ್ದುದರಲ್ಲಿ ಅಚ್ಚರಿಯಿರಲಿಲ್ಲ. ಅಂತೆಯೇ ಹಿಂದಿನ ರಾತ್ರಿ ಮಧುಸೂದನನ ಕಚೇರಿಗೆ ಬಂದಿದ್ದ ರೋಷನ್ ಹಾಡಿಕೆಯ ಸೊಗಸನ್ನು ತಾಯಿಯ ಮುಂದೆ ಬಣ್ಣ ಕಟ್ಟಿ ಹೊಗಳಿದಾಗ ಮೈಸೂರಿನ ಗಾಯಕನ ಪರಿಚಯಮಾಡಿಕೊಳ್ಳಬೇಕೆಂಬ ಉತ್ಕಟೇಚ್ಛೆ ಸಹಜವಾಗಿಯೆ ಅನ್ವರ್‌ಬಾಯಿಗೆ ಉಂಟಾಯಿತು. ಬೆಳಗ್ಗೆ ಏಳುತ್ತಿದ್ದ ಹಾಗೇ ಅವಳು ಆಳನ್ನು ವಾಮನರಾಯರ ಮನೆಗೆ ಅಟ್ಟಿದ್ದಳು.

ಸಂಜೆ ಐದು ಘಂಟೆಗೆ ಸರಿಯಾಗಿ ವಾಮನರಾಯರ ಮನೆಯ ಕಾಂಪೌಂಡಿನಲ್ಲಿ ಅನ್ವರ್‌ಬಾಯಿಯ ಕಾರು ಬಂದು ನಿಂತಿತು. ಡ್ರೈವರ್ ಕೆಳಗಿಳಿದು ಕಾರು ಬಂದಿರುವ ಸಮಾಚಾರ ದಣಿಗಳಿಗೆ ತಿಳಿಸುವಂತೆ ಆಳಿಗೆ ಹೇಳಿದ. ಆಳು ಒಳಗೆ ಹೋಗಿ ಬಿನ್ನವಿಸುತ್ತಲೇ ಮಧುಸೂದನ ಹೊರಡಲು ಸಜ್ಜಾದ. ಶುಭ್ರವಾಗಿ ಒಗೆದು ಇಸ್ತ್ರಿಮಾಡಿದ ಬಿಳಿಯ ಪಾಯಿಜಾಮೆ, ನಿಂಬೇ ಹಣ್ಣಿನ ಬಣ್ಣದ ಸಿಲ್ಕ್ ಜುಬ್ಬ, ಅದಕ್ಕೊಪ್ಪುವ ವೆಸ್ಟ್‌ಕೋಟ್ ಧರಿಸಿ, ನೀಟಾಗಿ ಕ್ರಾಪು ಬಾಚಿಕೊಂಡು, ಪಂಪ್‌ಷೂ ಮೆಟ್ಟಿ ಹೊರಗೆ ಬಂದು ಕಾರು ಹತ್ತಿದ ಸ್ಫುರದ್ರೂಪಿ ವ್ಯಕ್ತಿಯನ್ನು ಒಂದು ಗಳಿಗೆ ದಿಟ್ಟಿಸಿ ನೋಡಿದ ಚಾಣಾಕ್ಷ ಡ್ರೈವರ್ ಮನಸ್ಸಿನಲ್ಲೇ ಏನೇನೋ ಗುಣಾಕಾರ ಹಾಕಲಾರಂಭಿಸಿದ. ಕಾರು ವೇಗವಾಗಿ ಹೊರಟು ಪರೇಲ್ ಹಾದಿ ಹಿಡಿಯಿತು.

ಒಳಗಿನಿಂದಲೇ ಮುಂಬಯಿ ರಸ್ತೆಗಳನ್ನೂ ಕಟ್ಟಡಗಳನ್ನೂ ಗಮನಿಸುತ್ತಿದ್ದ ಮಧುಸೂದನನಿಗೆ ಕಾರು ನರ‍್ರನೆ ಬಲಕ್ಕೆ ತಿರುಗಿ 'ಷಿರಾಜ್ ಮಂಜಿಲ್' ಎಂದು ಬೋರ್ಡು ಹಾಕಿದ್ದ ದೊಡ್ಡ ಬಂಗಲೆಯ ಆವರಣವನ್ನು ಪ್ರವೇಶಿಸಿದ್ದು ಗೊತ್ತಾಗಲೇ ಇಲ್ಲ. ಡ್ರೈವರ್ ಪೋರ್ಟಿಕೋ ಒಳಗೆ ಕಾರು ನಿಲ್ಲಿಸಿ ಕೆಳಗಿಳಿದು ಬಾಗಿಲು ತೆಗೆದಾಗಲೇ ಅವನಿಗೆ ತಾನು ಅನ್ವರ್‌ಬಾಯಿಯ ಮನೆ ತಲಪಿದ್ದೇನೆಂದು ಗೊತ್ತಾದುದು. ಅಷ್ಟುಹೊತ್ತಿಗೆ ಮನೆಯ ಮೆಟ್ಟಲಿಳಿದು ಬಂದು ಕಾರಿನ ಹತ್ತಿರ ನಿಂತಿದ್ದ ಸೇವಕ ಬಗ್ಗಿ ಸಲಾಂ ಮಾಡಿ ಮಧುಸೂದನನನ್ನು ಗೌರವದಿಂದ ಒಳಗೆ ಕರೆದೊಯ್ದ.

ಒಳಗೆ ಪ್ರವೇಶಿಸುತ್ತಲೇ ಭವ್ಯವಾದ ಹಜಾರ. ನೆಲಕ್ಕೆ ಮೆತ್ತನೆಯ ರತ್ನಗಂಬಳಿ ಹಾಸಿತ್ತು. ಮಧ್ಯೆ ದೊಡ್ಡ ಪುಷ್ಪಧಾನಿಯಿದ್ದು ಅದರಲ್ಲಿ ಬಗೆ ಬಗೆಯ ಹೂವುಗಳನ್ನು ಗುಚ್ಛಗುಚ್ಛವಾಗಿ ಇಡಲಾಗಿತ್ತು. ನಾಲ್ಕು ಮೂಲೆಗಳಲ್ಲಿ ಸಣ್ಣ ಸಣ್ಣ ಹೂಕುಂಡಗಳಿದ್ದವು. ಗೋಡೆಗಳ ಮೇಲೆ ಅಲ್ಲಲ್ಲೇ ಶೃಂಗಾರ ರಸಸನ್ನಿವೇಶಗಳನ್ನು ಚಿತ್ರಿಸುವ ನಾಲ್ಕಾರು ತೈಲ-ವರ್ಣಚಿತ್ರಗಳಿದ್ದವು. ಮುಂದೆ ಹಾದಿ ತೋರಿಸುತ್ತ ನಡೆದ ಆಳು ಹಜಾರದ ಒಂದು ಕೊನೆಯಲ್ಲಿದ್ದ ಬಾಗಿಲನ್ನು ತೆಗೆದು ಮಧುಸೂದನನನ್ನು ಒಳಗೆ ಕಳಿಸಿ ತಾನು ಅಲ್ಲೇ ನಿಂತುಕೊಂಡ.

ಒಳಗೆ ವಿಶಾಲವಾಗಿದ್ದ ರೂಮಿನಲ್ಲಿ ಆರಾಮಕುರ್ಚಿಯ ಮೇಲೆ ದಿಂಬು

ಗಳನ್ನು ಹಾಕಿಕೊಂಡು ಮಲಗಿದ್ದ ಅನ್ವರ್‌ಬಾಯಿ ಮಧುಸೂದನ ಒಳಗೆ ಬರುತ್ತಲೇ ಮೆಲ್ಲನೆ ಎದ್ದು ಕುಳಿತುಕೊಳ್ಳಲೆತ್ನಿಸುತ್ತ ನಗುಮೊಗದಿಂದ ಎರಡು ಕೈಗಳನ್ನೂ ಜೋಡಿಸಿ ಸ್ವಾಗತಿಸಿದಳು.

"ದಯಮಾಡಿಸಬೇಕು."

"ಏಳುವ ತೊಂದರೆ ತೆಗೆದುಕೊಳ್ಳಬೇಡಿ"

ಎಂದು ಮಧುಸೂದನ ನುಡಿಯುತ್ತ ಪ್ರತಿವಂದಿಸಿ ಅವಳ ಪಕ್ಕದಲ್ಲಿದ್ದ ಸೋಫಾದಲ್ಲಿ ಮಂಡಿಸಿದ. ಅಷ್ಟುಹೊತ್ತಿಗೆ ಪಕ್ಕದ ಒಂದು ಬಾಗಿಲು ತೆಗೆದು ರೋಷನ್‌ಬಾಯಿ ಒಳಗೆ ಬಂದಳು. ರೂಮು ಪ್ರವೇಶಿಸುತ್ತಲೇ ಮಧುಸೂದನನನ್ನು ಕಂಡು ಚಕಿತಳಾದವಳಂತೆ ಒಂದು ಕ್ಷಣ ಹಾಗೇ ನಿಂತಳು. ಅನ್ವರ್ ಬಾಯಿ ಮಗಳ ಕಡೆ ತಿರುಗಿ,

"ರೋಷನ್, ವಿದ್ವಾಂಸರು ಬಂದಿದ್ದಾರೆ."

ಎಂದು ನುಡಿದು ಮಧುಸೂದನನಿಗೆ ಮಗಳ ಪರಿಚಯ ಮಾಡಿಸುತ್ತ,

"ಇವಳೇ ನನ್ನ ಮಗಳು ರೋಷನ್"

ಎಂದಳು. ರೋಷನ್ ಬಾಯಿ ಮಂದಸ್ಮಿತಳಾಗಿ ಕೈಮುಗಿದು ತಾಯಿಯ ಪಕ್ಕದಲ್ಲಿ ಹೋಗಿ ಕುಳಿತಳು. ಸೇವಕಿ ಚಹಾ ಬಿಸ್ಕತ್ತುಗಳನ್ನು ತಂದು ಟೀಪಾಯ್ ಮೇಲೆ ಇಟ್ಟು ಹೊರಟು ಹೋದಳು. ರೋಷನ್ ಮೂರು ಬಟ್ಟಲುಗಳಿಗೆ ಚಹಾ ಬಗ್ಗಿಸಿದಳು. ಚಹಾ ಕುಡಿಯುತ್ತಿರುವಾಗ ಅನ್ವರ್‌ಬಾಯಿ ಮಧುಸೂದನನ ಮುಖವನ್ನು ನೋಡುತ್ತ,

"ನೀವು ಬರಲಾರಿರೇನೋ ಎಂದುಕೊಂಡಿದ್ದೆ. ದೊಡ್ಡ ಮನಸ್ಸು ಮಾಡಿ ಬಂದದ್ದು ತುಂಬ ಸಂತೋಷ."

"ಅಷ್ಟು ದೊಡ್ಡಮಾತು ಬೇಡ. ನಿಮ್ಮಂಥ ಪ್ರಖ್ಯಾತ ವಿದುಷಿಯರ ಭೇಟಿಗೆ ಯಾರಾದರೂ ಬರಬೇಕಾದ್ದೇ."

"ಆ ಕಾಲ ಆಗಿಹೋಯಿತೆನ್ನಿ. ಈಗ ನಾನೊಬ್ಬಳು ಯಾರಿಗೂ ಬೇಡವಾದ ಒಂದು ಜೀವಚ್ಛವ."

"ನೀವು ಹಾಗೆನ್ನುವುದು ಸರಿಯಲ್ಲ. ವೃದ್ಧಾಪ್ಯ ಕಾಲಧರ್ಮ. ನಿಮ್ಮ ಕಾಲದಲ್ಲಿ ಇಡೀ ದೇಶಕ್ಕೆಲ್ಲಾ ನೀವೊಬ್ಬರೇ ಗಾಯಕಿಯಾಗಿ ಬೆಳಗಿದಿರೆಂಬುದನ್ನು ಮರೆಯಬಾರದು."

"ಹಾಗೆ ಹೇಳುವುದು ನಿಮ್ಮ ಸೌಜನ್ಯ. ಈ ಮಾತನ್ನು ಎಷ್ಟು ಜನ ಈಗ ಹೇಳುತ್ತಾರೆಂದು ತಿಳಿದಿರುವಿರಿ ?"

"ಜನರ ಸ್ವಭಾವಕ್ಕೆ ಏನು ಮಾಡುವುದು ಹೇಳಿ? ಅದು ಯಾವಾಗಲೂ ಹಾರುವ ಪತಂಗದಂತೆ."

"ನಿಜವನ್ನೇ ಹೇಳಿದಿರಿ. ನನ್ನ ಪರೆ ನಡೆಯುತ್ತಿದ್ದ ಕಾಲದಲ್ಲಿ ಬೇಡ ಬೇಡವೆಂದರೂ ಜನ ನೋಡಲು ಬರುತ್ತಿದ್ದರು. ಈಗ ನನ್ನ ಶಕ್ತಿ ಕುಂಠಿತವಾಗಿ ನಾನು ರೋಗದ ಗೂಡಾಗಿರುವಾಗ ಪರಿಚಯದ ಮಂದಿಯೂ ನೋಡಲು ಬರುವುದು ಅಪರೂಪವಾಗಿದೆ. ನನಗೇಕೋ ಪ್ರಪಂಚವೇ ಬೇಸರವಾಗಿದೆ. ಇವಳನ್ನು ನೋಡಿಕೊಂಡು ಬದುಕಬೇಕಾಗಿದೆ"

ಎಂದು ಅಸ್ಗರ್‌ಬಾಯಿ ಮಗಳ ಭುಜದ ಮೇಲೆ ಮಮತೆಯಿಂದ ಕೈಹಾಕಿದಳು. ಮಧುಸೂದನನ ದೃಷ್ಟಿ ತನ್ನ ಮೇಲೆ ನೆಲಸಿದ್ದನ್ನು ಕಂಡು ರೋಷನ್ನಳ ಕೆನ್ನೆಗೆ ಕೆಂಪೇರಿತು. ಅವಳು ಲಜ್ಜೆಯಿಂದ ತಲೆ ತಗ್ಗಿಸಿ ಕಾಲಿನ ಬೆರಳನ್ನು ರತ್ನಗಂಬಳಿಯ ತುಪ್ಪಟದಲ್ಲಿ ಹುದುಗಿಸಿದಳು.

"ನನ್ನ ರೋಷನ್ ಗಾನ ನೀವು ಕೇಳಬೇಕು. ನಿಮ್ಮಂಥ ಉಸ್ತಾದರ ಮೆಚ್ಚಿಕೆ, ಆಶೀರ್ವಾದ ತನ್ನ ಕಲೆಗೆ ಶ್ರೇಯಸ್ಕರವೆಂದು ಅವಳು ಭಾವಿಸುತ್ತಾಳೆ"

ಎಂದು ಅಸ್ಗರ್‌ಬಾಯಿ ನುಡಿದು ಮಗಳ ಕಡೆ ತಿರುಗಿ,

"ಉಸ್ತಾದರನ್ನು ಗಾನಮಂದಿರಕ್ಕೆ ಕರೆದುಕೊಂಡು ಹೋಗು. ನಾನು ಇಲ್ಲಿಂದಲೇ ನಿನ್ನ ಹಾಡಿಕೆ ಕೇಳಿಸಿಕೊಳ್ಳುತ್ತೇನೆ"

ಎಂದಳು. ರೋಷನ್ ಎದ್ದು ನಿಂತು ತುಂಬು ನೋಟದಿಂದ ಒಮ್ಮೆ ಮಧುಸೂದನನ ಮುಖ ನೋಡಿ ಪಕ್ಕದ ಬಾಗಿಲನ್ನು ತೆಗೆದು ಒಳಗೆ ಹೊರಟು ಹೋದಳು. ಅವನು ಅವಳನ್ನು ಹಿಂಬಾಲಿಸಿದ.

ಸುಸಜ್ಜಿತವಾಗಿದ್ದ ಅಸ್ಗರ್‌ಬಾಯಿಯ ಖಾಸಗಿ ಗಾನಮಂದಿರವನ್ನು ನೋಡಿ ಮಧುಸೂದನ ವಿಸ್ಮಿತನಾದ. ಸುಮಾರು ನೂರು ಜನ ಕುಳಿತು ಜಲಸಾ ಕೇಳುವಷ್ಟು ಸಭಾಂಗಣ ವಿಸ್ತಾರವಾಗಿತ್ತು. ವಿದ್ಯುದ್ದೀಪ ಮಂದಪ್ರಕಾಶ ಬೀರುವ ಹಾಗೆ ಅಳವಡಿಸಿದ್ದ ಮಂದಿರದಲ್ಲಿ ಹಾಡಿಕೆಗಾಗಿಯೇ ಒಂದು ಕಡೆ ವೇದಿಕೆ ಏರ್ಪಡಿಸಿತ್ತು. ಕಿನಕಾಪಿನ ಬಟ್ಟೆ ಹೊದಿಸಿದ್ದ ಆ ಪೀಠದ ಮೇಲೆ ಗೌಸು ಹೊದಿಸಿದ ಒಂದು ತಂಬೂರಿ ವಿನಾ ಬೇರೇನೂ ಇರಲಿಲ್ಲ. ಕೆಳಗೆ ಒಂದು

ಪಾರ್ಶ್ವದಲ್ಲಿ ನಾನಾ ಬಗೆಯ ಸಂಗೀತ ವಾದ್ಯಗಳಿದ್ದವು. ನೆಲಕ್ಕೆಲ್ಲಾ ಸೊಗಸಾದ ರತ್ನಗಂಬಳಿ ಹಾಸಿ ಗೋಡೆಗೆ ಸೇರಿದ ಹಾಗೆ ಓರಣವಾಗಿ ಲೋಡುಗಳನ್ನಿಟ್ಟಿದ್ದರು. ವೇದಿಕೆಗೆ ಎದುರಾಗಿ ಎರಡು ಸೋಫಾಗಳನ್ನು ಹಾಕಿತ್ತು. ಮಧ್ಯೆ ಮಧ್ಯೆ ಅಲ್ಲಲ್ಲೇ ಪುಷ್ಪವಾಟಿಕೆಗಳಿದ್ದವು.

ಮಂದಿರವನ್ನು ಪ್ರವೇಶಿಸುತ್ತಲೇ ಮಧುಸೂದನನ ಗಮನವನ್ನು ಮೊದಲು ಸೆಳೆದದ್ದು ವೇದಿಕೆಯ ಹತ್ತಿರ ಇಟ್ಟಿದ್ದ ಬೆಳ್ಳಿಯ ಧೂಪಧಾನಿ. ಅದರಿಂದ ಉಲ್ಲಾಸಕರವಾದ ನವೀನ ಪರಿಮಳವೊಂದು ಮೇಲೇರಿ ಬಂದು ಸುತ್ತಲೂ ಆವರಿಸುತ್ತಿತ್ತು. ಮಧುಸೂದನ ಅನ್ವರ್‌ಬಾಯಿಯ ರಸಿಕತೆಯನ್ನು ಮನಸ್ಸಿನಲ್ಲೇ ಮೆಚ್ಚಿಕೊಂಡ.

ಅವನಿಗಿಂತ ಎರಡು ಹೆಜ್ಜೆ ಮುಂದಾಗಿ ನಡೆದು ಬಂದಿದ್ದ ರೋಷನ್ ಗಾನಮಂದಿರದ ಒಳಬಾಗಿಲಲ್ಲಿ ನಿಂತು ಸೋಫಾದ ಕಡೆ ಕೈತೋರಿಸಿದಳು. ಅವನು ಅದರಲ್ಲಿ ಮಂಡಿಸಿದ ಕೂಡಲೆ ಬಾಗಿಲನ್ನು ಮುಂದಕ್ಕೆ ನೂಕಿ ವೇದಿಕೆಯತ್ತ ಹೋದಳು.

ಒಯ್ಯಾರದಿಂದ ಹೋಗಿ ವೇದಿಕೆ ಹತ್ತಿ ಕುಳಿತ ಅವಳನ್ನು ಮಧುಸೂದನನ ದೃಷ್ಟಿ ಹಿಂಬಾಲಿಸಿತು. ಅವನು ಸ್ವಲ್ಪ ಹೊತ್ತು ಎವೆಯಿಕ್ಕದೆ ಅವಳನ್ನೇ ನೋಡಿದ.

ಹಾವಿನ ಪೊರೆಯನ್ನು ಹೋಲುವಂತಿದ್ದ ನಸುನೀಲಿಬಣ್ಣದ ಟಿಷ್ಯೂಸೀರೆ ಅವರ ಮೈಯೊಳಗಿನ ಮಾಟವನ್ನು ಎತ್ತಿ ತೋರಿಸುತ್ತಿತ್ತು. ನಯವಾಗಿ ಜರತಾರಿ ಕೆಲಸ ಮಾಡಿದ್ದ ಚೌಲಿ ತುಂಬುತೋಳಿನ ಸೊಗಸನ್ನು ಹೆಚ್ಚಿಸುತ್ತಿತ್ತು. ಕಿವಿಗಳಲ್ಲಿ ತೂಗುತ್ತಿದ್ದ ಜುಂಕಿಗಳು ಮುಖಕ್ಕೊಂದು ಅಪೂರ್ವಕಾಂತಿ ಕೊಡುತ್ತಿದ್ದವು. ಝೇಂಕರಿಸುತ್ತಿರುವ ತಂಬೂರಿಯನ್ನು ಹಗುರವಾಗಿ ಎದೆಗೊರಗಿಸಿಕೊಂಡ ಒತ್ತಿನಲ್ಲಿ ಕಂಡೂ ಕಾಣಿಸದಂತೆ ತುಂಬಿ ನಿಂತಿದ್ದ ಎದೆಯ ಲಾವಣ್ಯ ಚಿತ್ತವನ್ನು ಸೆಳೆಯುತ್ತಿತ್ತು.

ಕೋಮಲವಾದ ಕಂಠ ಕೋಮಲತರವಾದ ಶ್ರುತಿಯೊಡನೆ ಲಗ್ನಗೊಂಡು ವಿರಾಜಿಸಲಾರಂಭಿಸಿತು. ರೋಷನ್ ಮಧುವಂತಿರಾಗವನ್ನು ಹಿತವಾಗಿ ಆಲಾಪಿಸಿ ಒಂದು ಖ್ಯಾಲ್ ಹಾಡಿದಳು. ಯಮನ್ ರಾಗದಲ್ಲಿ ಒಂದು ತುಮ್ರಿ ಹಾಡಿದಳು. ತಾನಗಳು ನಯವಾಗಿ ಮೂಡಿಬರುತ್ತಿದ್ದವು. ಅವಳು ಕೃತಿ

ಹಾಡುತ್ತಿದ್ದಾಗ ಮಧುಸೂದನ ಅವಳನ್ನೇ ನೋಡುತ್ತ ತೊಡೆಯ ಮೇಲೆ ಮೆಲ್ಲನೆ ತಾಳ ಹಾಕುತ್ತಿದ್ದ.

ಎರಡು ಕೃತಿಗಳ ಗಾಯನವಾದ ಮೇಲೆ ರೋಷನ್ ಸುಂದರವಾದ ಒಂದು ರಾಗವನ್ನು ಸ್ಫೂರ್ತಿಯಿಂದ ಆಲಾಪಿಸಿ ನಗುಮೊಗದಿಂದ ಅದರಲ್ಲಿ ಒಂದು ಕೃತಿ ಹಾಡಲಾರಂಭಿಸಿದಳು.

ಬೋಲೊ ಬೋಲೊ ಮಧುಸೂದನ।
ತುಮ್ ಮೇರೆ ಮನೋಮೋಹನ॥

ಮಧ್ಯಮ ಶ್ರುತಿಯಲ್ಲಿ ಮಿಶ್ರಪೀಲು ಮನೋಜ್ಞವಾಗಿ ನುಡಿಯುತ್ತಿತ್ತು. ಕೋಮಲವಾದ ಕಂಠದಿಂದ ಹೊಮ್ಮುತ್ತಿದ್ದ ಸಾಹಿತ್ಯ–ತಾನಗಳು ಅವನ ಮನಸ್ಸಿನ ಮೇಲೆ ಮಾದಕವಾದ ಒಂದು ಪರಿಣಾಮವನ್ನುಂಟು ಮಾಡುತ್ತಿದ್ದವು. ತನ್ನಲ್ಲೇ ದೃಷ್ಟಿಲಗ್ನಳಾಗಿ ಅವಳು ಹಾಡುತ್ತಿದ್ದ ಕೃತಿಯ ಸಾಹಿತ್ಯದ ಸುಖ ಮಧುಸೂದನನ ಮನಸ್ಸಿಗಿಳಿಯುವುದಕ್ಕೆ ತಡವಾಗಲಿಲ್ಲ. ಒಂದು ಕ್ಷಣ ಅವಳು ಯಾರನ್ನು ಉದ್ದೇಶಿಸಿ ಹಾಡುತ್ತಿರಬಹುದು ಎಂಬ ಸಂಶಯ ಮೂಡಿತು. ಮನಸ್ಸಿನ ಮೇಲೆ ಯಾವುದೋ ಒಂದು ಶಕ್ತಿ ಮುತ್ತಿಗೆ ಹಾಕುತ್ತಿದೆಯೆಂಬ ಅರಿವು ಅವನಿಗುಂಟಾಗಲು ತಡವಾಗಲಿಲ್ಲ.

ರೋಷನ್ ಬಾಯಿ ಹಾಡು ನಿಲ್ಲಿಸಿ ತುಂಬೂರಿಯನ್ನು ಮೆಲ್ಲನೆ ಕೆಳಗಿಳಿಸಿದಳು. ಮುಖದ ಮೇಲೆ ಅಲ್ಲಲ್ಲೇ ಮುತ್ತಿನಂತೆ ಮೂಡಿದ್ದ ಬೆವರು ಹನಿಗಳನ್ನು ವಸ್ತ್ರದಿಂದ ಒರಸಿಕೊಳ್ಳುತ್ತ, ಮಧುಸೂದನನ ಮುಖ ನೋಡಿ ಮುಗುಳ್ನಕ್ಕಳು.

"ನಿಮಗೆ ಬೇಸರವಾಯಿತೇನೋ?"

"ನನಗೆ ಬೇಸರವೆ? ಚೆನ್ನಾಗಿ ಹೇಳಿದಿರಿ."

"ನೀವು ದೊಡ್ಡ ಗಾಯಕರು. ನನ್ನ ಹಾಡಿಕೆ ಕೇಳಿ ನಿಮಗೆ ನಗು ಬರಬಹುದು."

"ಹಾಗೇನಿಲ್ಲ. ತುಂಬ ಚೆನ್ನಾಗಿ ಹಾಡುತ್ತೀರಿ. ಕಂಠದ ಮಾಧುರ್ಯಕ್ಕೆ ತಕ್ಕಹಾಗೆ ಉತ್ತಮ ಸಾಧನೆಯನ್ನೂ ಮಾಡಿದ್ದೀರಿ."

"ಅದು ನಿಮ್ಮ ಅಭಿಮಾನದ ಮಾತು"

ಎಂದು ಆ ಅಭಿಮಾನವನ್ನು ತನ್ನ ಕಣ್ಣಿಂದಲೇ ತೋರುತ್ತ ವೇದಿಕೆ

ಬಿಟ್ಟಿದ್ದಳು. ಪಕ್ಕದಲ್ಲಿದ್ದ ಒಂದು ಬೀರುವಿನ ಬಾಗಿಲು ತೆಗೆದು ಎರಡು ಗಾಜಿನ ಬಟ್ಟಲುಗಳಲ್ಲಿ ಪಾನೀಯ ತುಂಬಿ ತಂದು ಒಂದನ್ನು ಟೀಪಾಯ್ ಮೇಲಿಟ್ಟು ಇನ್ನೊಂದನ್ನು ಕೈಯಲ್ಲಿ ಹಿಡಿದು ಅವನ ಮುಂದೆ ನಿಂತಳು.

"ತೆಗೆದುಕೊಳ್ಳಿ."

ಹೊಂಬಣ್ಣದ ಆ ಪಾನೀಯವನ್ನು ನೋಡುತ್ತಲೇ ಮಧುಸೂದನನಿಗೆ ಅನುಮಾನ ಬಂದಿತು.

"ಇಲ್ಲ, ನಾನು ಕುಡಿಯುವುದಿಲ್ಲ, ಕ್ಷಮಿಸಿ."

"ಏಕೆ?"

"ಇದು ಮದ್ಯವಲ್ಲವೆ?"

"ಅಲ್ಲ, ದ್ರಾಕ್ಷಾರಸ. ತೆಗೆದುಕೊಳ್ಳಿ."

"ನನಗೆ ಇದರ ಅಭ್ಯಾಸವಿಲ್ಲ."

"ಒಂದು ಸಲ ತೆಗೆದುಕೊಂಡರೆ ತಾನೇ ಅಭ್ಯಾಸವಾಗುತ್ತದೆ."

"ನನಗೆ ಬೇಡ."

"ನಾನು ಪ್ರೀತಿಯಿಂದ ಕೊಡುತ್ತಿರುವುದನ್ನು ಸ್ವೀಕರಿಸಬಾರದೆ?"

ಎಂದು ಮೊಣಕಾಲೂರಿ ಮುಂದೆ ಕುಳಿತಳು. ಅವಳ ಧ್ವನಿಯಲ್ಲಿ ದೈನ್ಯ ತುಂಬಿತ್ತು. ಮಧುಸೂದನ ಅವಳ ಮುಖವನ್ನು ಒಂದು ಕ್ಷಣ ದಿಟ್ಟಿಸಿ ನೋಡಿದ. ಕೇವಲ ಒಂದು ಘಂಟೆಯ ಹಿಂದೆ ತನಗೆ ಪರಿಚಯವಾದ ಆಕೆ ಏನೂ ಅರಿಯದ ಮುಗ್ಧ ತರುಣಿಯಲ್ಲವೆಂಬುದು ಥಟ್ಟನೆ ಅವನಿಗೆ ಗೋಚರವಾಯಿತು. ರೋಷನ್ ಮೋಹವಶಳಾಗಿದ್ದಳು; ಅವಳ ಮುಖದಲ್ಲಿ ಉದ್ವೇಗ ಕೆತ್ತಿತ್ತು; ಎದೆಯ ಏರಿಳಿತ ಅವಳ ಮನಸ್ಸಿನಲ್ಲಿ ಕಡೆಯುತ್ತಿದ್ದ ಬಯಕೆಗೆ ಸಾಕ್ಷಿಯಾಗಿತ್ತು. ಅನುನಯದಿಂದ ರತಿವಿಲಾಸಕ್ಕೆ ಆಹ್ವಾನ ನೀಡುವ ರೂಪಸಿಯಾಗಿ ಅವಳು ಕಂಡಳು. ಮರುಗಳಿಗೆಯೇ ಅವಳು ಪಕ್ಕದಲ್ಲಿ ಕುಳಿತು ತನ್ನ ನಳಿತೋಳನ್ನು ಅವನ ಕುತ್ತಿಗೆಗೆ ಬಳಸಿ ಪಾನಪಾತ್ರೆಯನ್ನು ಮುಖದ ಮುಂದೆ ಹಿಡಿದಳು.

"ಕುಡಿಯಿರಿ, ಪ್ರಿಯಾ."

ಮಾದಕವಾದ ಅವಳ ತನುಗಂಪು ಅವನ ದೇಹವನ್ನು ವ್ಯಾಪಿಸುತ್ತಿತ್ತು;

ಕೋಮಲವಾದ ಅವಳ ಅಂಗಸ್ಪರ್ಶ ಚಿತ್ತವನ್ನು ಅಲ್ಲಕಲ್ಲೋಲ ಮಾಡುತ್ತಿತ್ತು ; ಲಲ್ಲೆವಾತುಗಳನ್ನು ನುಡಿಯುತ್ತಿದ್ದ ಅರೆದೆರೆದ ಅವಳ ಕೆಂದುಟಿ ಅಧರ ಸುಧೆಯನ್ನೀಂಟಿಸಲು ಕಾತರವಾಗಿ ಕಾದಿತ್ತು. ಆವರಿಸಿ ಬರುತ್ತಿದ್ದ ಮೋಹಪ್ರವಾಹದಲ್ಲಿ ಮನಸ್ಸು ಕೊಚ್ಚಿಹೋಗುವಂತಾಗಿ ಮಧುಸೂದನನ ಧೃತಿ ಕದಲಿತು.

ಒಂದೇ ಕ್ಷಣ ಆ ವಿಸ್ಮೃತಿಗೆ ಸಿಕ್ಕಿದ್ದವನು ಇದ್ದಕ್ಕಿದ್ದ ಹಾಗೆ ಜಾಗೃತನಾದ. ಕಡಿವಾಣ ಕಿತ್ತುಕೊಂಡು ನಾಗಾಲೋಟದಿಂದ ಓಡುತ್ತಿರುವ ಜೂಜಿನ ಕುದುರೆಯನ್ನು ಯಾವುದೋ ಅಗೋಚರವಾದ ಶಕ್ತಿ ತಡೆದು ನಿಲ್ಲಿಸುವಂತೆ ಕೈಮೀರುತ್ತಿದ್ದ ಚಿತ್ತವನ್ನು ಯಾವುದೋ ತಡೆ ಹಿಡಿಯಿತು. ಮೈಗೆ ಮೈ ಒತ್ತಿ ಕುಳಿತಿದ್ದ ಹೆಣ್ಣನ್ನು ತಟಕ್ಕನೆ ದೂರ ತಳ್ಳಿ ಮೇಲೆಕ್ಕೆದ್ದು ನಿಂತ. ತಳ್ಳಿದ ರಭಸಕ್ಕೆ ರೋಷನ್ ಮಾರು ದೂರ ಹೋಗಿ ಬಿದ್ದಳು. ಅವಳ ಕೈಯಲ್ಲಿದ್ದ ಪಾನಪಾತ್ರೆ ಅಷ್ಟು ದೂರ ಹಾರಿಹೋಗಿ ರತ್ನಗಂಬಳಿಯ ಮೇಲೆ ಬೋರಲಾಗಿ ಬಿದ್ದಿತು. ನೆಲಕ್ಕುರುಳಿ ಭಯಭ್ರಾಂತಳಾದ ಅವಳನ್ನು ಮಧುಸೂದನ ಒಮ್ಮೆ ತಿರಸ್ಕಾರ ದೃಷ್ಟಿಯಿಂದ ನೋಡಿ, ಸರಸರನೆ ಹೆಜ್ಜೆಹಾಕುತ್ತ ಬಾಗಿಲು ತೆಗೆದುಕೊಂಡು ಹೊರಟುಬಿಟ್ಟ.

ವಾಮನರಾಯರ ಮನೆ ತಲಪಿ ತನ್ನ ರೂಮನ್ನು ಹೊಕ್ಕ ಮಧುಸೂದನನ ಮನಸ್ಸು ವಿವಿಧ ಭಾವನೆಗಳ ಹುತ್ತವಾಯಿತು. ಹಾಗೆಯೇ ಮಂಚದ ಮೇಲುರುಳಿಕೊಂಡ. ಸಂಜೆಯಿಂದ ನಡೆದ ಘಟನೆಗಳೆಲ್ಲಾ ಮನಸ್ಸಿನಲ್ಲಿ ಪುನರಾವರ್ತನವಾಗತೊಡಗಿದವು. ಕೈಮಿಂಚಿ ಹೋಗಲಿದ್ದ ಒಂದು ವಿಷಮ ಸನ್ನಿವೇಶದಿಂದ ಪಾರಾಗಿ ಬಂದ ಬಗೆಯನ್ನು ನೆನಸಿಕೊಂಡು ಅವನ ಮೈ ಒಂದು ಕ್ಷಣ ನಡುಗಿತು.

ರೋಷನ್ ತಾನಾಗಿಯೇ ಬಯಸಿ ಈ ಸನ್ನಿವೇಶವನ್ನು ಬರಮಾಡಿಕೊಂಡಿದ್ದಳೆಂಬುದರಲ್ಲಿ ಸ್ವಲ್ಪವೂ ಅನುಮಾನವಿರಲಿಲ್ಲ. ಮೊದಲಿನಿಂದ ಕೊನೆಯವರೆಗೂ ಅವಳು ತನ್ನಲ್ಲಿ ನಡೆದುಕೊಂಡಿದ್ದ ರೀತಿ ಇದನ್ನು ದೃಢಪಡಿಸುತ್ತಿತ್ತು. ಮಗಳ ಹಂಚಿಕೆಯಲ್ಲಿ ತಾಯಿ ಭಾಗಿಯಾಗಿದ್ದಳೋ ಇಲ್ಲವೋ ಹೇಳಲು ಬರುವಂತಿರಲಿಲ್ಲ. ಅನ್ವರ್‌ಬಾಯಿಗೆ ತಿಳಿಯದೆಯೆ ರೋಷನ್ ಇದಕ್ಕೆ ಪ್ರವರ್ತಿಸಿದ್ದರೂ ಇರಬಹುದು. ಅವಳ ರೂಪುವಿಲಾಸಗಳಿಗೆ ಮಾರುಹೋಗಿದ್ದ ತನ್ನ ಮನಸ್ಸನ್ನು ಯಾವುದೋ ಶಕ್ತಿ ಎಚ್ಚರಿಸಿ ತಡೆದಿತ್ತು.

ಆ ಶಕ್ತಿ ಯಾವುದು ? ಯಾವ ಚೇತನ ತನ್ನನ್ನು ಆ ಕಮರಿಯ ತುದಿಯಲ್ಲಿ ಕೈಹಿಡಿದು ತಡೆದದ್ದು ? ಆ ರೂಪಸರ್ಪಿಣಿಯ ದವಡೆಯಿಂದ ಪಾರು ಮಾಡಿದ್ದು ಯಾವುದು ? ಲಲಿತನ ಪ್ರೇಮವೆ ? ಅಥವಾ ಪಾಪದ ಭೀತಿಯೆ ? ಯಾವುದದು ?

ಮಧುಸೂದನನ ಮನಸ್ಸಿನಲ್ಲಿ ಪ್ರಶ್ನೆಗಳ ಮಾಲೆಯೇ ಎದ್ದಿತು.

ಲಲಿತನ ಸ್ಮರಣೆಯಾಗಿ ಆ ಚೇತೋಹಾರಿಣಿ ಚಿತ್ರಫಲಕದ ಮೇಲೆ ಸುಳಿದಳು. ಆ ಮಂಗಳಮೂರ್ತಿಯ ಕಾಲ್ಪನಿಕ ದರ್ಶನ ತುಂಬಿದ ಹುಣ್ಣಿಮೆಯ ಬೆಳುದಿಂಗಳಂತೆ ಅವನ ಕ್ಷುಭಿತ ಹೃದಯಕ್ಕೆ ಆಹ್ಲಾದಕರ ವೆನ್ನಿಸಿತು. ತನ್ನ ಶುಭ ಕಾಂತಿಯಿಂದ ಬಾಳನ್ನು ಬೆಳಗಿಸುತ್ತಿದ್ದ ಆ ನಂದಾ ದೀಪದೊಡನೆ ರೋಷನ್ನಳ ಮೋಹಾಕರ್ಷಣೆಯ ವಿದ್ಯುಲ್ಲತೆಯಂಥ ಬೆಳಕನ್ನು ಹಾಗೆಯೇ ಹೋಲಿಸಿ ನೋಡಿದ. ಒಂದು ಆತ್ಮವನ್ನು ಸಂತೈಸಿ ಕೈಹಿಡಿದು ಕರೆದೊಯ್ಯುವ ತನಿಬೆಳಕಾದರೆ, ಇನ್ನೊಂದು ಬಂದೆರಗಿದೊಡನೆಯೇ ಎಲ್ಲವನ್ನೂ ಸುಟ್ಟು ಕರಿಕುಗಾಣಿಸುವ ಕಿಚ್ಚು.

ಮಧುಸೂದನ ಈ ಅನುಭವದಿಂದ ಕಂಪಿಸಿದ.

ಬೆಳಗ್ಗೆ ಏಳುತ್ತಿದ್ದ ಹಾಗೆಯೇ ಅವನಿಗೆ ಇನ್ನೊಂದು ಅಚ್ಚರಿ ಸಿದ್ಧವಾಗಿತ್ತು.

ಉಪಾಹಾರ ತೆಗೆದುಕೊಳ್ಳುತ್ತಿದ್ದಾಗ ಆಳು ಬಂದು ಒಂದು ಕಾದಗವನ್ನು ಮುಂದಿಟ್ಟು ಹೋದ. ಮಧುಸೂದನ ಲಕೋಟೆಯನ್ನು ತಿರುಗಿಸಿ ತಿರುಗಿಸಿ ನೋಡಿದ. ಯಾರದೆಂಬುದು ಬೇಗ ಗೊತ್ತಾಗುವ ಹಾಗಿರಲಿಲ್ಲ. ಕಾಗದದಿಂದ ಲಘುವಾದ ಪರಿಮಳ ಸೂಸುತ್ತಿತ್ತು. ಕವರನ್ನೊಡೆದು ಒಳಗಿದ್ದ ತಿಳುಹಸುರು ಬಣ್ಣದ ಕಾಗದವನ್ನು ಈಚೆಗೆಳೆದುಕೊಂಡು ಅದರ ಮೇಲೆ ದೃಷ್ಟಿ ಹರಿಸಿದ.

" ಹೃದಯೇಶ,

ಅಭಿಮಾನದಿಂದ ನಿಮ್ಮನ್ನು ಬರಮಾಡಿಕೊಂಡು ಮನಃಪೂರ್ವಕವಾಗಿ ನಿಮಗರ್ಪಿಸಿದ ನನ್ನ ಪ್ರೇಮವನ್ನು ತಿರಸ್ಕರಿಸಿ ಹೊರಟು ಹೋದಿರಿ. ನಿಮ್ಮ ಮೇಲೆ ನನಗೆ ಕೋಪವಿಲ್ಲ. ನನಗೆ ನಿಮ್ಮಲ್ಲಿರುವ ಮೋಹವನ್ನು ನಿಮ್ಮ ವರ್ತನೆ ಯಿಂದಲೇ ಹೆಚ್ಚಿಸಿರುವಿರಿ. ಸಂಗೀತ ಕಚೇರಿಯಲ್ಲಿ ನಿಮ್ಮನ್ನು ಕಂಡಾಗಲೇ ನನ್ನ ಮನಸ್ಸು ನಿಮ್ಮನ್ನು ಸೇರಿತು. ನಿಮ್ಮ ಗಾನವನ್ನು ಕೇಳಿದ ಮೇಲಂತೂ

ನಾನು ಪೂರ್ತಿ ಮುಗ್ಧಳಾಗಿಹೋದೆ. ನಿಮ್ಮನ್ನು ನನ್ನವರನ್ನಾಗಿಸಿಕೊಳ್ಳ ಬೇಕೆಂಬ ವಾಂಛೆ ಬಲಿಯಿತು. ನಿಮ್ಮ ಸಮಾಗಮಕ್ಕೆ ಕಾತರಳಾದೆ. ಜೀವ ನಿಮ್ಮ ಅಂಗಸುಖಕ್ಕೆ ಹಾತೊರೆಯಿತು. ನಿಮ್ಮನ್ನು ನೋಡದೆ ಒಂದು ದಿನವೂ ಬದುಕಲಾರೆನೆನ್ನಿಸಿತು. ತಾಯಿಗೆ ಹೇಳಿ ಒತ್ತಾಯ ಮಾಡಿ ನಿಮ್ಮನ್ನು ಕರೆಸಿ ಕೊಂಡೆ. ನನ್ನ ಪ್ರೇಮವನ್ನು ನಿಮ್ಮ ಪದತಲದಲ್ಲರ್ಪಿಸಿದೆ. ಆದರೆ ಅದು ನಿಮಗೆ ಬೇಡವಾಯಿತು.

"ನನ್ನ ಕೈಹಿಡಿಯಲು ಸದಾ ಸಿದ್ಧರಾಗಿರುವ ಹತ್ತಾರು ಮಂದಿಯ ಸ್ನೇಹಹಸ್ತವನ್ನು ಒಂದೇ ಸಮನಾಗಿ ನಿರಾಕರಿಸುತ್ತ ಬಂದಿದ್ದ ನನ್ನ ಮನಸ್ಸು ನಿಮ್ಮಲ್ಲಿಂತು ನೆಲೆಗೊಂಡಿತೋ ನಾನರಿಯೆ. ನಿಮ್ಮ ರೂಪವೆ? ನಿಮ್ಮ ವಿದ್ವತ್ತೆ? ನಿಮ್ಮ ಗಾನಕೌಶಲವೆ? ನಿಮ್ಮ ಶೀಲಶ್ರೀಮಂತಿಕೆಯೆ? – ನನ ಗೊಂದೂ ಅರ್ಥವಾಗುವುದಿಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ: ನಿಮ್ಮನ್ನು ಕಂಡೊಡನೆಯೇ ನನ್ನ ಮನಸ್ಸು ನಿಮ್ಮಲ್ಲಿ ಲಗ್ನವಾಯಿತು. ನೀವೆಷ್ಟೇ ತಿರಸ್ಕರಿ ಸಿದರೂ ಅದನ್ನು ನಾನು ಕಿತ್ತುಕೊಳ್ಳಲಾರೆ; ನನ್ನ ಜೀವವಿರುವವರೆಗೂ ಈ ಆಸೆಯನ್ನು ತೊರೆಯಲಾರೆ. ಎಂದಾದರೂ ಒಂದು ದಿನ ನಿಮ್ಮನ್ನು ಕೂಡುವೆನೆಂಬ ಆಸೆ ನನಗಿದೆ. ಎಂದಾದರೂ ಒಂದು ದಿನ ನಿಮಗೆ ಕರುಣೆ ಬಂದಂದು, ಈ ದಾಸಿಯ ನೆನಪಾದಂದು, ಜೀವಕ್ಕೆ ಬೇಸರವಾದಂದು ನನ್ನಲ್ಲಿಗೆ ಬನ್ನಿ. ಆಗ ನಿಮ್ಮನ್ನು ಅಪ್ಪಿ ಸಂತೈಸಲು ಈ ಜೀವ ಬಯಸಿ ಕಾದಿರುತ್ತದೆ. ಆಗಲಾದರೂ ನನ್ನ ಬೆಂದೆದೆಗೆ ಅಮೃತಸೇಚನೆ ಮಾಡಿ. ಅಲ್ಲಿಯವರೆಗೂ ಈ ಒಲುವೆಯನ್ನು ತಡೆದು ಹಿಡಿದಿರುತ್ತೇನೆ.

ನಿಮಗಾಗಿ ಸದಾ ಕಾದಿರುವ
—ರೋಷನ್."

ಕಾಗದ ಮಧುಸೂದನ ಭಾವಿಸಿದ್ದಕ್ಕಿಂತಲೂ ಆಳವಾಗಿತ್ತು. ಅದನ್ನೋದಿ ಅವನ ಮನಸ್ಸು ಉದ್ವೇಗಗೊಂಡಿತು. ಒಂದು ಗಳಿಗೆ ಏನೂ ತೋರದೆ ಅವನು ಸ್ತಬ್ಧನಾಗಿ ಕುಳಿತುಬಿಟ್ಟ.

ಎಷ್ಟು ಹೊತ್ತು ಹೀಗೆ ಕುಳಿತಿದ್ದನೋ ಅವನಿಗೇ ತಿಳಿಯದು. ಕೊನೆಗೆ ಯಾವುದೋ ನಿರ್ಧಾರ ಮೂಡಿ ತೂಗುತ್ತಿದ್ದ ಮನಸ್ಸು ಸ್ತಿಮಿತಕ್ಕೆ ಬರಲು ಕಾಗದವನ್ನು ನೂರಾರು ಚೂರುಗಳಾಗಿ ಹರಿದು ಕಿಟಕಿಯ ಬಳಿ ನಿಂತು ಕೆಳ

ಗೆಸೆದುಬಿಟ್ಟ. ರೋಷನಳ ಆ ಛಿದ್ರ ಪ್ರೇಮ ಪತ್ರ ನೂರೆಂಟು ಚೂರುಗಳಾಗಿ ಹಾರಿ ಹಗಲಿನ ಆ ಎಳೆಬಿಸಿಲಿನ ಗಾಳಿಯಲ್ಲಿ ತೇಲುತ್ತ ಆಡುತ್ತ ನಿಧಾನವಾಗಿ ಕೆಳಗಿಳಿದು ನೆಲ ಮುಟ್ಟಿತು.

ಅದನ್ನೇ ನೆಟ್ಟದಿಟ್ಟಿಯಿಂದ ನೋಡುತ್ತ ನಿಂತಿದ್ದ ಮಧುಸೂದನನಿಗೆ ಅದೇ ಗಳಿಗೆಯಲ್ಲಿ ಇನ್ನೊಂದು ಓಲೆ ತನಗಾಗಿ ಮೇಲಕ್ಕೆ ಬರುತ್ತಿದೆಯೆಂಬುದರ ಅರಿವಾಗಲಿಲ್ಲ.

ಆಳು ಟ್ರೇ ಮೇಲೆ ತಂದಿತ್ತ ಟೆಲಿಗ್ರಾಂ ನೋಡಿ ಎದೆ ಹಾರಿಹೋಯಿತು. ಸುಬ್ಬಕೃಷ್ಣ ಮೈಸೂರಿನಿಂದ ಎಕ್ಸ್‌ಪ್ರೆಸ್ ತಂತಿ ಕೊಟ್ಟಿದ್ದ.

"ತಾಯಿಯವರಿಗೆ ತುಂಬ ಕಾಹಿಲೆ. ಏನು ಕಾರ್ಯಕ್ರಮವಿದ್ದರೂ ರದ್ದುಮಾಡಿ ತಕ್ಷಣ ಹೊರಡುವುದು – ಸುಬ್ಬಕೃಷ್ಣ."

ಮಧುಸೂದನನಿಗೆ ಮೈಯಲ್ಲಿದ್ದ ಚೇತನವೆಲ್ಲಾ ಉಡುಗಿ ಹೋದಂತಾಯಿತು. ಹಾಗೆಯೇ ಮಂಚದ ಮೇಲೆ ಕುಕ್ಕರಿಸಿಕೊಂಡು ಬಿಟ್ಟ.

ಸುದ್ದಿ ಕೇಳಿ ವಾಮನರಾಯರು ತುಂಬ ವ್ಯಾಕುಲಗೊಂಡರು.

ಮಧುಸೂದನನನ್ನು ಮುಂಬಯಿಯಲ್ಲೇ ನಾಲ್ಕಾರು ದಿನ ನಿಲ್ಲಿಸಿಕೊಳ್ಳಬೇಕೆಂದು ಅವರು ಬಯಸಿದ್ದರು. ಅವನನ್ನು ಊರಲ್ಲೆಲ್ಲಾ ಸುತ್ತಿಸಿಕೊಂಡು ಬಂದು ಅನೇಕ ಗಣ್ಯರ ಪರಿಚಯಮಾಡಿಸಬೇಕೆಂದಿದ್ದರು. ಅವನ ಗೌರವಾರ್ಥವಾಗಿ ಒಂದು ಭೋಜನಕೂಟ ಏರ್ಪಡಿಸಿ ನಗರದ ಕಲಾವಿದರನ್ನೂ ಸಂಗೀತ ವಿದ್ವಾಂಸರನ್ನೂ ಆಹ್ವಾನಿಸಬೇಕೆಂದಿದ್ದರು. ಜೊತೆಗೆ ಕನ್ನಡ ಸಂಘ ಬೇರೆ ಯಾವ ಯಾವುದೋ ಕಾರ್ಯಕ್ರಮಗಳನ್ನು ಸಿದ್ಧಪಡಿಸಿಕೊಳ್ಳುತ್ತಿತ್ತು.

ಆದರೆ ಕೆಟ್ಟ ಸುದ್ದಿ ಬೆಕ್ಕಿನ ಹಾಗೆ ಅಡ್ಡ ಬಂದು ಎಲ್ಲವನ್ನೂ ಹದಗೆಡಿಸಿಬಿಟ್ಟಿತ್ತು.

ರಾಯರು ನಿರ್ವಿಣ್ಣರಾಗಿ ಕುಳಿತರು. ಒಂದು ಔತಣವನ್ನೂ ಮಾಡದೆ ಮಧುಸೂದನನನ್ನು ಊರಿಗೆ ಕಳಿಸಬೇಕಾದ ಪರಿಸ್ಥಿತಿ ಅವರನ್ನು ತುಂಬ ಪೇಚಾಟಕ್ಕೆ ಸಿಕ್ಕಿಸಿತು. ಆದರೆ ಬೇರೆ ಉಪಾಯವಿರಲಿಲ್ಲ.

ಅಂದೇ ಬೆಂಗಳೂರಿಗೆ ಹೊರಡುವ ವಿಮಾನದಲ್ಲಿ ಒಂದು ಸೀಟು ಬುಕ್ ಮಾಡಿಸಿ ಮಧುಸೂದನನನ್ನು ಕಳಿಸುವ ಏರ್ಪಾಡು ಮಾಡಿದರು. ನಿಲ್ದಾಣದಲ್ಲಿ

ವಾಮನರಾಯರು, ರಾಮಶರ್ಮರು ಮುಂತಾಗಿ ಮೂವರು ನಾಲ್ವರು ಅಭಿ ಮಾನಿಗಳಲ್ಲದೆ ಬೇರೆ ಯಾರೂ ಇರಲಿಲ್ಲ. ಮಧುಸೂದನ ಹೊರಡುವ ಸಮಾ ಚಾರವೇ ಯಾರಿಗೂ ಸರಿಯಾಗಿ ತಿಳಿದಿರಲಿಲ್ಲ.

ಹೊಸ ಪರಿಚಯದ ಗೆಳೆಯರಾರನ್ನೂ ನೋಡದೆ, ಯಾರಿಂದಲೂ ಬೀಳ್ಕೊಳ್ಳದೆ ಇದ್ದಕ್ಕಿದ್ದ ಹಾಗೆ ಅವನು ಹೊರಟುಬಿಟ್ಟ.

## ೩೨

ಮಧುಸೂದನ ಊರು ಬಿಟ್ಟು ಹೊರಟಾಗ ವೆಂಕಮ್ಮನವರು ತಕ್ಕಮಟ್ಟಿಗೆ ಆರೋಗ್ಯವಾಗಿಯೇ ಇದ್ದರು. ಆಗಿನ ಅವರ ದೇಹಸ್ಥಿತಿ ಹೀಗೇ ಎಂದು ಹೇಳುವ ಹಾಗಿಲ್ಲದಿದ್ದರೂ ಅಂಥ ಆತಂಕಕ್ಕೆ ಅವಕಾಶವಿರಲಿಲ್ಲ. ಹಾಗಿದ್ದರೆ ಅವನು ಪ್ರಯಾಣ ಮಾಡುತ್ತಲೂ ಇರಲಿಲ್ಲ. ಏನೋ ಒಮ್ಮೊಮ್ಮೆ ಎದೆನೋವು ಕಾಣಿಸಿ ಕೊಳ್ಳುತ್ತಿತ್ತೇ ವಿನಾ ಹೆಚ್ಚಿನ ರೋಗದಿಂದ ಅವರು ಯಾವಾಗಲೂ ಹಾಸಿಗೆ ಮಲಗಿದವರೇ ಅಲ್ಲ. ಹೀಗೆ ಬಂದು ಹಾಗೆ ಹೋಗುತ್ತಿದ್ದ ವೇದನೆಯನ್ನು ವೆಂಕಮ್ಮನವರೇ ಲಕ್ಷಿಸುತ್ತಿರಲಿಲ್ಲ. ಅಷ್ಟಾದರೂ ಮಧುಸೂದನ ಅವರನ್ನು ಹೆಚ್ಚಾಗಿ ಆಯಾಸಪಡಿಸಲಿಚ್ಛಿಸದೆ ಎಲ್ಲ ಕೆಲಸವನ್ನೂ ಮನೆಗೆಲಸದಾಕೆ ನೋಡಿ ಕೊಂಡು ಹೋಗಬೇಕೆಂದು ಹೇಳುತ್ತಿದ್ದ. ಹಾಗೆಯೇ ನಡೆಯುತ್ತಲೂ ಇತ್ತು. ಯೋಗಕ್ಷೇಮದ ವಿಚಾರವಾಗಿ ಮುಂಜಾಗರೂಕತೆ ಇರುವುದು ವಾಸಿಯೆಂದು ತಾನಿಲ್ಲದ ವೇಳೆಯಲ್ಲಿ ಜವಾಬ್ದಾರಿಯನ್ನು ಸುಬ್ಬಕೃಷ್ಣನ ಮೇಲೆ ಹಾಕಿ ಹೋಗಿದ್ದ. ಮೈಸೂರು ಬಿಟ್ಟ ಮೇಲೆ ತಾಯಿಯ ದೇಹಸ್ಥಿತಿಯಲ್ಲಿ ವಾಸ್ತವವಾಗಿ ಏನು ಬದಲಾವಣೆಯಾಗಿತ್ತೆಂಬುದು ಅವನಿಗೆ ತಿಳಿಯುವ ಹಾಗಿರಲಿಲ್ಲ.

ಮನಸ್ಸು ವಿಮಾನದ ವೇಗವನ್ನೂ ಮೀರಿ ಹಾರುತ್ತಿತ್ತು. ಏನೇನೋ ಕೆಟ್ಟ ಯೋಚನೆಗಳು ಬೇಡವೆಂದರೂ ಬಂದು ಮನಸ್ಸನ್ನು ಮುತ್ತುತ್ತಿದ್ದವು. ಅವನ ಮನಸ್ಸಿನ ಆತುರಕ್ಕೆ ವಿಮಾನದ ವೇಗ ಒಡ್ಡರ ಬಂಡಿಗಿಂತಲೂ ಕಡೆ ಯಾಗಿ ಕಂಡಿತು.

ಮಧ್ಯಾಹ್ನ ಬೆಂಗಳೂರು ತಲಪಿದ ಕೂಡಲೆ, ರೈಲಿಗಾಗಿ ಕಾಯದೆ ಟ್ಯಾಕ್ಸಿ ಮಾಡಿಕೊಂಡು ನೇರವಾಗಿ ಮೈಸೂರಿಗೆ ಹೊರಟುಬಿಟ್ಟ.

ಮೈಸೂರು ತಲಪಿದಾಗ ಸಂಜೆ ಏಳು ಘಂಟೆ. ಕಾರು ಒಂಟಿಕೊಪ್ಪಲನ್ನು ಸಮೀಪಿಸುತ್ತಿದ್ದಾಗ ಮಧುಸೂದನನ ಎದೆ ಒಂದೇ ಸಮನೆ ತುಡಿದುಕೊಳ್ಳು ವುದಕ್ಕಾರಂಭಿಸಿತು. ಯಾವುದಕ್ಕಾಗಿ ಇಷ್ಟು ದೂರದಿಂದ ಹಕ್ಕಿಯಂತೆ ಹಾರಿ ಬಂದಿದ್ದನೋ ಆ ವಸ್ತುವನ್ನು ಸಮೀಪಿಸುತ್ತಿದ್ದಾಗ ಮನಸ್ಸಿನ ಧೃತಿ ಕದಲು ವುದಕ್ಕಾರಂಭವಾಗಿತ್ತು. ತಾಯಿ ಹೇಗಿರುವರೋ, ಮನೆಯ ಮುಂದೆ ಯಾವ ದೃಶ್ಯವನ್ನು ಕಾಣುವೆನೋ ಎಂದು ಅವನು ವಿಹ್ವಲನಾದ.

ಆದರೆ ದೂರದಿಂದ ನೋಡಿದಾಗ ಮನೆ ಶಾಂತವಾಗಿ ಕಂಡಿತು. ಆ ಮೌನವನ್ನು ನೋಡಿಯೂ ಅವನು ಅಧೀರನಾದ.

ಕಾರು ನಿಲ್ಲುತ್ತಿದ್ದ ಹಾಗೆಯೇ ಒಳಗಣಿಂದ ಸುಬ್ಬಕೃಷ್ಣ ಬಂದು ಕಾರಿನ ಬಾಗಿಲನ್ನು ತೆಗೆದ. ಮಧುಸೂದನ ಅವನ ಮುಖವನ್ನು ದಿಟ್ಟಿಸಿ ನೋಡಿದ. ತಾಯಿ ಹೇಗಿದ್ದಾರೆಂದು ಕೇಳುವ ಧೈರ್ಯವೂ ಅವನಿಗೆ ಬರಲಿಲ್ಲ. ಸುಬ್ಬ ಕೃಷ್ಣನ ಮುಖವೂ ಕಂಗೆಟ್ಟಿತ್ತು. ಯಾವ ಮಾತೂ ಆಡದೆ ಮೌನವಾಗಿ ಒಳಗೆ ನಡೆದ ಅವನನ್ನು ಮಧುಸೂದನ ಸದ್ದಿಲ್ಲದೆ ಹಿಂಬಾಲಿಸಿದ.

ಹಜಾರದಲ್ಲಿ ಒಂದುಕಡೆ ಹಾಸಿಗೆ ಹಾಕಿ ವೆಂಕಮ್ಮನವರನ್ನು ಮಲಗಿ ಸಿದ್ದರು. ನಿಸ್ತೇಜರಾಗಿ ಎದೆಯ ಮೇಲೆ ಕೈಯಿಟ್ಟುಕೊಂಡು ಮಲಗಿದ್ದ ತಾಯಿ ಯನ್ನು ಕಂಡು ಮಧುಸೂದನನಿಗೆ ದುಃಖ ಉಕ್ಕಿ ಬಂದಿತು.

"ಅಮ್ಮಾ!"

ಎನ್ನುತ್ತ ಒಂದೇ ಏಟಿಗೆ ಹಾರಿ ಹೋಗಿ ಹತ್ತಿರ ಕುಳಿತುಕೊಂಡ.

"ಗಾಬರಿಯಾಗಬೇಡ, ಏನೂ ಭಯವಿಲ್ಲ."

ಹತ್ತಿರ ಕುಳಿತಿದ್ದ ದಾಸರು ಧೈರ್ಯ ಹೇಳುತ್ತಿದ್ದರು.

"ಏನಾಯಿತು, ಅಮ್ಮನಿಗೆ ಏನಾಯಿತು?"

ಮಧುಸೂದನನ ಕಂಠ ಗದ್ಗದಿಸುತ್ತಿತ್ತು. ಹಸುಳೆಯಂತೆ ಮುಖವೆತ್ತಿ ಒಮ್ಮೆ ದಾಸರನ್ನು, ಒಮ್ಮೆ ಸುಬ್ಬಕೃಷ್ಣನನ್ನು ನೋಡಿ ಕೇಳಿದ.

ಸುಬ್ಬಕೃಷ್ಣ ನಡೆದದ್ದೆಲ್ಲವನ್ನೂ ಸಾಂಗವಾಗಿ ವಿವರಿಸಿದ.

—ಹಿಂದಿನ ದಿವಸದವರೆಗೂ ವೆಂಕಮ್ಮನವರು ಸ್ವಸ್ಥವಾಗಿಯೇ ಇದ್ದರು.

ಬೆಳಗ್ಗೆ ಸುಬ್ಬಕೃಷ್ಣ ಮಾಮೂಲಿನಂತೆ ಬಂದು ಯೋಗಕ್ಷೇಮ ವಿಚಾರಿಸಿ ಕೊಂಡು ಹೋಗಿ ಆಳಿನ ಕೈಯಲ್ಲಿ ಅಡುಗೆಗೆ ತರಕಾರಿ ಕಳಿಸಿ ಕೊಟ್ಟಿದ್ದ. ಮಧ್ಯಾಹ್ನ ಅವನು ಮನೆಯಲ್ಲಿ ಊಟಮಾಡಿ ಕುಳಿತಿದ್ದಾಗ ಕೆಲಸದಾಕೆ ಓಡಿ ಬಂದು ವೆಂಕಮ್ಮನವರು ಎದೆನೋವೆಂದು ಕಷ್ಟಪಡುತ್ತಿರುವ ಸಂಗತಿ ತಿಳಿಸಿದ್ದರು. ಸುಬ್ಬಕೃಷ್ಣ ಡಾಕ್ಟರನ್ನು ಕರೆತರಲು ಆಳನ್ನು ತಕ್ಷಣವೇ ಫಾರ್ಮಸಿಗೆ ಅಟ್ಟಿ, ತಾನು ಸೈಕಲ್ ಹಾಕಿಕೊಂಡು ಧಾವಿಸಿ ಬಂದಿದ್ದ. ಅವನು ಬಂದು ನೋಡಿದಾಗ ವೆಂಕಮ್ಮನವರು ಕೈಯಿಂದ ಎದೆ ಹಿಡಿದುಕೊಂಡು ಕಣ್ಣು ಬಾಯಿ ಬಿಡುತ್ತ ಮಲಗಿ ವಿಲಿವಿಲಿ ಒದ್ದಾಡುತ್ತಿದ್ದರು.

ಅಷ್ಟು ಹೊತ್ತಿಗೆ ಫಾರ್ಮಸಿಯ ಡಾಕ್ಟರೂ ಬಂದು ಪರೀಕ್ಷಿಸಿದರು. ಹೃದಯದ ಕ್ರಿಯೆ ಅಸ್ತವ್ಯಸ್ತವಾಗಿತ್ತು. ತಕ್ಷಣ ಆಸ್ಪತ್ರೆಗೆ ಕಳಿಸದಿದ್ದರೆ ಪ್ರಾಣಾಪಾಯವಾಗುವ ಸಂಭವವಿದೆಯೆಂದು ಡಾಕ್ಟರು ಎಚ್ಚರಿಸಿ ಒಂದು ಇಂಜೆಕ್ಷನ್ ಕೊಟ್ಟು ಔಷಧಿ ಕಳಿಸುವುದಾಗಿ ಹೇಳಿ ಹೊರಟುಹೋದರು. ಆದರೆ ಎಷ್ಟು ಕೇಳಿಕೊಂಡರೂ ವೆಂಕಮ್ಮನವರು ಆಸ್ಪತ್ರೆಗೆ ಹೋಗಲು ಒಪ್ಪಲಿಲ್ಲ. ಸುಬ್ಬಕೃಷ್ಣ ಬೇರೆ ದಾರಿ ಕಾಣದೆ ದಾಸರಿಗೆ ಸಮಾಚಾರ ಕಳಿಸಿ ಹೃದ್ರೋಗ ತಜ್ಞರಾದ ದೊಡ್ಡ ಡಾಕ್ಟರನ್ನೇ ಕರೆತರಲು ಆಸ್ಪತ್ರೆಗೆ ಓಡಿದ. ಸಾಯಂಕಾಲದ ಹೊತ್ತಿಗೆ ಬಿಡುವು ಮಾಡಿಕೊಂಡ ಬಂದ ದೊಡ್ಡ ಡಾಕ್ಟರು ವೆಂಕಮ್ಮನವರ ದೇಹಸ್ಥಿತಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಸ್ಟೆತಾಸ್ಕೋಪನ್ನು ಕಿವಿ ಯಿಂದ ತೆಗೆಯುತ್ತಲೇ ಅವರ ಮುಖ ಗಂಭೀರವಾಯಿತು.

" ಈಕೆಗೆ ಎಷ್ಟು ದಿವಸದಿಂದ ಈ ಕಾಹಿಲೆಯಿತ್ತು ?"

ಸುಬ್ಬಕೃಷ್ಣನಿಗೆ ಆಶ್ಚರ್ಯವಾಯಿತು. ವೆಂಕಮ್ಮನವರಿಗೆ ಅಂಥ ಪ್ರಬಲವಾದ ಕಾಹಿಲೆಯಿದೆಯೆಂದು ಅವನಿಗೆ ತಿಳಿದಿರಲಿಲ್ಲ. ಅವನು ಕಣ್ಣರಳಿಸಿ ಡಾಕ್ಟರ ಮುಖ ನೋಡಿದ.

" ಯಾವ ಕಾಹಿಲೆ ?"

ಡಾಕ್ಟರು ಅವನ ಮಾತಿಗೆ ಉತ್ತರ ಕೊಡದೆ ಅವನ ಮುಖವನ್ನು ಸಮಸ್ಯಾತ್ಮಕವಾಗಿ ನೋಡಿದರು.

" ಈಕೆಗೆ ನೀವೇನಾಗಬೇಕು ?"

"ಇವರು ನನ್ನ ಸ್ನೇಹಿತನ ತಾಯಿ. ನನ್ನ ಸ್ನೇಹಿತ ಊರಲ್ಲಿಲ್ಲ, ಮುಂಬಯಿಗೆ ಹೋಗಿದ್ದಾನೆ"

ಎಂದ. ಡಾಕ್ಟರ ಮುಖದಲ್ಲಿ ಅಸಮಾಧಾನದ ಗೆರೆಗಳು ಮೂಡಿದವು.

"ಹೃದಯ ತುಂಬ ಆಘಾತಕ್ಕೆ ಸಿಕ್ಕಿ ಜರ್ಝರಿತವಾಗಿದೆ. ಇದು ಇವೊತ್ತಿನ ಕಾಹಿಲೆಯಲ್ಲ, ವರ್ಷಾಂತರಗಳಿಂದ ಕೂಡಿ ಬಂದಿದೆ. ಈಗ ಉಲ್ಬಣಿಸಿದೆ, ಅಷ್ಟೆ. ನೀವು ಮುಂಚೆಯೇ ತಕ್ಕ ಎಚ್ಚರಿಕೆ ತೆಗೆದುಕೊಂಡಿದ್ದರೆ ಚೆನ್ನಾಗಿತ್ತು"

ಎಂದು ಹೇಳಿ ಒಂದು ಇಂಜೆಕ್ಷನ್ ಕೊಟ್ಟರು. ಮತ್ತೆ ೨೪ ಘಂಟೆಗಳ ವರೆಗೆ ಏನೂ ಹೇಳಲು ಸಾಧ್ಯವಿಲ್ಲವೆಂದು ತಿಳಿಸಿ, ಆ ಬಳಿಕ ತಾವೇ ಬಂದು ನೋಡುವುದಾಗಿಯೂ ಆ ಅವಧಿಯಲ್ಲಿ ರೋಗಿಯನ್ನು ಸ್ವಲ್ಪವೂ ಆಯಾಸ ಪಡಿಸದೆ ತುಂಬ ಜಾಗರೂಕತೆಯಿಂದ ನೋಡಿಕೊಳ್ಳುತ್ತಿರಬೇಕೆಂದೂ ಎಚ್ಚರಿಸಿದರು. ರೋಗಿಗೆ ಅನುಪಾನ ಸೂಚಿಸಿ, ಕೆಲವು ಮಾತ್ರೆಗಳನ್ನು ತರಿಸಿ ಕೊಡಲು ಬರೆದುಕೊಟ್ಟು ಹೊರಟುಹೋಗಿದ್ದರು.

ಸುಬ್ಬಕೃಷ್ಣ ಆ ಕೂಡಲೆ ಮಧುಸೂದನನಿಗೆ ಟೆಲಿಗ್ರಾಂ ಕೊಟ್ಟಿದ್ದ—

ವೆಂಕಮ್ಮನವರು ಮಾತನಾಡಲಾರದೆ ಸಂಕಟಪಡುತ್ತಿದ್ದರು. ದಾರುಣವಾಗಿದ್ದ ಹೃದಯದ ವೇದನೆಯಿಂದ ಅವರು ತತ್ತರಿಸುತ್ತಿದ್ದರು ಅವರ ಸಂಕಟವನ್ನು ಕಿತ್ತುಕೊಳ್ಳಲು ಯಾರಿಗೂ ಸಾಧ್ಯವಿರಲಿಲ್ಲ. ನರಸಕ್ಕ ಪಕ್ಕದಲ್ಲೇ ಕುಳಿತು ಗಳಿಗೆಗೊಂದು ಸಲ ಒಂದೊಂದು ಉದ್ಧರಣೆ ಹಾಲು ಹಾಕುತ್ತಿದ್ದರು. ಎರಡು ಗುಟುಕು ಗಂಟಲಲ್ಲಿಳಿದರೆ ಎರಡು ಗುಟುಕು ಹೊರಗೆ ಬರುತ್ತಿತ್ತು.

ಮಧುಸೂದನ ತಾಯ ಸಂಕಟವನ್ನು ಕಣ್ಣಿಂದ ನೋಡಲಾರದಾದ.

ಇಡೀ ರಾತ್ರಿ ಎಲ್ಲರೂ ರೆಪ್ಪೆಹಾಕದೆ ಸರ್ಪಕಾವಲಾಗಿ ಕುಳಿತಿದ್ದರು. ರಾತ್ರಿ ಒಂದು ಯುಗವಾಗಿ ಕಳೆಯಿತು.

ಬೆಳಗಿನ ಜಾವದ ಹೊತ್ತಿಗೆ ವೆಂಕಮ್ಮನವರ ಸ್ಥಿತಿ ಸ್ವಲ್ಪ ಮೇಲಾದಂತೆ ಕಂಡಿತು; ಸಂಕಟ ಕಡಮೆಯಾಗುತ್ತಿತ್ತು; ಅವರು ನಿದ್ರಿಸುತ್ತಿರುವ ಹಾಗೆ ತೋರಿತು. ರಾತ್ರಿಯಿಂದ ಕಣ್ಣು ಮುಚ್ಚದೆ ಕುಳಿತಿದ್ದವರೆಲ್ಲರನ್ನೂ ನಿದ್ದೆ ತುಯ್ಯುತ್ತಿತ್ತು. ಕುಳಿತಿದ್ದವರು ಅಲ್ಲಲ್ಲೇ ಸುರುಟಿಕೊಂಡು ನೆಲಕ್ಕೆ ಸ್ವಲ್ಪ ತಲೆ

ಕೊಟ್ಟರು. ದಾಸರು ಮಾತ್ರ ಗೋಡೆ ಒರಗಿಕೊಂಡು ಜಾಗೃತರಾಗಿಯೇ ನೋಡುತ್ತ ಕುಳಿತಿದ್ದರು.

ಬೆಳಗ್ಗೆ ಆರುಗಂಟೆಯ ಹೊತ್ತಿರಬಹುದು. ವಿಚಿತ್ರವಾದ ಸಂಕಟದಿಂದ ವೆಂಕಮ್ಮನವರ ದೇಹ ಕಂಪಿಸುತ್ತಿದ್ದುದನ್ನು ದಾಸರು ಗಮನಿಸಿದರು; ಉಸಿರು ಹತ್ತಿಹತ್ತಿ ಬರುತ್ತಿರುವುದನ್ನು ನೋಡಿದರು. ಪಕ್ಕದ ಹಾಸಿಗೆಯ ಸುರುಳಿಗೆ ತಲೆಕೊಟ್ಟು ಮಲಗಿದ್ದ ಮಧುಸೂದನನ ಮೈಯನ್ನು ಮೆಲ್ಲನೆ ಮುಟ್ಟಿ ಎಬ್ಬಿಸಿದರು.

"ಮಧೂ, ಏಳಪ್ಪಾ."

"ಹ್ಞಾ, ಏನಾಯಿತು?"

"ಏನೂ ಇಲ್ಲ. ಎಚ್ಚರ ಮಾಡಿಕೋ, ಅಮ್ಮನ ಹತ್ತಿರಕ್ಕೆ ಬಾ."

ಎಲ್ಲರೂ ಗಾಬರಿಗೊಂಡು ಧಿಗ್ಗನೆ ಎದ್ದು ಕುಳಿತರು. ಮಧುಸೂದನನ ಮೈಯಲ್ಲಿ ನಡುಕವುಂಟಾಯಿತು.

"ಅಮ್ಮಾ!"

ಎಂದು ಕೂಗುತ್ತ ಅವರ ಮುಖದ ಮೇಲೆ ಕೈಯಿಟ್ಟ.

ವೆಂಕಮ್ಮನವರು ನಿಧಾನವಾಗಿ ಕಣ್ಣು ಬಿಟ್ಟು ನೋಡಿದರು. ಅವರ ಮನಸ್ಸಿನ ಮಬ್ಬೆಲ್ಲವೂ ಬಗೆಹರಿದಂತಿತ್ತು; ಮಗ ಹತ್ತಿರ ಕುಳಿತಿದ್ದುದನ್ನು ನೋಡಿ ಅವರ ಮುಖದ ಮೇಲೆ ತೃಪ್ತಿ ಸುಳಿಯಿತು; ನಿಸ್ತೇಜಕವಾದ ನಗು ಅವರ ತುಟಿಯಂಚಿನಲ್ಲಿ ಕಾಣಿಸಿಕೊಂಡಿತು; ತಡವರಿಸುತ್ತ ಮೆಲ್ಲನೆ ಅವನ ಕೈ ಹಿಡಿದುಕೊಂಡರು. ಏನನ್ನೋ ಹೇಳಲೆತ್ನಿಸುವಂತೆ ತುಟಿ ಅಲುಗಿತು. ಅವರ ಮನಸ್ಸು ಏನೋ ನುಡಿಯುವುದಕ್ಕೆ ತವಕಿಸುತ್ತಿತ್ತು. ಮಧುಸೂದನ ತಾಯಿಯ ಮುಖದ ಹತ್ತಿರ ಕಿವಿಯಿಟ್ಟು ಆಲಿಸಿದ. ಅವರ ಬಾಯಿಂದ ಮಾತು ತೊದಲು ತೊದಲಾಗಿ ಹೊರಡುವ ಹಾಗೆ ಭಾಸವಾಯಿತು.

"ಮಗೂ, ಲ....ಲಿ....ತ, ಲ....ಲಿ....ತ"

ಎಂದು ನುಡಿದು ತಾವು ಭದ್ರವಾಗಿ ಹಿಡಿದುಕೊಂಡಿದ್ದ ಮಗನ ಒಂದು ಹಸ್ತವನ್ನು ಅವನ ಇನ್ನೊಂದು ಹಸ್ತಕ್ಕೆ ನಿಧಾನವಾಗಿ ಕೂಡಿಸಿದರು. ಕಣ್ಣಿಂದ ನೀರು ಉಕ್ಕಿ ಹರಿಯಿತು. ಮಧುಸೂದನನಿಗೆ ಕುತ್ತಿಗೆಯ ಸೆಲೆ ಉಬ್ಬಿ ಬಂದಿತು. ದುಃಖವನ್ನು ತಡೆಯಲಾರದೆ ತಾಯಿಯ ಎದೆಯ ಮೇಲೆ ತಲೆಯಿಟ್ಟ.

ಮಗನ ತಲೆಯ ಮೇಲೆ ಕೈಯಿಟ್ಟ ಹಾಗೆಯೇ ವೆಂಕಮ್ಮನವರು ಎರಡು ಸಲ ದೊಡ್ಡದಾಗಿ ಕಣ್ಣು ತೆಗೆದು ಸುತ್ತಲೂ ದೃಷ್ಟಿ ಹರಿಸಿದರು. ದಾಸರು, ನರಸಕ್ಕ, ಸುಬ್ಬಕೃಷ್ಣ, ಮನೆಗೆಲಸದ ಹೆಂಗಸು ಎಲ್ಲರೂ ಇದ್ದುದನ್ನು ಮನಸ್ಸು ಗ್ರಹಿಸಿತು. ದಾಸರು ಹತ್ತಿರಕ್ಕೆ ಬಂದು ಬಗ್ಗಿ ನಿಂತು,

"ಅಮ್ಮಾ, ಏನು ಬೇಕು, ತಾಯಿ?"

ಎಂದು ಕೇಳಿದರು. ವೆಂಕಮ್ಮನವರು ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಗಂಟಲಲ್ಲಿ ಬಲವಾಗಿ ಶ್ವಾಸ ಕಡೆಯಲಾರಂಭಿಸಿತು.

"ಬೇಗ ಗಂಗಾಥಾಲಿ ತೆಗೆದುಕೊಂಡು ಬಾ"

ಎಂದು ದಾಸರು ಹೆಂಡತಿಯನ್ನು ಅವಸರಿಸಿದರು. ನರಸಕ್ಕ ಅಡುಗೆ ಮನೆಗೆ ಓಡಿಹೋಗಿ ದೇವರ ಮಂದಾಸನದ ಕೆಳಗಿದ್ದ ಗಂಗಾಥಾಲಿಯನ್ನು ತಂದು ಒಡೆದು ಮುಂದಿಟ್ಟರು. ದಾಸರು ಅದರಲ್ಲಿ ಒಂದು ಉದ್ಧರಣೆ ಗಂಗಾ ಜಲ ತೆಗೆದುಕೊಂಡು ಮಧುಸೂದನನ ಕೈಗಿತ್ತರು.

"ಮಧು ಅಮ್ಮನಿಗೆ ಗಂಗಾ ಕುಡಿಸಪ್ಪಾ. ನಿನ್ನ ಋಣಾನುಬಂಧ ತೀರಿತು"

ಎಂದು ಕಷ್ಟದಿಂದ ನುಡಿದರು. ಅವರು ಅಷ್ಟು ಹೊತ್ತಿನಿಂದ ತಡೆದಿದ್ದ ದುಃಖ ಕಿತ್ತುಕೊಂಡು ಬರುತ್ತಿತ್ತು. ಆದರೂ ಸಂಯಮ ತಂದುಕೊಳ್ಳುತ್ತ ವೆಂಕಮ್ಮನವರ ಕಿವಿಯ ಹತ್ತಿರ ಮುಖವಿಟ್ಟು ಗಟ್ಟಿಯಾಗಿ ಎರಡು ಸಲ,

"ನಾರಾಯಣ, ನಾರಾಯಣ"

ಎಂದು ಉಚ್ಚರಿಸಿದರು. ನರಸಕ್ಕ ಮುಖಕ್ಕೆ ಸೆರಗು ಮುಚ್ಚಿಕೊಂಡು ರೋದಿಸುವುದಕ್ಕಾರಂಭಿಸಿದರು. ಸುಬ್ಬಕೃಷ್ಣನ ಕೆನ್ನೆಯ ಮೇಲೆ ತೆಳ್ಳಗೆ ಕಂಬನಿಯ ಕಾಲುವೆ ಹರಿಯುತ್ತಿತ್ತು. ಮನೆಗೆಲಸದಾಕೆ ದೂರ ಒಂದು ಮೂಲೆಯಲ್ಲಿ ಕುಳಿತು ಅಳುತ್ತಿದ್ದಳು. ತಾಯಿಗೆ ಗಂಗಾಜಲ ಕುಡಿಸಲು ಮಧುಸೂದನನಿಗೆ ಕೈ ಬರಲಿಲ್ಲ. ದಾಸರೇ ಅವನ ಕೈಯಿಂದ ಬಲವಂತವಾಗಿ ಒಂದು ಉದ್ಧರಣೆ ನೀರು ಹಾಕಿಸಿದರು. ಒಂದು ಗುಟುಕು ಗಂಟಲಲ್ಲಿಳಿಯಿತು; ಎರಡನೆಯ ಗುಟುಕು ಹೊರಗೇ ಬಂದುಬಿಟ್ಟಿತು. ವೆಂಕಮ್ಮನವರ ಕುತ್ತಿಗೆ ತಟಕ್ಕನೆ ಒಂದುಕಡೆ ಸೊರಗಿ ಬಿದ್ದಿತು.

"ಅಮ್ಮಾ, ಅಮ್ಮಾ"

ಎಂದು ಮಧುಸೂದನ ಚೀರಿ ತಾಯಿಯ ಮೃತದೇಹದ ಮೇಲೆ ಉರುಳಿ ಬಿಟ್ಟ. ಅವನನ್ನು ಹಿಡಿದು ಸಂತೈಸುವುದಕ್ಕೆ ಯಾರಿಂದಲೂ ಸಾಧ್ಯವಾಗಲಿಲ್ಲ.

ಮನೆ ಗೋಳಿನಿಂದ ತುಂಬಿಹೋಯಿತು.

" ಆಗಿಹೋಯಿತು, ಆಗಿಹೋಯಿತು. ಹರಿಚಿತ್ತಕ್ಕೆ ಬರಲಿಲ್ಲ "

ಎಂದು ದಾಸರು ಒಂದೇ ಸಮನಾಗಿ ಹಲುಬುತ್ತ ವಿಷಣ್ಣವದನರಾಗಿ ಕುಳಿತುಬಿಟ್ಟರು.

ಮಧುಸೂದನ ತಾಯಿಯ ದೇಹವನ್ನು ಅಪ್ಪಿದ್ದುದನ್ನು ನೋಡಿ ಸುಬ್ಬಕೃಷ್ಣ ಅವನ ಭುಜ ಹಿಡಿದು ಮೆಲ್ಲನೆ ಎತ್ತಿ ಅವನನ್ನು ತನ್ನ ಮೈಗೊರಗಿಸಿ ಕುಳ್ಳಿರಿಸಿಕೊಂಡ. ಮಧುಸೂದನನ ಕಣ್ಣಲ್ಲಿ ಹರಿಯುತ್ತಿದ್ದ ನೀರು ಆರಿ ಹೋಗಿತ್ತು. ಅವನು ದಿಗ್ಭ್ರಾಂತನಾಗಿ ನೆಟ್ಟದಿಟ್ಟಿಯಿಂದ ತಾಯಿಯ ಕಳೇಬರವನ್ನೇ ನೋಡುತ್ತ ಕುಳಿತ. ಕಂಬನಿ ರೋದನಗಳ ಸ್ಥಿತಿಯನ್ನು ಮೀರಿದ ಭಯಂಕರವಾದ ಆ ಮೂಕಶೋಕವನ್ನು ಕಂಡು ಉಳಿದವರು ದುಃಖ ವಿಹ್ವಲರಾದರು.

ಮನೆಯನ್ನು ಶ್ಮಶಾನ ಮೌನ ಆವರಿಸಿತು.

ಹಗಲಿನಲ್ಲಿ ಭಿಕ್ಷೆಗಾಗಿ ಹೊರಟಿದ್ದ ಯಾವನೋ ಒಬ್ಬ ಪರದೇಶಿ ಏಕನಾದ ಮೀಟುತ್ತ ಮನೆಯ ಮುಂದೆ ಬಂದು ನಿಂತು, ಒಳಗೆ ನಡೆದಿರುವ ಅನರ್ಥದ ಅರಿವು ಸ್ವಲ್ಪವೂ ಇಲ್ಲದಂತೆ ತನ್ನ ಪಾಡಿಗೆ ತಾನು ನಿಶ್ಚಿಂತೆಯಿಂದ ಹಾಡುತ್ತಿದ್ದ.

## ಮುಂದಿನ ಪ್ರಕಟನೆಗಳು

# ಬಂಗಾರದ ಜಿಂಕೆಯ ಹಿಂದೆ

(‘ನಾನು ಪೋಲೀಸನಾಗಿದ್ದೆ’ - ಕಾದಂಬರಿಯ ಎರಡನೆಯ ಭಾಗ)

ಶ್ರೀ ಬಸವರಾಜ ಕಟ್ಟೀಮನಿಯವರ ಕಾದಂಬರಿ



# ಪ್ರೋಲಿ ಪಟಾಲಂ

ಶ್ರೀ ದೇವುಡುರವರ ಕಾದಂಬರಿ



# ಬಣ್ಣದ ಮಾಲಿಂಗ

ಶ್ರೀ ಕುಮಾರ ವೆಂಕಣ್ಣನವರ ಕಾದಂಬರಿ



# ಗ್ಯಾಲಿಯ ಗುಲಾಮ

ಶ್ರೀ ತ. ರಾ. ಸು. ರವರ ಕಾದಂಬರಿ



# ಕಾಂಚನ-ಗಂಗಾ

(‘ಕಾಮಿನಿ - ಕಾಂಚನ’ದ ಎರಡನೆಯ ಭಾಗ)

ಶ್ರೀ ಅ. ನ. ಕೃರವರ ಕಾದಂಬರಿ